# ರುರು-ಪ್ರಮದ್ವರರು



ಅನೇಕ ಸಾವಿರ ವರ್ಷಗಳ ಕೆಳಗೆ ಸಿಂಧು, ಸರಸ್ವತೀ ನದೀ ಪ್ರಾಂತಗಳಲ್ಲಿ ದೊಡ್ಡದೊಂದು ನಾಗರಿಕತೆ ಬೆಳಗಿತ್ತು. ಆಗಿನ ಜನರು ಪ್ರಕೃತಿಯೊಂದಿಗೂ, ದೇವತೆಗಳೊಂದಿಗೂ ಸನ್ನಿಹಿತರಾಗಿ ಜೀವಿಸಿದರು.



ಅವರಲ್ಲಿ ವೇದಕರ್ತರಾದ ಋಷಿಗಳೂ ಇದ್ದರು. ಅವರು ಸುಖಜೀವನವನ್ನೂ, ದೀರ್ಘಾಯುವನ್ನೂ ಬಯಸಿ, ಜನನ ಮರಣಗಳನ್ನು ಕುರಿತು, ಜನ್ಮ ರಹಸ್ಯವನ್ನು ಕುರಿತು ತುಂಬಾ ಆಲೋಚನೆ ಮಾಡಿದರು. ರುರು ಎಂಬ ಯುವಕ ಆ ಕಾಲದವನು.



ರುರು ಒಬ್ಬ ಋಷಿಯ ಕುಮಾರ. ಆ ಋಷಿ ಪ್ರಮದ್ವರ ಎಂಬ ಗಂಧರ್ವ ಕನ್ಯೆಯನ್ನು ಬೆಳೆಯಿಸಿಕೊಂಡಿದ್ದನು. ರುರು-ಪ್ರಮದ್ವರರು ಅರಣ್ಯಗಳಲ್ಲಿಯೂ, ನದೀ ತೀರದಲ್ಲಿಯೂ ಸ್ವೇಚ್ಛೆಯಿಂದ ಸಂತೋಷದಿಂದ ಆಟವಾಡುತ್ತ ವಿಹರಿಸುತ್ತಿದ್ದರು.



ಅವರಿಗೆ ಯುಕ್ತವಯಸ್ಸು ಬಂದ ಮೇಲೆ ಇಬ್ಬರಿಗೂ ಮದುವೆ ನಿಶ್ಚಯವಾಯಿತು. ಮದುವೆಯ ಮುಂಚಿನ ದಿನ ರುರು ಅರಣ್ಯಕ್ಕೆ ಹೋಗಿ ಪ್ರಮದ್ವರೆಗಾಗಿ ಹೂವುಗಳನ್ನು ಕೊಯಿದುಕೊಂಡು ಬಂದನು. ಅವನು ಹಿಂದಿರುಗಿ ಬರುವುದನ್ನು ಪ್ರಮದ್ವರ ನೋಡಿದಳು.



ಆಕಸ್ಮಿಕವಾಗಿ ಒಂದು ಸರ್ಪ ಪ್ರಮದ್ವರೆಯನ್ನು ಕಡಿದು ಓಡಿಹೋಯಿತು. ಅವಳ ಮುಖವು ವಿವರ್ಣವಾಗುವುದನ್ನು ನೋಡಿ ರುರು ಓಡಿ ಬಂದು ಬೀಳುವವಳನ್ನು ಹಿಡಿದನು.



ಪ್ರಮದ್ವರ ಕೂಡಲೇ ಸಾಯಲಿಲ್ಲ. ಅವನ ಕರೆಯನ್ನು ಕೇಳಿ ಕಣ್ಣು ತೆರೆದಳು. ಆದರೆ ಅವಳ ಕಂಠವು ಬಲಹೀನವಾಗಿಹೋಯಿತು. ಕಣ್ಣು ಮುಚ್ಚಿಕೊಂಡುವು.

ಹಳ್ಳಿಗಳಲ್ಲಿರುವ ಸ್ತ್ರೀಯರು ಬಂದು ಪ್ರಮದ್ವರೆಯ ಮೃತದೇಹವನ್ನು ತೆಗೆದುಕೊಂಡು ಹೋದರು. ರುರು ಬಹಳ ಹೊತ್ತು ಒಬ್ಬನೇ ಸ್ತಬ್ಧನಾಗಿ ಕುಳಿತನು. ತನ್ನನ್ನು ಪ್ರಮದ್ವರೆಯಿಂದ ಅಗಲಿಸಿದ ಮೃತ್ಯು ಯಾವುದು ?





ರುರು ತನ್ನ ವಿಧಿಯನ್ನು ಹಳಿಯುತ್ತ ಅನೇಕ ದಿನಗಳವರೆಗೆ ಅಡವಡವಿ ತಿರುಗಿದನು. ಅವನಿಗೆ ಸಮಾಧಾನ ಹೇಳುವ ಸಾಹಸ ಯಾರಿಗೂ ಬರಲಿಲ್ಲ. ಅವನೆಲ್ಲಿ ಶಪಿಸಿ ಬಿಡುವನೋ ಎಂದು ಎಲ್ಲರೂ ಅವನನ್ನು ಮಾತಾಡಿಸಲು ಹೆದರಿದರು.

ಕಟ್ಟಕಡೆಗೆ ಮನ್ಮಥನು ಅವನ ಎದುರು ಪ್ರತ್ಯಕ್ಷನಾಗಿ, ಯಮಲೋಕಕ್ಕೆ ಹೋಗುವ ಮಾರ್ಗವನ್ನು ರುರುವಿಗೆ ತಿಳಿಸಿದನು.





ಹಾಗೆಯೇ ರುರು ಯಮಲೋಕಕ್ಕೆ ಹೋದನು. ಆ ಲೋಕದಲ್ಲಿರುವ ಭಯಂಕರ ಯಮಕಿಂಕರರನ್ನು ಲಕ್ಷ್ಯಮಾಡದೆ ಅವನು ನೆಟ್ಟಗೆ ಯಮನ ಬಳಿಗೇ ಹೋದನು.



ಆದರೆ ಯಮನು ಅವನ ಪ್ರಾರ್ಥನೆಗೂ, ಲಂಚಗಳಿಗೂ ಬಗ್ಗಲಿಲ್ಲ. ರುರು ತನ್ನ ಆಯುಸ್ಸಿನಲ್ಲಿ ಅರ್ಧಭಾಗ ಧಾರೆಯೆರೆದ ಹೊರತು ಪ್ರಮದ್ವರ ಬದುಕುವುದಿಲ್ಲವೆಂದಾಯಿತು. ರುರು ನಿಃಸಂಕೋಚವಾಗಿ ತನ್ನ ಅರ್ಧಾಯುಷ್ಯವನ್ನು ಅವಳಿಗೆ ಧಾರೆ ಎರೆದನು.



ಮರುಕ್ಷಣ ರುರು ಭೂಮಿಯ ಮೇಲೆ ಪ್ರಮದ್ವರೆಯ ಬಳಿಯಲ್ಲೇ ಇದ್ದನು. ಇಬ್ಬರೂ ನಿದ್ರೆಯಿಂದ ಎದ್ದವರಂತಿದ್ದರು. ಅವರ ವಿವಾಹಕ್ಕೆ ಅನೇಕಮಂದಿ ಋಷಿಗಳು ಬಂದು ಆಶೀರ್ವಾದ ಮಾಡಿದರು.

# ಗಂಗಾವತರಣ

ಅಯೋಧ್ಯೆಯನ್ನು ಪಾಲಿಸಿಕೊಂಡಿದ್ದ ಸಗರನಿಗೆ ಕೇಶಿನಿ ಮತ್ತು ಸುಮತಿ ಎಂಬ ಇಬ್ಬರು ಹೆಂಡತಿಯರು. ಮಕ್ಕಳಿಗಾಗಿ ಸಗರನು ತನ್ನ ಹೆಂಡತಿಯರೊಂದಿಗೆ ಹಿಮಾಲಯದಲ್ಲಿ ತಪಸ್ಸು ಮಾಡಿದನು.





ಅದರ ಫಲಿತವಾಗಿ ಕೇಶಿನಿಗೆ ಅಸಮಂಜಸನೆಂಬ ಮಗನು ಹುಟ್ಟಿದನು. ಸುಮತಿ ಒಂದು ಪಿಂಡವನ್ನು ಪ್ರಸವಿಸಿದಳು. ಅದು ಒಡೆದು ಅದರಿಂದ ಸಾವಿರ ಮಂದಿ ಕುಮಾರರು ಹುಟ್ಟಿದರು.



ಸಗರನು ಅಶ್ವಮೇಧಯಾಗಕ್ಕೆ ತೊಡಗಿ, ಕುದುರೆಯನ್ನು ಸ್ವೇಚ್ಛೆಯಾಗಿ ಬಿಟ್ಟನು. ಸಗರನ ಅಧಿಕೃತೆಗೆ ಕರುಬಿದ ದೇವೇಂದ್ರನು ಯಾಗಾಶ್ವವನ್ನು ಕದ್ದುಕೊಂಡು ಹೋಗಿ, ಪಾತಾಳದಲ್ಲಿ ಕಪಿಲನ ಆಶ್ರಮದಲ್ಲಿ ಅಡಗಿಸಿಟ್ಟನು.



ತನ್ನ ಕುದುರೆ ಕಾಣದೆ ಹೋದುದನ್ನು ತಿಳಿದು ಸಗರನು ಅದನ್ನು ಹುಡುಕಿ ತರಲು ಸಾವಿರ ಮಂದಿ ಕುಮಾರರನ್ನು ಕಳುಹಿಸಿದನು. ಅವರು ಎಲ್ಲಾ ದಿಕ್ಕುಗಳಲ್ಲಿ ಹುಡುಕಿದರೂ ಕುದುರೆಯ ಜಾಡು ತಿಳಿಯಲಿಲ್ಲ.



ಕಡೆಗೆ ಅವರು ಭೂಮಿಯನ್ನು ಅಗೆದು ಪಾತಾಳವನ್ನು ಸೇರಿ, ಅಲ್ಲಿರುವ ಕುದುರೆಯನ್ನು ನೋಡಿದರು. ಅವರು ಕುದುರೆಯನ್ನು ತೆಗೆದುಕೊಳ್ಳಲು ನೋಡುವಾಗ, ಕಪಿಲನು ತನ್ನ ನೋಟದಿಂದ ಅವರನ್ನು ಭಸ್ಮಮಾಡಿಬಿಟ್ಟನು.



ಬಹಳ ಕಾಲ ಕಳೆಯಿತು. ತನ್ನ ಮಗಂದಿರ ಸುದ್ದಿ ತಿಳಿದುಕೊಂಡು ಬರಲು ಸಗರನು ಅಸಮಂಜಸನ ಮಗನಾದ ಅಂಶುಮಂತನನ್ನು ಕಳುಹಿಸಿದನು. ಅಂಶುಮಂತನು ಪಾತಾಳಕ್ಕೆ ಹೋಗಿ ಕಪಿಲನನ್ನು ಮೆಚ್ಚಿಸಿ ಕುದುರೆಯನ್ನು ತಂದನು. ಆದರೆ ಬೂದಿಯಾಗಿಹೋದ ಸಗರನ ಮಗಂದಿರನ್ನು ಸದ್ಗತಿಗೊಳಿಸಲು ಅವನಿಂದಾಗಲಿಲ್ಲ. ಅದಕ್ಕಾಗಿ ದೇವಲೋಕದಿಂದ ಗಂಗೆಯನ್ನು ಭೂಲೋಕಕ್ಕೆ ತರಬೇಕಾಗಿತ್ತು.

ಆ ಕೆಲಸ ಮಾಡಲು ಅಂಶುಮಂತನ ಮಗ ದಿಲೀಪನು ಪ್ರಯತ್ನಿಸಿದನು. ಅವನಿಂದ ಅದು ಸಾಧ್ಯವಾಗಲಿಲ್ಲ. ದಿಲೀಪನ ಮಗ ಭಗೀರಥನು ದೀರ್ಘಕಾಲ ತಪಸ್ಸು ಮಾಡಿ, ಗಂಗೆಯನ್ನು ಭೂಮಿಗೆ ತರುವವನಾಗುವಂತೆ ಬ್ರಹ್ಮನಿಂದ ವರವನ್ನು ಪಡೆದನು.





ಆದರೆ ಮಹಾಶಕ್ತಿಯ ಗಂಗಾ ಪ್ರವಾಹವು ಬೀಳುವ ಪೆಟ್ಟನ್ನು ಭೂಮಿ ತಾಳಲಾರದು. ಅದನ್ನು ತಾಳಬಲ್ಲವನು ಶಿವನೊಬ್ಬನೇ. ಭಗೀರಥನು ಶಿವನನ್ನು ಪ್ರಾರ್ಥಿಸಿ ಅವನ ಸಹಾಯವನ್ನು ಸಂಪಾದಿಸಿದನು.

ಹಿಮಾಲಯಪರ್ವತದಲ್ಲಿ ಶಿವನು ಗಂಗೆಯನ್ನು ಸ್ವೀಕರಿಸಲು ಗಟ್ಟಿಯಾಗಿ ನಿಂತನು. ಗಂಗೆ ಅವನ ಜಟಾಜೂಟದ ಮೇಲೆ ಬಂದು ಬಿದ್ದಳು. ಅಲ್ಲಿ ತನ್ನ ನೀರಿನ ವೇಗ ತಗ್ಗಿದ ಮೇಲೆ ನೆಲದ ಮೇಲಕ್ಕೆ ಇಳಿದಳು ಗಂಗೆ.





ಭೂಮಿಗಿಳಿದ ಗಂಗೆ ಉಲ್ಲಾಸದಿಂದ ಗುಡ್ಡಬೆಟ್ಟಗಳನ್ನಿಳಿದು ಓಡುತ್ತಾ, ಜಹ್ನುಮಹಾಮುನಿಯ ಆಶ್ರಮದೊಳಗೆ ಹೊಕ್ಕು ಅವನ ಅಗ್ನಿಹೋತ್ರವನ್ನು ಆರಿಸಿದಳು.

ಜಹ್ನುಮಹಾಮುನಿ ಕೋಪದಿಂದ ಗಂಗಾ ಜಲವನ್ನು ಪೂರ್ತಿಯಾಗಿ ಕುಡಿದುಬಿಟ್ಟನು. ಭಗೀರಥನು ಬಂದು ಬೇಡಿಕೊಂಡ ಮೇಲೆ, ಅವನು ತನ್ನ ಕಿವಿಯ ಮೂಲಕ ಗಂಗೆಯನ್ನು ಹೊರಗೆ ಬಿಟ್ಟನು. ಆ ವಿಧವಾಗಿ ಗಂಗೆಗೆ 'ಜಾಹ್ನವಿ' ಎಂಬ ಹೆಸರು ಬಂತು.





ಕಟ್ಟಕಡೆಗೆ ಗಂಗೆ ಭಗೀರಥನ ಹಿಂದೆ ಸಮುದ್ರ ಸೇರಿ, ಪಾತಾಳಕ್ಕಿಳಿದು, ದೀರ್ಘಕಾಲದಿಂದ ಬೂದಿಯಾಗಿ ಬಿದ್ದಿದ್ದ ಸಗರಪುತ್ರರ ಮೇಲೆ ಪ್ರವಹಿಸಿ, ಅವರಿಗೆ ಸದ್ಗತಿ ಬರುವಂತೆ ಮಾಡಿದಳು. ಭಗೀರಥನ ಆಶಯ ನೆರವೇರಿತು.

# ರಾಕ್ಷಸನಾದ ರಾಜ



ಅನೇಕ ಸಾವಿರ ವರ್ಷಗಳ ಕೆಳಗೆ ಸೌದಾಸ ನೆಂಬ ರಾಜನು ಅರಣ್ಯ ಮಾರ್ಗದಲ್ಲಿ ನಡೆಯು ತ್ತಿರುವಾಗ, ಶಕ್ತಿ ಎಂಬ ಯುವಕ ತಪಸ್ವಿ ಇದಿರಾದನು.



"ನಾನು ರಾಜ, ನನಗೆ ದಾರಿ ಬಿಡು" ಎಂದ ಸೌದಾಸ. ಒಬ್ಬ ತಪಸ್ವಿಗೆ ನೀನೇ ದಾರಿ ಬಿಡ ಬಾರದೇನು ?" ಎಂದು ಶಕ್ತಿ ಕೇಳಿದ. ರಾಜನು ಕೋಪದಿಂದ ತಪಸ್ವಿಯನ್ನು ಹೊಡೆದ.



"ನಿನ್ನಂಥವನು ರಾಜನಾಗುವುದು ಬಿಟ್ಟು ಮನುಷ್ಯನಾಗಿರಲಿಕ್ಕೂ ಯೋಗ್ಯನಲ್ಲ. ರಾಕ್ಷಸ ನಾಗು" ಎಂದು ಶಕ್ತಿ ಸೌದಾಸನಿಗೆ ಶಪಿಸಿದ.



ಮರದ ಮೇಲಿದ್ದ ಒಂದು ಬ್ರಹ್ಮರಾಕ್ಷಸವು ತಪಸ್ವಿಯ ಶಾಪವಾಕ್ಯವನ್ನು ಕೇಳಿ ರಾಜನನ್ನು ಆವಹಿಸಿಕೊಂಡಿತು. ಅದನ್ನು ತಡೆಯಲು ರಾಜನಿಂದಾಗಲಿಲ್ಲ.



ರಾಜನು ಭಯದಿಂದ ಓಡತೊಡಗಿದ. ಅವನ ಮುಖವು ಭಯಂಕರವಾಗಿ ಬದಲಾವಣೆಗೊಂಡಿತು. ಅರಣ್ಯ ಮಧ್ಯದಲ್ಲಿ ಒಂದು ಕುಟೀರ ಸೇರುವಾಗ ಅವನು ಪೂರ್ತಿ ರಾಕ್ಷಸನಾದ.



ಆ ಕುಟೀರವು ಮತ್ತಾರದೂ ಅಲ್ಲ, ಶಕ್ತಿಯದೇ. ಭಯಂಕರ ರಾಕ್ಷಸನಾದ ಸೌದಾಸನು ಶಕ್ತಿಯನ್ನು ಹಿಡಿದು ನುಂಗಿಬಿಟ್ಟನು.



ರಾಕ್ಷಸನ ಸಿಟ್ಟು ಅಲ್ಲಿಗೆ ತೀರಲಿಲ್ಲ. ಶಕ್ತ್ರಿಗೆ ಆರಣ್ಯದಲ್ಲಿ ನೂರು ಮಂದಿ ಸಹೋದರರಿದ್ದರು. ಸೌದಾಸನು ಅವರನ್ನೆಲ್ಲಾ ಹುಡುಕಿ ಹಿಡಿದು ನುಂಗಿಬಿಟ್ಟನು.



ಶಕ್ತ್ರಿಯೂ ಅವನ ಸೋದರರೂ ವಸಿಷ್ಠನ ಕುಮಾರರು. ವಸಿಷ್ಠನು ತನ್ನ ಮಗಂದಿರ ದುರ್ಗತಿಯನ್ನು ಕೇಳಿ ತುಂಬಾ ದುಃಖಿಸಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಬಗೆದನು.



ವಸಿಷ್ಠನು ಪ್ರಾಣತ್ಯಾಗ ಮಾಡಲು ಒಂದು ನದಿಯಲ್ಲಿ ಹಾರಿದನು. ಕೂಡಲೇ ನದಿ ನೂರು ಶಾಖೆಗಳಾಗಿ ಸೀಳಿ ವಸಿಷ್ಠನು ಮುಳುಗುವಷ್ಟು ನೀರು ಎಲ್ಲಿಯೂ ಇಲ್ಲದಂತಾಯಿತು. ಆ ನದಿಯ ಹೆಸರು "ಶತದ್ರು."



ವಸಿಷ್ಠನು ಮತ್ತೊಂದು ನದಿಗೆ ಹೋಗಿ ಹಾರಿದನು. ಆಗ ಈಜಲಾಗದಂತೆ ಕೈಗಳನ್ನು ಕಟ್ಟಿಕೊಂಡಿದ್ದನು. ನದೀ ದೇವತೆ ಅವನ ಕಟ್ಟುಗಳನ್ನು ಬಿಚ್ಚಿ ಅವನನ್ನು ದಡಕ್ಕೆ ದೂಡಿ ಬಿಟ್ಟಳು. ಆ ನದಿಗೆ "ವಿಪಾಶ" ಎಂಬ ಹೆಸರು ಬಂತು.



ವಸಿಷ್ಠನು ಮನೆಗೆ ಹಿಂದಿರುಗುತ್ತ, ತನ್ನ ಹಿಂದೆ ಯಾರೋ ವೇದಪಠನ ಮಾಡುವುದನ್ನು ಕೇಳಿ ತಿರುಗಿ ನೋಡಿದನು. ಅವನ ಹಿಂದೆ ಶಕ್ತಿಯ ಹೆಂಡತಿ ಬರುತ್ತಿದ್ದಳು. ಅವಳ ಗರ್ಭದೊಳಗಿನ ಶಿಶು ವೇದಪಠನ ಮಾಡುತಿತ್ತು. ತನ್ನ ವಂಶ ಉಳಿದಿರುವುದಕ್ಕೆ ವಸಿಷ್ಠನು ಸಂತೋಷಿಸಿದನು.



ಬೇಗದಲ್ಲೇ ರಾಕ್ಷಸನು ವಸಿಷ್ಠನನ್ನೇ ನುಂಗಲು ಬಂದನು. ವಸಿಷ್ಠನು ಅವನನ್ನು ನಿರ್ಮೂಲಿಸ ಬಲ್ಲವನಾದರೂ, ತನ್ನ ಕಮಂಡಲೋದಕವನ್ನು ಅವನ ಮೇಲೆ ಚಿಮುಕಿಸಿ ಮತ್ತೆ ಸೌದಾಸ ನಾಗುವಂತೆ ಮಾಡಿದನು.

# ದಧೀಚಿಯ ತ್ಯಾಗ



ವಿಶ್ವಕರ್ಮನ ಮಗನನ್ನು ಇಂದ್ರನು ಕೊಂದುದಕ್ಕೆ ತಕ್ಕ ಪ್ರತಿಕ್ರಿಯೆ ಮಾಡಲು ವಿಶ್ವಕರ್ಮನು ಯಜ್ಞವನ್ನು ಮಾಡಿದನು. ಆ ಯಜ್ಞಕುಂಡದಿಂದ ವೃತ್ರಾಸುರನೆಂಬ ಭಯಂಕರನೊಬ್ಬ ಹುಟ್ಟಿದ.



ಆ ವೃತ್ರಾಸುರನು ವಿಶ್ವಕರ್ಮನ ಕೋರಿಕೆ ತೀರಿಸುವುದಾಗಿ ಮಾತು ಕೊಟ್ಟು, ಬ್ರಹ್ಮನನ್ನು ಕುರಿತು ನೂರು ವರ್ಷ ಮಹಾ ತಪಸ್ಸು ಮಾಡಿದನು.



ಅವನು ಬ್ರಹ್ಮನಿಂದ ವರ ಪಡೆದುಬಿಟ್ಟರೆ ಅವನನ್ನು ಜಯಿಸಲು ಸಾಧ್ಯವಿಲ್ಲವೆಂದುಕೊಂಡು, ಇಂದ್ರನೇ ಮೊದಲಾದ ದೇವತೆಗಳು ವೃತ್ರನ ತಪಸ್ಸನ್ನು ಭಗ್ನಮಾಡಲು ಪ್ರಯತ್ನಿಸತೊಡಗಿದರು.



ಅವರು ವೃತ್ರನ ಏಕಾಗ್ರತೆಯನ್ನು ಕೆಡಿಸಲು ಅಪ್ಸರಸಿಯರನ್ನು ಕಳುಹಿಸಿದರು. ಅಪ್ಸರಸಿಯರು ಹಾಡುತ್ತ, ನಾಟ್ಯವಾಡಿ ಆಡಿ ದಣಿದರೇ ಹೊರತು ವೃತ್ರನು ಅವರಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ.



ಕಡೆಗೆ ವೃತ್ರನ ಮುಂದೆ ಬ್ರಹ್ಮನು ಪ್ರತ್ಯಕ್ಷನಾಗಿ ಏನು ವರಬೇಕೆಂದು ಕೇಳಿದನು. ತಾನು ಹಗಲಲ್ಲಾಗಲೀ, ರಾತ್ರಿಯಲ್ಲಾಗಲೀ, ಕಟ್ಟಿಗೆಯಿಂದಲೋ ಲೋಹಗಳಿಂದಲೋ ದೂಡಿದ ಆಯುಧಗಳಿಂದಾಗಲೀ, ಬೆಂಕಿಯಿಂದಾಗಲೀ ಸಾಯದಂತೆ ವರವನ್ನು ಕೇಳಿದ ವೃತ್ರ.



ಬ್ರಹ್ಮನಿಂದ ಹಾಗೆಯೇ ವರವನ್ನು ಪಡೆದ ವೃತ್ರಾಸುರನು ತನ್ನ ರಾಕ್ಷಸಬಲದೊಂದಿಗೆ ಹೋಗಿ ದೇವತೆಗಳನ್ನು ಪೀಡಿಸಲು ತೊಡಗಿದನು. ಬಹಳ ಕಾಲದವರೆಗೆ ಯುದ್ಧಗಳು ನಡೆದುವು.



ದೇವತೆಗಳು ವೃತ್ರನನ್ನು ಏನು ಮಾಡಲೂ ಸಾಧ್ಯವಿಲ್ಲದಾದರು. ದೇವತೆಗಳೊಬ್ಬೊಬ್ಬರೇ ವೃತ್ರನನ್ನು ನೋಡಿ ಹೆದರಿ . ಓಡಿಹೋಗ ತೊಡಗಿದರು. ಕಡೆಗೆ ಇಂದ್ರನು ಒಬ್ಬಂಟಿಗನಾಗಿ ವೃತ್ರನೊಂದಿಗೆ ಹೋರಾಡುವಾಗ, ವೃತ್ರನು ಇಂದ್ರನನ್ನು ಹಿಡಿದು ನುಂಗಿದನು.



ದೇವತೆಗಳು ತಮ್ಮ ಗುರುವಾದ ಬೃಹಸ್ಪತಿ ಯೊಂದಿಗೆ ತಮಗೆ ಬಂದ ಕಷ್ಟವನ್ನು ಹೇಳಿ ಕೊಂಡರು. ಬೃಹಸ್ಪತಿ ವಿಚಿತ್ರವಾದ ಆಕಳಿಕೆ ಯನ್ನು ಸೃಷ್ಟಿಸಿದನು.



ಮಾಯಾ ರೂಪದ ಆಕಳಿಕೆ ವೃತ್ರನನ್ನು ಆವಹಿಸಿ ಕೊಂಡಳು. ವೃತ್ರನು ದೊಡ್ಡದಾಗಿ ಆಕಳಿಸು ವಾಗ ಇಂದ್ರನು ಹೊರಬಿದ್ದನು.



ವೃತ್ರನು ಯಾವ ಬಗೆಯ ಆಯುಧದಿಂದಾಗಲೀ ಬೆಂಕಿಯಿಂದಾಗಲೀ ಸಾಯಲಾರ. ಯಾವನಾದರೂ ಮಹರ್ಷಿಯ ಎಲುಬಿನ ಸಹಾಯದಿಂದ ಇಂದ್ರನನ್ನು ಕೊಲ್ಲಬಹುದೆಂದು ತಿಳಿದು ಇಂದ್ರನು ದಧೀಚಿಯ ಬಳಿಗೆ ಹೋಗಿ ಸಂಗತಿಯನ್ನು ಹೇಳಿದನು.



ದಧೀಚಿಗೆ ಇಂದ್ರನ ಮೇಲೆ ಆದರವಿಲ್ಲದಿದ್ದರೂ, ಲೋಕಕಂಟಕನಾದ ವೃತ್ರನು ಸಾಯುವುದೇ ಬೇಕಿತ್ತು. ಅದಕ್ಕಾಗಿ ಅವನು ಸಮಾಧಿ ಹೊಂದಿ ದೇಹವನ್ನು ತ್ಯಾಗ ಮಾಡಿದನು.



ಇಂದ್ರನು ದಧೀಚಿಯ ಎಲುಬಿನಿಂದ ವಜ್ರಾಯುಧವನ್ನು ಮಾಡಿ, ಹಗಲು ರಾತ್ರಿಗಳಲ್ಲದ ಸಂಧ್ಯೆಯ ವೇಳೆಯಲ್ಲಿ ವೃತ್ರಾಸುರನನ್ನು ಹೊಡೆದುಕೊಂಡನು. ಹೀಗೆ ಲೋಕಕ್ಷೇಮಕ್ಕಾಗಿ ನಡೆಯಿತು ದಧೀಚಿಯ ತ್ಯಾಗ.



# ನಿಜವಾದ ಸುಳ್ಳು

ಶರ್ಯಾತಿ ವಂಶದಲ್ಲಿ ಹುಟ್ಟಿದ ವತ್ಸರಾಜ ವೀತಹವ್ಯನಿಗೆ ನೂರು ಜನ ಕುಮಾರರು. ಅವನು ತನ್ನ ಕುಮಾರರೊಂದಿಗೆ ಭೂಮಿಯ ನ್ನೆಲ್ಲಾ ಜಯಿಸಲು ಹೊರಟನು.

ಅವರು ಕಾಶೀರಾಜನ ಮೇಲೆ ದಾಳಿಮಾಡಿ, ಕಾಶೀರಾಜನಾದ ಹರ್ಯಶ್ವನನ್ನೂ, ಅವನ ಮಗ ಸುದೇವನನ್ನೂ ಕೊಂದರು. ಸುದೇವನ ಮಗ ದಿವೋದಾಸನು ತಪ್ಪಿಸಿಕೊಂಡು ಓಡಿ ಹೋದನು.





ದಿವೋದಾಸನು ಮತ್ತೊಂದು ರಾಜಧಾನಿಯನ್ನು ನಿರ್ಮಿಸಿಕೊಂಡುದನ್ನು ತಿಳಿದು, ವೀತಹವ್ಯನ ಮಗಂದಿರು ಅದನ್ನು ನಾಶಮಾಡಿ, ದಿವೋದಾಸನನ್ನು ಓಡಿಸಿಕೊಂಡು ಹೋದರು.



ಕಡೆಗೆ ದಿವೋದಾಸನು ಪತ್ನೀಸಹಿತನಾಗಿ ಭರದ್ವಾಜಋಷಿಯ ಆಶ್ರಮದಲ್ಲಿ ತಲೆಮರೆಸಿಕೊಂಡನು. ತನ್ನವರೆಲ್ಲಾ ತೀರಿಹೋಗಿ, ತನಗೆ ವಂಶಾಂಕುರವೂ ಹೋಯಿತೆಂದು ದಿವೋದಾಸನು ತುಂಬಾ ಚಿಂತಿಸಿದನು.



ದಿವೋದಾಸನಿಗೆ ಪುತ್ರೋದಯವಾಗಿ, ವಂಶವು ನಿಲ್ಲಲಿಕ್ಕಾಗಿ ಯಜ್ಞಮಾಡುವಂತೆ ಭರದ್ವಾಜನು ಆಲೋಚನೆ ಹೇಳಿದನು.



ಹಾಗೆ ಮಾಡಿದ ಯಜ್ಞದ ಫಲವಾಗಿ ದಿವೋದಾಸನಿಗೆ ಒಬ್ಬ ಕುಮಾರನು ಹುಟ್ಟಿದನು. ಆವನಿಗೆ ಪ್ರತರ್ದನನೆಂದು ಹೆಸರಿಟ್ಟರು. ಅವನು ಪರಾಕ್ರಮವಂತನಾಗಿ ಬೆಳೆದನು.

ಪ್ರತರ್ದನನು ಕ್ಷತ್ರಿಯೋಚಿತವಾದ ಎಲ್ಲಾ ವಿದ್ಯೆಗಳಲ್ಲಿಯೂ ಒಳ್ಳೆಯ ಪ್ರವೀಣನಾದನು.











ಒಂದು ದಿನ ದಿವೋದಾಸನು ಪ್ರತರ್ದನನೊಂದಿಗೆ ತನಗೆ ಉಂಟಾದ ಪರಾಭವವನ್ನೆಲ್ಲಾ ಹೇಳಿ "ಅಪ್ಪಾ, ನನಗಾಗಿಯಾದರೂ ನೀನು ಹಗೆ ತೀರಿಸಿಕೊಳ್ಳಬೇಕು" ಎಂದನು.

ಪ್ರತರ್ದನನು ಕಾಲಕ್ರಮದಲ್ಲಿ ಸೇನೆಯನ್ನು ಕೂಡಿಸಿ, ವೀತಹವ್ಯನು ಇದಿರುನೋಡದಿರುವ ಹೊತ್ತು ನೋಡಿ ಅವನ ರಾಜ್ಯದ ಮೇಲೆ ಬಿದ್ದನು. ವೀತಹವ್ಯನ ನೂರು ಮಂದಿ ಕುಮಾರರೂ ಯುದ್ಧದಲ್ಲಿ ಸತ್ತರು. ವೀತಹವ್ಯನು ಓಡಿಹೋದನು.









ಹಾಗೆ ಓಡಿದ ವೀತಹವ್ಯನು ಭೃಗುಮಹರ್ಷಿಯ ಆಶ್ರಮದಲ್ಲಿ ಅಡಗಿ ಕುಳಿತನು. ಭೃಗು ಅವನಿಗೆ ತತ್ತ್ವೋಪದೇಶ ಮಾಡಿ ತಪಸ್ಸು ಮಾಡಲು ಪ್ರೇರೇಪಿಸಿದನು.



ವೀತಹವ್ಯನನ್ನು ಕೊಲ್ಲಬೇಕೆಂದು ದೃಢಸಂಕಲ್ಪದಿಂದ ಪ್ರತರ್ದನನು ಭೃಗುವಿನ ಆಶ್ರಮಕ್ಕೆ ಬಂದು, "ನಿಜವಾದ ಕ್ಷತ್ರಿಯನಾದರೆ ವೀತಹವ್ಯನು ನನ್ನೊಂದಿಗೆ ಯುದ್ಧ ಮಾಡಲಿ !" ಎಂದು ಭೃಗುವಿನೊಂದಿಗೆ ಹೇಳಿದನು. "ಇಲ್ಲಿರುವವರೆಲ್ಲಾ ಬ್ರಾಹ್ಮಣರೇ, ಕ್ಷತ್ರಿಯರಾರೂ ಇಲ್ಲ !" ಎಂದನು ಭೃಗು.



ಭೃಗು ಸುಳ್ಳು ಹೇಳುವನೆಂದು ಪ್ರತರ್ದನನು ನಂಬಲಾರದೆ ಹೋದನು. ಅವನು ವೀತಹವ್ಯನನ್ನು ನೋಡಿದ ಕೂಡಲೇ ಅವನು ಪೂರ್ತಿ ಬ್ರಾಹ್ಮಣನಾಗಿ ಬದಲಾಯಿಸಿದ್ದಾನೆಂದು ಸ್ಪಷ್ಟವಾಯಿತು. ಕ್ಷತ್ರಿಯನು ಬ್ರಾಹ್ಮಣನಾಗಿ ಬದಲಾಯಿಸಿದ್ದನು !



# ಉದಂಕನ ಕಥೆ

ಉದಂಕನು ಪೈಲನ ಶಿಷ್ಯ. ತನಗೆ ಗುರುದಕ್ಷಿಣೆಯಾಗಿ ಪೌಷ್ಯನ ಹೆಂಡತಿ ಧರಿಸುವ ಕುಂಡಲಗಳನ್ನು ತಂದು ಕೊಡಬೇಕೆಂದು ವ್ರತಸ್ಥಳಾದ ಪೈಲನ ಹೆಂಡತಿಯ ಕೋರಿಕೆಯಾಗಿತ್ತು.



ಅಂತೆಯೇ ಮಾತುಕೊಟ್ಟು ಉದಂಕನು ಹೋಗಿ ಪೌಷ್ಯನ ಹೆಂಡತಿಯನ್ನು ಒಪ್ಪಿಸಿ ಅವಳ ಕುಂಡಲಗಳನ್ನು ತೆಗೆದುಕೊಂಡನು. ಆದರೆ ತಕ್ಷಕನು ಅವುಗಳನ್ನು ಅಪಹರಿಸಬಹುದೆಂದೂ. ಜಾಗರೂಕತೆಯಿಂದಿರಬೇಕೆಂದೂ ಪೌಷ್ಯನ ಹೆಂಡತಿ ಎಚ್ಚರಿಕೆ ಹೇಳಿದಳು.



ಅವಳು ಹೇಳಿದಂತೆಯೇ ಆಯಿತು. ಉದಂಕನು ತನ್ನ ಗುರುವಿನ ಆಶ್ರಮಕ್ಕೆ ಹಿಂದಿರುಗುವಾಗ, ದಾರಿಯಲ್ಲಿ ಒಂದು ಕೊಳದ ಬದಿಯಲ್ಲಿ ಕುಂಡಲಗಳನ್ನಿಟ್ಟು ಸ್ನಾನಕ್ಕಿಳಿದನು. ತಕ್ಷಕನು ಮಾನವ ರೂಪದಲ್ಲಿ ಬಂದು ಆ ಕುಂಡಲಗಳನ್ನು ಅಪಹರಿಸಿದನು. ಉದಂಕನು ಅವನ ಬೆಂಬತ್ತಿದನು.



ಉದಂಕನು ತನ್ನನ್ನು ಹಿಡಿಯುವ ಸಮಯಕ್ಕೆ ತಕ್ಷಕನು ಹಾವಿನ ರೂಪ ಧರಿಸಿ ಒಂದು ಬಿಲ ದೊಳಗೆ ಪ್ರವೇಶಿಸಿದನು.



ಉದಂಕನು ಒಂದು ಕೋಲಿನಿಂದ ಬಿಲವನ್ನು ತೋಡುತ್ತಾ ನಾಗಲೋಕಕ್ಕೆ ಹೋಗಲು ನೋಡಿದನು. ಆದರೆ ಅದು ಸಾಧ್ಯವಾಗುವ ಕೆಲಸವಲ್ಲವೆನಿಸಿತು.



ಆದುದರಿಂದ ಅವನು ಇಂದ್ರನನ್ನು ಪ್ರಾರ್ಥಿಸಿದನು. ಇಂದ್ರನು ತನ್ನ ವಜ್ರಾಯುಧದಿಂದ ನಾಗಲೋಕಕ್ಕೆ ದಾರಿ ಮಾಡಿಕೊಟ್ಟನು.

ಪಾತಾಳದಲ್ಲಿ ಉದಂಕನು ಅನೇಕ ವಿಚಿತ್ರಗಳನ್ನು ನೋಡಿದದು. ಇಬ್ಬರು ಸ್ತ್ರೀಯರು ಬಿಳುಪು ಕಪ್ಪು ಬಣ್ಣದ ಹೊಂದಿಕೆಗಳಿಂದ ಒಂದು ಬಟ್ಟೆ ನೇಯುತ್ತಿದ್ದರು. ಆ ಬಿಳುಪೇ ಹಗಲು, ಕಪ್ಪೇ ರಾತ್ರಿ.





ಮತ್ತೊಂದು ಕಡೆಯಲ್ಲಿ ಆರು ಮಂದಿ ಮನುಷ್ಯರು ಹನ್ನೆರಡು ಎಲೆಗಳಿರುವ ಚಕ್ರವನ್ನು ತಿರುಗಿಸುತ್ತಿದ್ದರು. ಆ ಮನುಷ್ಯರೇ ಋತುಗಳು. ಚಕ್ರದ ಎಲೆಗಳೇ ಹನ್ನೆರಡು ತಿಂಗಳುಗಳು.

ಉದಂಕನಿಗೆ ಸಮೀಪದಲ್ಲಿ ಒಬ್ಬ ದಿವ್ಯ ಪುರುಷನು ಕುದುರೆಯ ಮೇಲಿದ್ದನು. ಆ ದಿವ್ಯ ಪುರುಷನೇ ಇಂದ್ರ. ಉದಂಕನು ಆ ಪುರುಷನೊಂದಿಗೆ ತನ್ನ ಕುಂಡಲಗಳನ್ನು ಕೊಡಿಸುವಂತೆ ಪ್ರಾರ್ಥಿಸಿದನು.





ದಿವ್ಯ ಪುರುಷನ ಪ್ರೇರಣೆಯಿಂದ, ಕುದುರೆಯ ಬಾಯಿ ಮೂಗುಗಳಿಂದ ಅಗ್ನಿಜ್ವಾಲೆಗಳು ಹೊರಟು ನಾಗಲೋಕವನ್ನು ಸಂಕ್ಷೋಭಗೊಳಿಸಿದುವು.



ನಾಗರಿಗೆ ಪ್ರಾಣಭೀತಿಯುಂಟಾದುದನ್ನು ನೋಡಿ ನಾಗರಾಜನಾದ ತಕ್ಷಕನು ಕುಂಡಲಗಳನ್ನು ತಂದು ಉದಂಕನಿಗೆ ಹಿಂದಿರುಗಿ ಕೊಟ್ಟನು.



ಉದಂಕನು ದಿವ್ಯ ಪುರುಷನ ಕುದುರೆಯನ್ನೇ ಏರಿ ಅಲ್ಲಿಂದ ಹಿಂದಿರುಗಿ, ಗುರುಪತ್ನಿಗೆ ಆ ಕುಂಡಲಗಳನ್ನು ತಂದುಕೊಟ್ಟನು. ಅವಳು ವ್ರತವನ್ನು ಮುಗಿಸುವುದರೊಳಗೆ ಕುಂಡಲಗಳು ಬರಲಾರವೇನೋ ಎಂದು ಹೆದರಿದ್ದಳು. ಉದಂಕನು ಮಾತು ತಪ್ಪದೆ, ಅವಳ ಭಯವನ್ನು ಹೋಗಲಾಡಿಸಿದನು.

# ಮಹಿಷಾಸುರಮರ್ದಿನಿ



ಒಂದು ಕಾಲದಲ್ಲಿ ರಾಕ್ಷಸರಿಗೆಲ್ಲ ರಾಜನಾಗಿದ್ದ ಮಹಿಷಾಸುರನು, ಬೇಕೆಂದಾಗ ಭಯಂಕರವಾದ ಕೋಣವಾಗಿ ಮಾರ್ಪಡುತ್ತಿದ್ದನು. ಅವನು ಅತ್ಯಂತ ಕ್ರೂರನಾಗಿ, ಎಂಥವರಿಗೂ ಅಜೇಯನಾಗಿದ್ದನು.

ಅವನು ನೂರು ವರ್ಷಗಳ ವರೆಗೆ ದೇವತೆಗಳನ್ನು ಹಿಂಸಿಸುತ್ತ, ಕಡೆಗೆ ಅವರನ್ನು ಸ್ವರ್ಗದಿಂದಲೇ ಓಡಿಸಿದನು. ದೇವತೆಗಳು ಭೂಮಿಯಲ್ಲಿ ಅಡಗಿಕೊಂಡರು.





ಕೆಲಮಂದಿ ದೇವತೆಗಳು ಬ್ರಹ್ಮ ವಿಷ್ಣು ಮಹೇಶ್ವರರ ಬಳಿಗೆ ಹೋಗಿ ಮಹಿಷಾಸುರನನ್ನು ಕೊಲ್ಲುವ ದಾರಿಯನ್ನು ನೋಡಬೇಕೆಂದು ಕೇಳಿಕೊಂಡರು.


ತ್ರಿಮೂರ್ತಿಗಳ ಕ್ರೋಧಾನಲವು ಮಹಾಜ್ವಾಲೆಯಾಗಿ ಆಕಾಶದಷ್ಟೆತ್ತರಕ್ಕೆ ಹೋಯಿತು. ಅದರೊಳಗಿನಿಂದ ದುರ್ಗಾದೇವಿ ಉದ್ಭವಿಸಿದಳು. ಶಿವನು ಅವಳ ಮುಖದಲ್ಲಿ ತನ್ನ ಶಕ್ತಿಯನ್ನು ತುಂಬಿದನು. ಅವಳ ಕೂದಲುಗಳಲ್ಲಿ ಯಮಶಕ್ತಿ ಸೇರಿತು. ಅವಳ ನಾಲ್ಕು ಕೈಗಳೂ ವಿಷ್ಣು ಶಕ್ತಿಯಿಂದ ಬಲವಾದುವು. ಬ್ರಹ್ಮ ಅವಳ ಕಾಲುಗಳನ್ನೂ, ಅಗ್ನಿ ಕಣ್ಣುಗಳನ್ನೂ ಶಕ್ತವಾಗಿಸಿದರು. ಇತರ ದೇವತೆಗಳು ಬಗೆಬಗೆಯ ಆಭರಣಗಳನ್ನೂ, ಆಯುಧಗಳನ್ನೂ ಕೊಟ್ಟರು.

ಅವಳು ರಾಕ್ಷಸರ ಮೇಲೆ ಯುದ್ಧಕ್ಕೆ ಹೊರಟಳು. ಅದನ್ನು ತಿಳಿದು ರಾಕ್ಷಸರು ಅವಳೊಂದಿಗೆ ಹೋರಾಡಲು ಸಿದ್ಧರಾದರು. ಆದರೆ ದೇದೀಪ್ಯಮಾನವಾದ ಅವಳ ಆಕಾರವನ್ನು ನೋಡಿ ಹೆದರಿ, ಅವರು ತಮ್ಮ ಒಡೆಯನ ಬಳಿಗೆ ಓಡಿದರು.





ರಾಕ್ಷಸ ಸೇನಾಪತಿಗಳು ತಮ್ಮ ಸೇನೆಗಳನ್ನು ದೇವಿಯ ಮೇಲೆ ಕಳುಹಿಸಿದರಾದರೂ, ದಾರಿಯಲ್ಲಿ ಅನೇಕ ಮಂದಿ ರಾಕ್ಷಸರು, ದೇವಿಯ ವಾಹನವಾದ ಸಿಂಹಕ್ಕೂ ದೇವಿಯ ಕೈಯಲ್ಲಿದ್ದ ತ್ರಿಶೂಲಕ್ಕೂ ಬಲಿಯಾಗಿ ಹೋದರು.

ತನ್ನ ಸೇನೆಗಳೂ ಸೇನಾಪತಿಗಳೂ ಸತ್ತರೆಂಬುದನ್ನು ಕೇಳಿ ಮಹಿಷಾಸುರನು, ಕೋಪದಿಂದ ಕಿಡಿಕಾರಿಸುತ್ತಾ, ಕಾಡುಕೋಣದ ರೂಪ ತಾಳಿ ದುರ್ಗೆಯ ಕಡೆಗೆ ಹೋದನು. ಅವಳು ಕೂಡಲೇ ಅವನ ತಲೆಯನ್ನು ಬಿಂಡಿಸಿಬಿಟ್ಟಳು.





ಆಗ ಮಹಿಷಾಸುರನು ಆನೆಯ ರೂಪವನ್ನು ಧರಿಸಿ, ದುರ್ಗೆಯ ವಾಹನವಾದ ಸಿಂಹವನ್ನು ಹಿಡಿಯಲು ಹೋದನು. ದೇವಿ ಆನೆಯ ಸೊಂಡಿಲನ್ನು ಕಡಿದಳು.



ಕೂಡಲೇ ಮಹಿಷಾಸುರನು ತನ್ನ ನಿಜರೂಪದಿಂದ ದುರ್ಗಾದೇವಿಯನ್ನು ಇದಿರಿಸಿದನು. ದೇದೀಪ್ಯಮಾನವಾದ ಅವಳ ಶರೀರಕಾಂತಿಗೆ ಅವನ ಕಣ್ಣುಗಳು ಚದರುತ್ತಿರಲು ನಿಂತು ಯುದ್ಧ ಮಾಡಲಾರದೇ ಹೋದನು.



ದೇವಿ ತನ್ನ ಸಿಂಹ ಸಮೇತ ಅವನ ಮೇಲೆ ಲಂಘಿಸಿ, ತನ್ನ ತ್ರಿಶೂಲದಿಂದ ಹತ ಮಾಡಿ ಬಿಟ್ಟಳು. ಅದರಿಂದ ಮೂರು ಲೋಕಗಳಿಗೂ ಶಾಂತಿ ಲಭಿಸಿತು.



# ದಶಾವತಾರಗಳು



ಪರಮಾತ್ಮನು ತ್ರಿಮೂರ್ತಿಗಳ ರೂಪದಲ್ಲಿ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಾನೆ. ಬ್ರಹ್ಮನಾಗಿ ಪ್ರಪಂಚವನ್ನು ಸೃಷ್ಟಿಸುತ್ತಾನೆ. ವಿಷ್ಣುವಾಗಿ ಅದನ್ನು ಪೋಷಿಸುವನು. ಶಿವನಾಗಿ ಪ್ರಪಂಚವನ್ನು ಲಯಗೊಳಿಸಿ ಹೊಸ ಸೃಷ್ಟಿಗೆ ಅವಕಾಶ ನೀಡುವನು. ಜಗತ್ತಿನ ಪರಿಣಾಮವು ಕೊನೆ ಸಾಗಲಿಕ್ಕಾಗಿ ವಿಷ್ಣು ಆಗಾಗ ಅವತಾರಗಳನ್ನೆತ್ತುವನು. ಒಂದು ಸಾರಿ ಪ್ರಳಯವಾಗಿ ಪ್ರಪಂಚವು ಮುಳುಗಿದಾಗ ವಿಷ್ಣು ಮತ್ಸ್ಯಾವತಾರವನ್ನೆತ್ತಿ ಮನುವನ್ನೂ ಸಪ್ತರ್ಷಿಗಳನ್ನೂ ಇತರ ಪ್ರಾಣಿಗಳನ್ನೂ ಕಾಪಾಡಲಿಕ್ಕಾಗಿ ಅವರೆಲ್ಲ ಏರಿಕೊಂಡಿದ್ದ ಹಡಗನ್ನು ಹಿಮಾಲಯದ ಶಿಖರಕ್ಕೆ ತಲಪಿಸಿದನು. ಮನು ಪ್ರಾಣಿಗಳನ್ನು ಮತ್ತೆ ಸೃಷ್ಟಿಸಿದನು.

ಒಬ್ಬ ರಾಕ್ಷಸನು ವೇದಗಳನ್ನು ಕದ್ದು, ಸಮುದ್ರದಲ್ಲಿ ಅಡಗಿಕೊಂಡಾಗ ಮತ್ಸ್ಯಾವತಾರದ ವಿಷ್ಣು ಆ ರಾಕ್ಷಸನನ್ನು ಕೊಂದು ವೇದಗಳನ್ನು ಮನುವಿಗೆ ಕೊಟ್ಟನು.







ಮಂದರ ಪರ್ವತವನ್ನು ಕಡೆಗೋಲಾಗಿ, ಸರ್ಪರಾಜ ವಾಸುಕಿಯನ್ನು ಹಗ್ಗವಾಗಿ ಮಾಡಿ, ದೇವತೆಗಳೂ ರಾಕ್ಷಸರೂ ಅಮೃತಕ್ಕಾಗಿ ಸಮುದ್ರವನ್ನು ಕಡೆಯಲು ತೊಡಗಿದಾಗ ಮಂದರ ಪರ್ವತವು ನೀರಿನಲ್ಲಿ ಮುಳುಗಿ ಹೋಯಿತು. ಆಗ ವಿಷ್ಣು ಕೂರ್ಮಾವತಾರದಿಂದ ಅದನ್ನೆತ್ತಿ ತನ್ನ ಬೆನ್ನ ಮೇಲೆ ಅದು ತೇಲುವಂತೆ ಮಾಡಿದನು.



ಮತ್ತೊಂದು ಸಾರಿ ಹಿರಣ್ಯಾಕ್ಷನೆಂಬ ದಾನವನು ಭೂಮಿಯನ್ನು ಸುರುಳಿ ಸುತ್ತಿ ಸಮುದ್ರದಲ್ಲಿ ಮುಳುಗಿಸಿಬಿಟ್ಟನು. ಆಗ ವಿಷ್ಣು ವರಾಹಾವತಾರವನ್ನೆತ್ತಿ ಆ ದಾನವನನ್ನು ಕೊಂದು, ಭೂದೇವಿಯನ್ನು ನೀರಿನಿಂದ ಉದ್ಧರಿಸಿದನು.



ಹಿರಣ್ಯಾಕ್ಷನ ಸಹೋದರ ಹಿರಣ್ಯಕಶಿಪು ವಿಷ್ಣು ದ್ವೇಷಿ. ಆದರೆ ಅವನ ಮಗ ಪ್ರಹ್ಲಾದನು ವಿಷ್ಣು ಭಕ್ತ. ವಿಷ್ಣು ಎಲ್ಲೆಲ್ಲಿಯೂ ಇರುವನೆಂದು ಪ್ರಹ್ಲಾದನು ಹೇಳಿದಾಗ, ಅದು ಸುಳ್ಳೆಂದು ತೋರಿಸಲು ಹಿರಣ್ಯಕಶಿಪು ಒಂದು ಸ್ತಂಬವನ್ನು ಹೊಡೆದು ಒಡೆದನು. ಆಗ ಸ್ತಂಬದೊಳಗಿನಿಂದ ವಿಷ್ಣು ನರಸಿಂಹ ರೂಪದಲ್ಲಿ ಅವತರಿಸಿ ಹಿರಣ್ಯಕಶಿಪುವನ್ನು ಕೊಂದನು.

ಪ್ರಹ್ಲಾದನ ಮೊಮ್ಮಗನಾದ ಬಲಿ ಮೂರು ಲೋಕಗಳನ್ನೂ ಜಯಿಸಿ ಸ್ವರ್ಗದಲ್ಲಿರುವ ದೇವತೆಗಳಿಗೆ ಗತಿಯಿಲ್ಲದಂತೆ ಮಾಡಿದನು. ಆದರೆ ಅವನು ಮಹಾದಾತನಾಗಿದ್ದ. ಯಾರು ಏನು ಕೇಳಿದರೂ ಕೊಡುವವನು. ವಿಷ್ಣು ವಾಮನನೆಂಬ ಕುಳ್ಳ ಬ್ರಹ್ಮಚಾರಿಯ ರೂಪದಲ್ಲಿ ಬಲಿಯ ಬಳಿಗೆ ಹೋಗಿ ಮೂರು ಅಡಿ ಭೂಮಿಯನ್ನು ಕೇಳಿದನು. ಬಲಿ ಧಾರೆಯೆರೆದು ಕೊಟ್ಟನು. ವಾಮನನು ಒಂದು ಅಡಿಯಿಂದ ಭೂಮಿಯನ್ನೂ, ಇನ್ನೊಂದು ಅಡಿಯಿಂದ ಆಕಾಶವನ್ನೂ ಆಕ್ರಮಿಸಿ, ಮೂರನೇ ಅಡಿಗೆ ಸ್ಥಳವಿಲ್ಲದೆ ಬಲಿಯ ನೆತ್ತಿಯ ಮೇಲೆ ಪಾದವನ್ನಿಟ್ಟು ಪಾತಾಳಕ್ಕೆ ಒತ್ತಿಬಿಟ್ಟನು.





ಒಂದು ಸಾರಿ ಕ್ಷತ್ರಿಯರು ಬಲಗರ್ವಿತರಾಗಿ ಋಷಿಮುನಿಗಳನ್ನು ಪೀಡಿಸತೊಡಗಿದರು. ಆಗ ವಿಷ್ಣು ಪರಶುರಾಮನೆಂಬ ಋಷಿಕುಮಾರನಾಗಿ ಹುಟ್ಟಿ, ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಹತ ಮಾಡಿದನು.

ತರುವಾಯ ವಿಷ್ಣು ರಾಮನಾಗಿ ಅವತರಿಸಿ ಪ್ರಜೆಗಳಿಗೆ ಆದರ್ಶ ಪುರುಷನಾಗಿ ಜೀವಿಸಿದನು. ಪಿತೃವಾಕ್ಯ ಪರಿಪಾಲನೆ, ಭ್ರಾತೃಪ್ರೇಮ, ಆದರ್ಶ ರಾಜ್ಯ ಪರಿಪಾಲನೆ ಇವು ರಾಮನ ಪ್ರತ್ಯೇಕ ಗುಣಗಳು. ರಾಮನು ಮಹಾವೀರನು.





ತರುವಾಯ ವಿಷ್ಣು ಕೃಷ್ಣಾವತಾರವನ್ನೆತ್ತಿದನು. ಅಸತ್ಯಕ್ಕೆ ಅಪಜಯ, ಸತ್ಯಕ್ಕೆ ಜಯ ಎಂಬುದನ್ನು ಸಾಧಿಸಿ ತೋರಿಸಿದನು. ಅವನು ಅರ್ಜುನನಿಗೆ ಹೇಳಿದ ಗೀತೆ ಎಲ್ಲಾ ಕಾಲಕ್ಕೂ ಎಲ್ಲರಿಗೂ ಮಾರ್ಗದರ್ಶಕವಾಗಿದೆ.



ವಿಷ್ಣು ಬುದ್ಧನಾಗಿ ಅವತರಿಸಿ ಪ್ರಜೆಗಳಿಗೆ ಮುಕ್ತಿ ಮಾರ್ಗ ತೋರಿಸುತ್ತ, ಅಹಿಂಸೆಯನ್ನು ಬೋಧಿಸಿದನು. ಜೀವಿತದಲ್ಲಿ ಪ್ರಾಪ್ತವಾಗುವ ಬಗೆಬಗೆಯ ಕಷ್ಟಗಳನ್ನು ಹೇಗೆ ದಾಟಬೇಕೆಂಬುದನ್ನು ಬೋಧಿಸಿದನು ಬುದ್ಧ.



ಮಾನವರಲ್ಲಿ ಇನ್ನೂ ಪೈಶಾಚಿಕ ಪ್ರವೃತ್ತಿ ಹೋಗಲಿಲ್ಲ. ವಿಷ್ಣು ಕಲ್ಕಿಯಾಗಿ ಅವತಾರವೆತ್ತಿ, ಮಾನವರೊಳಗಿನ ದುಷ್ಟಶಕ್ತಿಗಳನ್ನು ನಿರ್ಮೂಲಿಸಿ, ಭೂಮಿಯ ಮೇಲೆ, ಆದರ್ಶ ಜೀವನವನ್ನು ನೆಲೆಗೊಳಿಸಲಿರುವನು.



# ಸಮುದ್ರಮಥನ

ದೇವದಾನವರ ಯುದ್ಧವು ದೀರ್ಘ ಕಾಲದಿಂದ ನಡೆಯುತ್ತಿತ್ತು. ತಾವು ಅಮೃತವನ್ನು ಕುಡಿದು ಅಮರರಾದ ಹೊರತು ವಿಜಯಿಗಳಾಗಲಾರೆವೆಂದು ದೇವತೆಗಳಿಗೆ ತೋರಿತು. ಅವರು ಅಮೃತವನ್ನು ಮೇರು ಪರ್ವತ ಪ್ರಾಂತದಲ್ಲಿ ಹುಡುಕತೊಡಗಿದರು.



ಎಷ್ಟು ಹುಡುಕಿದರೂ ಅವರಿಗೆ ಅಮೃತದ ಜಾಡು ತಿಳಿಯಲಿಲ್ಲ. ಕಡೆಗೆ ಬ್ರಹ್ಮನು ಅವರೊಂದಿಗೆ, ಸಮುದ್ರವನ್ನು ಕಡೆದರೆ ಹೊರತು ಅಮೃತವು ಸಿಗಲಾರದೆಂದು ಹೇಳಿಬಿಟ್ಟನು. ದಾನವರು ಸಹಾಯ ಮಾಡಿದ ಹೊರತು ಸಮುದ್ರಮಥನವು ಸಾಧ್ಯವಾಗದು.



ಅಮೃತವನ್ನು ಪಡೆಯುವ ಸಲುವಾಗಿ ದಾನವರು ದೇವತೆಗಳಿಗೆ ಸಹಾಯ ಮಾಡಲು ಒಪ್ಪಿದರು. ಕಡೆಯಲು ಕಡಗೋಲಾಗಿ ಮಂದರ ಪರ್ವತವನ್ನು ಉಪಯೋಗಿಸಬೇಕೆಂದು ನಿಶ್ಚಯವಾಯಿತು. ಕಡೆಯುವ ಹಗ್ಗವಾಗಿರಬೇಕೆಂದು ನಾಗರಾಜನಾದ ವಾಸುಕಿಯನ್ನು ಕೇಳಿಕೊಂಡರು. ವಾಸುಕಿ ಒಪ್ಪಿದನು.



ಕಡೆಯುವಾಗ ವಿಷ್ಣು ಆಮೆಯ ರೂಪ ತಾಳಿ ಪರ್ವತವು ತೇಲುವಂತೆ ಹೊತ್ತುಕೊಳ್ಳದಿದ್ದರೆ ಅದು ಮುಳುಗಿಹೋಗುತ್ತಿತು. ದಾನವರು ವಾಸುಕಿಯ ತಲೆಯ ಭಾಗವನ್ನೂ, ದೇವತೆಗಳು ಬಾಲದ ಭಾಗವನ್ನೂ ಹಿಡಿದು ಒಂದು ಯುಗದ ವರೆಗೆ ಸಮುದ್ರವನ್ನು ಕಡೆದರು.



ಬೇಗದಲ್ಲೇ ವಾಸುಕಿಯ ಬಾಯಿಯಿಂದ ವಿಷ ಜ್ವಾಲೆಗಳು ಎಲ್ಲಾ ಕಡೆಗೂ ವ್ಯಾಪಿಸಿ ಲೋಕವೇ ನಾಶವಾಗುವ ಸ್ಥಿತಿ ಬಂತು. ಆಗ ದೇವತೆಗಳು ಶಿವನನ್ನು ಪ್ರಾರ್ಥಿಸಲು, ಶಿವನು ಆ ಹಾಲಾಹಲ ವಿಷವನ್ನು ತನ್ನ ಕಂಠದ ವರೆಗೆ ನುಂಗಿ ನೀಲಕಂಠ ನೆಂದು ಖ್ಯಾತನಾದನು.



ತರುವಾಯ ಸಮುದ್ರದಿಂದ ಒಂದೊಂದಾಗಿ ಅನೇಕ ವಸ್ತುಗಳು ಹುಟ್ಟಿಕೊಂಡುಬಂದುವು. ಚಂದ್ರ, ಲಕ್ಷ್ಮೀದೇವಿ, ಐರಾವತವೆಂಬ ಬಿಳಿಯಾನೆ ಹುಟ್ಟುತ್ತಿರಲು, ದೇವದಾನವರು ಇನ್ನೂ ಕಡೆ ಯುತ್ತಿದ್ದರು.



ಕಟ್ಟಕಡೆಗೆ ಅಮೃತಭಾಂಡವನ್ನು ಕೈಯಲ್ಲಿ ಹಿಡಿದುಕೊಂಡು ಧನ್ವಂತರಿ ಸಮುದ್ರದಿಂದ ಹುಟ್ಟಿಬಂದನು. ಈತನೇ ದೇವತೆಗಳ ವೈದ್ಯ. ಅಲ್ಲಿಗೆ ಸಮುದ್ರಮಥನವು ಜಯಪ್ರದವಾಗಿ ನೆರವೇರಿತು.



ದಾನವರು ಆತುರದಿಂದ ಅಮೃತಕ್ಕಾಗಿ ಕೈ ಚಾಚುತ್ತ ಮುಂದೆ ಬಂದರು. ಎಚ್ಚರಿಕೆಯಲ್ಲಿದ್ದ ದೇವತೆಗಳು ಅಮೃತವು ದಾನವರ ಕೈಗೆ ಸಿಗದಂತೆ ಮಾಡಲು ಪ್ರಯತ್ನಿಸಿದರು. ಈ ವಿಷಯವಾಗಿ ದೇವದಾನವರು ತಮ್ಮೊಳಗೆ ಘರ್ಷಣೆ ಮಾಡಿಕೊಂಡಿರುವಾಗ, ನಿಸ್ಸಹಾಯಕನಾದ ಧನ್ವಂತರಿ ನೋಡುತ್ತಾ ನಿಂತನು.



ಅಕಸ್ಮಾತ್ತಾಗಿ ಅಲ್ಲಿ ಒಬ್ಬಳು ಅಪೂರ್ವ ಸೌಂದರ್ಯವತಿ ಪ್ರತ್ಯಕ್ಷಳಾದಳು. ಇಕ್ಕಡೆಯವರೂ ಅವಳನ್ನು ನೋಡುತ್ತ ಘರ್ಷಣೆಬಿಟ್ಟು ನಿಂತರು. ಅವಳು ಉಭಯಪಕ್ಷದವರಿಗೂ ತಾನೇ ಅಮೃತವನ್ನು ಹಂಚಿಕೊಡುವೆನೆಂದಳು. ಅವಳ ಸೌಂದರ್ಯಕ್ಕೆ ಮೋಹಿತರಾದ ದಾನವರು ಅದಕ್ಕೆ ಸಮ್ಮತಿಸಿದರು.



ಹಾಗೆ ಮೋಹಿನೀ ರೂಪದಲ್ಲಿ ಬಂದವನು ವಿಷ್ಣುವೇ. ದಾನವರು ಅಮೃತ ಕುಡಿದು ಅಮರರಾಗಿಬಿಟ್ಟರೆ, ಆದರಿಂದ ಮದವೂ ಅನ್ಯಾಯಗಳೂ ಹೆಚ್ಚಾಗಿ ಪ್ರಪಂಚವು ನರಕವಾಗಿ ಮಾರ್ಪಡುತ್ತದೆಂದು ವಿಷ್ಣುವಿಗೆ ಗೊತ್ತು. ಮೋಹಿನಿ ದೇವತೆಗಳಿಗೆ ಅಮೃತವನ್ನು ನೀಡತೊಡಗಿದಳು.



ರಾಹು ಎಂಬ ದಾನವನು ಮೋಹಿನಿಯ ಮೇಲೆ ಸಂದೇಹಪಟ್ಟು, ದೇವತೆಯ ರೂಪದಲ್ಲಿ ಬಂದು. ತನ್ನ ಭಾಗದ ಅಮೃತವನ್ನು ತೆಗೆದುಕೊಂಡನು. ಆಗಲೇ ಈ ಮೋಸವನ್ನು ತಿಳಿದ ವಿಷ್ಣು, ಅಮೃತವು ರಾಹುವಿನ ಕಂಠದಲ್ಲಿ ಇಳಿಯುವುದರೊಳಗೆ ತನ್ನ ಸುದರ್ಶನ ಚಕ್ರದಿಂದ ರಾಹುವಿನ ತಲೆ ಕಡಿದನು.



ದಾನವರು ಮೋಸವನ್ನು ತಿಳಿಯುವುದರೊಳಗೇ ಎಲ್ಲಾ ಮೀರಿಹೋಗಿತ್ತು. ಅವರಿಗೆ ಅಮೃತ ಉಳಿದಿರಲಿಲ್ಲ. ದೇವತೆಗಳು ಮಾತ್ರವೇ " ಅಮರ " ರಾದರು. ಆಮೇಲೆ ದೇವತೆಗಳು ವೀರೋಚಿತವಾಗಿ ಹೋರಾಡಿ ದಾನವರು ದುರಾಕ್ರಮಣ ಮಾಡಿದ ಸ್ಥಳದಿಂದ ಅವರನ್ನು ಓಡಿಸಿದರು.

# ಬಲಿಯ ಭಂಗ



ಪ್ರಹ್ಲಾದನ ಮೊಮ್ಮಗನಾದ ಬಲಿ ಮಹಾ ಶೂರ. ಅವನು ಭೂಮಂಡಲವನ್ನೆಲ್ಲಾ ಜಯಿಸಿ ಮಹಾಚಕ್ರವರ್ತಿಯಾದನು. ಆದರೂ ಅವನಿಗೆ ತೃಪ್ತಿಯಾಗಲಿಲ್ಲ.



ಅವನು ಸ್ವರ್ಗದ ಮೇಲೆ ದಾಳಿ ತೆಗೆದನು. ದೇವತೆಗಳು ಅವನ ರಭಸಕ್ಕೆ ನಿಲ್ಲಲಾರದೆ ಹೋದರು. ಬಲಿಗೆ ದಾಸರಾಗಿ ಇರುವುದೋ ಅಥವಾ ಸ್ವರ್ಗವನ್ನು ಬಿಟ್ಟು ಓಡಿ ಹೋಗುವುದೋ ಹೊರತು ಅವರಿಗೆ ಬೇರೆ ಮಾರ್ಗವಿಲ್ಲದಾಯಿತು.



ದಿಕ್ಕು ಗಾಣದ ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ, ತಮ್ಮ ಪರಿಸ್ಥಿತಿಯನ್ನು ಕುರಿತು ಮೊರೆಯಿಟ್ಟರು. ಬಲಿ ಎಷ್ಟು ಪರಾಕ್ರಮವಂತನೋ ಅಷ್ಟೇ ಉದಾರನಾಗಿಯೂ ಸತ್ಯಸಂಧನಾಗಿಯೂ ಇರುವವನು. ಅವನನ್ನು ಇತರ ರಾಕ್ಷಸರಂತೆ ಸೋಲಿಸುವುದು ಸಾಧ್ಯವಿಲ್ಲ. ಇದೆಲ್ಲ ವಿಷ್ಣುವಿಗೆ ಗೊತ್ತು.



ವಿಷ್ಣು ಕಶ್ಯಪನ ಪತ್ನಿ ಅದಿತಿಯ ಗರ್ಭದಲ್ಲಿ ಮಗನಾಗಿ ಹುಟ್ಟಿದನು. ಅವನು ಜನ್ಮತಃ ಕುಳ್ಳನಾಗಿ ವಾಮನನೆಂದು ಹೆಸರು ಪಡೆದನು. ಅವನು ವೇದವೇದಾಂಗಗಳನ್ನೆಲ್ಲಾ ಅಭ್ಯಸಿಸಿ ಬ್ರಾಹ್ಮಣೋತ್ತಮನೆನಿಸಿದನು.

ಬಲಿ ಒಂದು ಮಹಾ ಯಜ್ಞಕ್ಕೆ ತಲೆ ಹಾಕಿದನು. ಅನೇಕ ನೂರು ಮಂದಿ ಬ್ರಾಹ್ಮಣರು ಋತ್ವಿಕ್ಕುಗಳಾಗಿದ್ದರು. ಆ ಸಂದರ್ಭದಲ್ಲಿ ಬಲಿ ಯಾರು ಏನು ಕೇಳಿದರೂ ಕೊಡುವುದಾಗಿ ಪ್ರಕಟಿಸಿದನು.





ಎಲ್ಲರೂ ಬಲಿಯಿಂದ ತಮ ತಮಗೆ ಬೇಕಾದ ದಾನಗಳನ್ನು ಪಡೆಯುತ್ತಿದ್ದರು. ವಾಮನನೂ ಬಂದಿದ್ದ. ಅವನ ಸರದಿಬಂದಾಗ, ತನಗೆ ಮೂರು ಅಡಿಗಳಷ್ಟು ಸ್ಥಳವು ಬೇಕೆಂದು ಕೇಳಿದನು ವಾಮನ. ಬಲಿ ಸರಿಯೆಂದು ವಾಮನನಿಗೆ ದಾನದ ಧಾರೆಯನ್ನು ಎರೆಯಲು ಸಿದ್ಧನಾದನು.



ಆಗ ಬಲಿಯ ಗುರುವಾದ ಶುಕ್ರನು, ವಾಮನನು ವಿಷ್ಣುವೆಂದು ತಿಳಿದುಕೊಂಡು, ಬಲಿಯನ್ನು ದೂರ ಕರೆದೊಯ್ದು, ವಾಮನನು ಕೇಳಿದ ದಾನವನ್ನು ಕೊಡಬೇಡವೆಂದು ಹೇಳಿದನು.



ಆದರೆ ಬಲಿ ಆಡಿದ ಮಾತು ತಪ್ಪುವವನಲ್ಲ. ಆದುದರಿಂದ ಶುಕ್ರಾಚಾರ್ಯನು ಚಿಕ್ಕ ಹುಳದ ರೂಪದಲ್ಲಿ ಜಲಪಾತ್ರದ ಕೊಂಬಿನೊಳಗೆ ದಾನದಧಾರೆ ಇಳಿಯದಂತೆ ತಡೆದನು.



ಕೊಂಬಿನೊಳಗೆ ದರ್ಭೆಯಿಂದ ಚುಚ್ಚುವಂತೆ ವಾಮನನು ಹೇಳಲು, ಬಲಿ ಹಾಗೆಯೇ ಮಾಡಿದನು, ಶುಕ್ರನು ಹೊರಗೆ ಬಂದು ನಿಜ ರೂಪ ಧರಿಸಿದಾಗ, ಅವನ ಒಂದು ಕಣ್ಣು ಕುರುಡಾಗಿತ್ತು.



ಬಲಿ ಮೂರು ಅಡಿ ಸ್ಥಳವನ್ನು ಧಾರೆಯೆರೆದ ಕೂಡಲೇ, ವಾಮನನು ಅಪಾರವಾಗಿ ಬೆಳೆದು ಒಂದು ಪಾದದಿಂದ ಭೂಮಿಯನ್ನೂ, ಇನ್ನೊಂದು ಪಾದದಿಂದ ಆಕಾಶವನ್ನೂ ಆಕ್ರಮಿಸಿದನು.



ಇದನ್ನು ನೋಡಿ ಬಲಿ ಸ್ತಂಭೀ ಭೂತನಾದನು. ವಾಮನನು ಬಲಿಯನ್ನು ಮೂರನೇ ಅಡಿಯನ್ನು ಎಲ್ಲಿ ಇಡುವುದೆಂದು ಕೇಳಿದನು. ತನ್ನ ತಲೆಯನ್ನೇ ತೋರಿಸಿದನು ಬಲಿ. ವಾಮನನು ತನ್ನ ಪಾದದಿಂದ ಬಲಿಯನ್ನು ಪಾತಾಳಕ್ಕೆ ತುಳಿದುಬಿಟ್ಟನು. ಈ ವಿಧವಾಗಿ ಒಬ್ಬ ವಾಮನನ ಕೈಯಲ್ಲಿ ಮಹಾಶೂರ ಬಲಿ ಸೋತುಹೋದನು.



ಬಲಿಯ ಹೆಂಡತಿಯಾದ ವಿಂಧ್ಯಾವಳಿ ತನ್ನ ಗಂಡನಿಗೆ ಅನ್ಯಾಯ ಮಾಡಬಾರದೆಂದು ವಾಮನನನ್ನು ಪ್ರಾರ್ಥಿಸಿದಳು. ಬಲಿಯ ಆಜ್ಞೆಗೆ ಇದಿರಿಲ್ಲವೆಂದು ವರವಿತ್ತು, ಅವನ ಮನೆ ಬಾಗಿಲನ್ನು ತಾನೇ ಸ್ವತಃ ಕಾಯುತ್ತಿರುವೆನೆಂದು ವಿಶೇಷ ವರವನ್ನೂ ಕೊಟ್ಟನು ವಾಮನನಾದ ವಿಷ್ಣು.

# ಪರಶುರಾಮ



ಹೈಹಯ ವಂಶದವನಾದ ಕಾರ್ತವೀರ್ಯನೆಂಬ ರಾಜನು, ಬೇಟೆಯಾಡಲು ಕಾಡಿಗೆ ಹೋಗಿ, ಜಮದಗ್ನಿ ಮಹಾಮುನಿಯ ಆಶ್ರಮವನ್ನು ಅನ್ಯಾಯವಾಗಿ ಧ್ವಂಸಮಾಡಿದನು.

ಆ ಸಮಯದಲ್ಲಿ ಜಮದಗ್ನಿಯ ಮಗ ಪರಶುರಾಮನು ಆಶ್ರಮದಲ್ಲಿರಲಿಲ್ಲ. ಅವನು ಬಂದು ನಡೆದ ಘೋರವನ್ನು ನೋಡಿ, ತನ್ನ ಕೊಡಲಿಯಿಂದ ಮದೋನ್ಮತ್ತನಾದ ಕಾರ್ತವೀರ್ಯನ ತಲೆಯನ್ನು ಕಡಿದನು.





ಮಾರನೇ ದಿನ ಕಾರ್ತವೀರ್ಯನ ಕುಮಾರರು ಜಮದಗ್ನಿ ತಪಸ್ಸಮಾಧಿಯಲ್ಲಿರುವ ಸ್ಥಳಕ್ಕೆ ಬಂದು ಅವನನ್ನು ಕೊಂದರು. ಆಗ ಕೂಡಾ ಪರಶುರಾಮನು ಅಲ್ಲಿರಲಿಲ್ಲ.



ಮರುದಿನ ಪರಶುರಾಮನು ತನ್ನ ಕೊಡಲಿಯೊಂದಿಗೆ ಹೋಗಿ ಕಾರ್ತವೀರ್ಯನ ಕುಮಾರರನ್ನು ಪ್ರತಿಭಟಿಸಿ ಎಲ್ಲರನ್ನೂ ಕೊಂದನು. ಬ್ರಾಹ್ಮಣನಾದರೂ ಅವನ ಶೌರ್ಯ ಪ್ರತಾಪಗಳ ಮುಂದೆ ಕ್ಷತ್ರಿಯರಾರೂ ನಿಲ್ಲಲಾರದೆ ಹೋದರು.



ತಂದೆಯ ವಧೆಗೆ ಹಗೆ ತೀರಿಸಿಕೊಂಡ ಪರಶುರಾಮನು, ಅಷ್ಟಕ್ಕೆ ನಿಲ್ಲದೆ, ಕ್ಷತ್ರಿಯರೆಲ್ಲಾ ಕ್ರೂರರು, ದುರ್ಜನರು ಎಂದುಕೊಂಡು ಕ್ಷತ್ರಿಯ ಜಾತಿಯನ್ನೇ ನಿರ್ಮೂಲಿಸಲು ನಿಶ್ಚಯಿಸಿದನು.



ಪರಶುರಾಮನು ಇಪ್ಪತ್ತೊಂದು ಸಾರಿ ಭೂಸಂಚಾರಮಾಡಿ ಕ್ಷತ್ರಿಯರ ವಂಶವನ್ನೇ ನಿರ್ಮೂಲಗೊಳಿಸಿ ಕ್ಷತ್ರಿಯ ರಕ್ತದ ಮಡುವಿನಿಂದಲೇ ತನ್ನ ತಂದೆಗೆ ಜಲತರ್ಪಣ ಬಿಟ್ಟನು.



ತರುವಾಯ ಅವನು ದೊಡ್ಡ ಯಾಗವನ್ನು ಮಾಡಿ, ತಾನು ಕ್ಷತ್ರಿಯರನ್ನು ಕೊಂದು ಗೆದ್ದು ಕೊಂಡ ಭೂಮಂಡಲವನ್ನೆಲ್ಲಾ ಕಶ್ಯಪನಿಗೆ ದಾನಮಾಡಿ, ತಪಸ್ಸುಮಾಡಲು ಮಹೇಂದ್ರ ಪರ್ವತಕ್ಕೆ ಹೋದನು.



ಪ್ರಪಂಚಕ್ಕೆ ಕ್ಷತ್ರಿಯರ ಕಾಟ ಹೋದರೂ ರಾಕ್ಷಸರ ಕಾಟ ಹೋಗಿರಲಿಲ್ಲ. ಅವರು ವಿಜೃಂಭಿಸಿ ಪ್ರಜೆಗಳನ್ನು ಬಗೆ ಬಗೆಯಾಗಿ ಕಾಡುತ್ತಲೇ ಇದ್ದರು.



ಪರಶುರಾಮನಿಗೆ ಈ ಸಂಗತಿ ಗೊತ್ತಾಯಿತು. ಅವನು ಶಿವನನ್ನು ಪ್ರಾರ್ಥಿಸಿ ರಾಕ್ಷಸರನ್ನು ಸಂಹಾರಮಾಡಲು, ತಕ್ಕ ಶಕ್ತಿಗಳನ್ನು ಪಡೆದು ಮಹೇಂದ್ರ ಪರ್ವತದಿಂದ ಕೆಳಗಿಳಿದನು.



ಶಿವನ ಅನುಗ್ರಹದಿಂದ ಇನ್ನಿಷ್ಟು ಶಕ್ತಿವಂತನಾದ ಪರಶುರಾಮನು, ಕಂಡ ಕಂಡ ರಾಕ್ಷಸರನ್ನೆಲ್ಲಾ ಹುಲ್ಲು ಹರಿದ ಹಾಗೆ ಹರಿದು, ಪ್ರಪಂಚಕ್ಕಿದ್ದ ರಾಕ್ಷಸರ ಭಯವನ್ನೂ ಹೋಗಲಾಡಿಸಿದನು.



ಆ ಕಾಲದಲ್ಲಿ ಯುವಕನಾಗಿದ್ದ ದಶರಥ ಕುಮಾರ ರಾಮನು ಮಿಥಿಲೆಯಲ್ಲಿ ಶಿವಧನುಸ್ಸನ್ನು ಮುರಿದು ಸೀತೆಯನ್ನು ಮದುವೆಯಾದನು. ಅಲ್ಲಿಂದ ರಾಮನು ಪರಿವಾರದೊಂದಿಗೆ ಅಯೋಧ್ಯೆಗೆ ಹಿಂದಿರುಗುತ್ತಿದ್ದನು.



ಆಗ ಪರಶುರಾಮನು ರಾಮನನ್ನು ಪ್ರತಿಭಟಿಸಿ, ತನ್ನ ಹತ್ತಿರವಿದ್ದ ವಿಷ್ಣು ಧನುಸ್ಸಿಗೆ ಬಾಣ ಹೂಡಲು ಹೇಳಿದನು. ರಾಮನು ಲೀಲಾಜಾಲವಾಗಿ ವಿಷ್ಣು ಧನುಸ್ಸನ್ನು ಎತ್ತಿ ಬಾಗಿಸಲು, ರಾಮನು ತನ್ನಹಾಗೆ ಅವತಾರ ಪುರುಷನೆಂದು ತಿಳಿದು ಪರಶುರಾಮನು, ತನ್ನ ಶಕ್ತಿಯನ್ನೆಲ್ಲಾ ರಾಮನಿಗೇ ಧಾರೆಯೆರೆದು, ನಿಶ್ಚಿಂತನಾಗಿ ತಪಸ್ಸಿಗೆ ಹೊರಟುಹೋದನು.



# ಮೃತಸಂಜೀವಿನಿ ವಿದ್ಯೆ

ಆದಿಕಾಲದಲ್ಲಿ ದೇವದಾನವರೊಳಗೆ ಜರುಗಿದ ಮಹಾದಾರುಣವಾದ ಯುದ್ಧಗಳಿಂದ ಉಭಯ ಪಕ್ಷಗಳಲ್ಲಿಯೂ ಅನೇಕಮಂದಿ ಸಾಯುತ್ತಿದ್ದರು. ಆದರೆ ದಾನವರ ಗುರುವಾದ ಶುಕ್ರಾಚಾರ್ಯನಿಗೆ ಮೃತಸಂಜೀವಿನಿ ವಿದ್ಯೆ ಗೊತ್ತಿದ್ದುದರಿಂದ, ಅವನು ಸತ್ತ ರಾಕ್ಷಸರನ್ನು ಮತ್ತೆ ಬದುಕಿಸುತ್ತಿದ್ದನು. ಈ ವಿದ್ಯೆ ದೇವತೆಗಳಿಗೆ ತಿಳಿಯದು.

ದೇವತೆಗಳ ಗುರುವಾದ ಬೃಹಸ್ಪತಿಗೆ ಕಚನೆಂಬ ಕುಮಾರನಿದ್ದನು. ಅವನು ತುಂಬಾ ಬುದ್ಧಿವಂತನಾದುದರಿಂದ, ಶುಕ್ರಾಚಾರ್ಯನಿಂದ ಮೃತಸಂಜೀವಿನಿ ವಿದ್ಯೆ ಕಲಿತುಕೊಂಡು ಬರುವಂತೆ ಹೇಳಿ ದೇವತೆಗಳು ಅವನನ್ನು ಕಳುಹಿಸಿದರು.





ತನ್ನ ಹೊಸ ಶಿಷ್ಯನಾದ ಕಚನ ಶುಶ್ರೂಷೆಗಳಿಂದ ಶುಕ್ರಾಚಾರ್ಯನು ತುಂಬಾ ಮೆಚ್ಚಿದನು. ಅವನ ಮಗಳು ದೇವಯಾನಿ ಕಚನೊಂದಿಗೆ ಗಾಢ ಸ್ನೇಹವಾಗಿದ್ದಳು.



ಕಚನ ಮೇಲೆ ಶುಕ್ರಾಚಾರ್ಯನಿಗೂ ದೇವಯಾನಿಗೂ ಇರುವ ಗಾಢಾನುರಾಗವನ್ನು ನೋಡಿ, ದಾನವರಿಗೆ ಅನುಮಾನವೂ ಈರ್ಷ್ಯೆಯೂ ಉಂಟಾಯಿತು. ಕಚನು ಮೃತಸಂಜೀವಿನೀ ವಿದ್ಯೆಯನ್ನು ಕಲಿಯಲು ಬಂದವನೆಂದು ತಿಳಿದು ಅವನನ್ನು ಕೊಲ್ಲುವ ಪ್ರಯತ್ನಗಳನ್ನು ನಡೆಸಿದರು.



ಒಂದುದಿನ ಹುಲ್ಲುಗಾವಲಿನಲ್ಲಿ ಕಚನು ಗುರುವಿನ ಪಶುಗಳ ಮಂದೆಯನ್ನು ಮೇಯಿಸುತ್ತಿರುವಾಗ, ದಾನವರು ಆಕಸ್ಮಾತ್ತಾಗಿ ಅವನ ಮೇಲೆ ಬಿದ್ದು ಕೊಂದು ಬಿಟ್ಟರು. ಈ ವಿಷಯ ಬೇಗದಲ್ಲೇ ದೇವಯಾನಿಗೆ ತಿಳಿಯಿತು.



ತನ್ನ ಪ್ರಿಯನನ್ನು ಮತ್ತೆ ಬದುಕಿಸಬೇಕೆಂದು ದೇವಯಾನಿ ತನ್ನ ತಂದೆಯನ್ನು ಕೇಳಿಕೊಂಡಳು. ಶುಕ್ರಾಚಾರ್ಯನು ಅದಕ್ಕೆ ಒಪ್ಪಿ ತನ್ನ ವಿದ್ಯೆಯಿಂದ ಕಚನು ಮತ್ತೆ ಬದುಕುವಂತೆ ಮಾಡಿದನು.



ದಾನವರು ಇನ್ನೊಂದು ಉಪಾಯ ಮಾಡಿದರು. ಈಸಾರಿ ಅವರು ಕಚನನ್ನು ಸುಟ್ಟು ಬೂದಿಮಾಡಿ, ಆ ಬೂದಿಯನ್ನು ಮದ್ಯದಲ್ಲಿ ಬೆರೆಸಿ ಬಿಟ್ಟರು.



ತರುವಾಯ ಅವರು ಆ ಮದ್ಯವನ್ನು ತಮ್ಮ ಗುರುವಾದ ಶುಕ್ರಾಚಾರ್ಯನಿಗೇ ಕುಡಿಯಲು ಕೊಟ್ಟು, ಕಚನು ಬದುಕಬಾರದಂತೆ ಮಾಡಿ ಬಿಟ್ಟರು. ಶುಕ್ರನು ಆ ಸಂಗತಿ ತಿಳಿಯದೆ ಅದನ್ನು ಕುಡಿದನು.



ದಾನವರು ಹೊರಟು ಹೋದ ಮೇಲೆ, ದೇವಯಾನಿ ಓಡುತ್ತಾ ಬಂದು. ದಾನವರು ಮಾಡಿದ ಮೋಸವನ್ನು ತಂದೆಯೊಂದಿಗೆ ಹೇಳಿದಳು. ಈಗ ತಾನು ಸಾಯದೆ ಕಚನು ಹೊರಗೆ ಬರುವಂತಿಲ್ಲ. ಬದುಕಿಸಿದರೂ ಹೊಟ್ಟೆಯೊಳಗೇ ಇರಬೇಕಾಗುತ್ತದೆ.



ಆದುದರಿಂದ ಶುಕ್ರನು ತನ್ನ ಹೊಟ್ಟೆಯೊಳಗಿರುವ ಕಚನನ್ನು ತನ್ನ ವಿದ್ಯೆಯಿಂದ ಬದುಕಿಸಿ, ಅಲ್ಲಿಯೇ ಅವನಿಗೆ ಮೃತಸಂಜೀವಿನೀ ಮಂತ್ರವನ್ನು ಉಪದೇಶಿಸಿದನು. ಕಚನು ಶುಕ್ರನ ಹೊಟ್ಟೆ ಸೀಳಿ ಹೊರಗೆ ಬಂದು ಸಹಜ ರೂಪ ಪಡೆದನು. ಶುಕ್ರಾಚಾರ್ಯನು ಸತ್ತನು.



ಆದೇ ಈಗ ಮೃತಸಂಜೀವಿನೀ ವಿದ್ಯೆ ಕಲಿತ ಕಚನು, ಆ ವಿದ್ಯೆಯಿಂದ ಶುಕ್ರಾಚಾರ್ಯನನ್ನು ಬದುಕಿಸಿದನು. ಈವಿಧವಾಗಿ ಕಚನು ಅಲ್ಲಿಗೆ ಬಂದ ಕಾರ್ಯವನ್ನು ಸಾಧಿಸಿಕೊಂಡವನಾದನು.



ಇನ್ನು ಕಚನು ದೇವತೆಗಳ ಕಡೆ ಹೊರಟು ನಿಂತನು. ಅವನನ್ನು ಗಾಢವಾಗಿ ಪ್ರೇಮಿಸಿದ್ದ ದೇವಯಾನಿ ಅವನನ್ನೇ ಮದುವೆಯಾಗಲು ಬಯಸಿದಳು. ಆದರೆ ಗುರುವಿನ ಮಗಳನ್ನು ತಂಗಿಗೆ ಸಮಾನವಾಗಿ ಭಾವಿಸಿದ್ದ ಕಚನು ಅವಳನ್ನು ಮದುವೆಯಾಗಲಿಲ್ಲ.



# ಸುರಪುಷ್ಪಮಾಲೆ

ವಿದರ್ಭ ರಾಜನಾದ ಭೋಜನ ಮಗಳು ಇಂದುಮತಿ. ಅವಳು ಶಾಪದಿಂದಾಗಿ ಮಾನವ ಜನ್ಮದಲ್ಲಿ ಹುಟ್ಟಿದ ಅಪ್ಸರೆ. ಅವಳು ಇಂದ್ರನ ಸಭೆಯಲ್ಲಿ ನೃತ್ಯಮಾಡುವ ಹರಿಣಿ ಎಂಬ ಅಪ್ಸರೆಯಾಗಿದ್ದಳು.



ತೃಣಬಿಂದು ಮಹಾಮುನಿ ತಪಸ್ಸು ಮಾಡುತ್ತಿರುವಾಗ, ಅವನ ತಪಸ್ಸನ್ನು ಕೆಡಿಸಬೇಕೆಂದು ಹೇಳಿ ಇಂದ್ರನು ಹರಿಣಿಯನ್ನು ಭೂಮಿಗೆ ಕಳುಹಿಸಿದನು. ತೃಣಬಿಂದು ದೊಡ್ಡ ತಪಸ್ಸಿನಿಂದ ಇಂದ್ರಪದವಿಗೆ ಬರುತ್ತಾನೇನೋ ಎಂದು ಇಂದ್ರನಿಗೆ ಭಯ.



ಹರಿಣಿಯೇನೋ ತೃಣಬಿಂದುವಿನ ತಪಸ್ಸನ್ನು ಕೆಡಿಸಿದಳಾದರೂ, ಅವನು ಅವಳಿಗೆ ವಶನಾಗದೆ, ಮಾನವಜನ್ಮ ಎತ್ತುವಂತೆ ಅವಳನ್ನು ಶಪಿಸಿದನು. ಶಾಪವಿಮೋಚನೆಗಾಗಿ ಹರಿಣಿ ಪ್ರಾರ್ಥಿಸಿಕೊಂಡಾಗ, ಪೂರ್ವಜನ್ಮದ ನೆನಪು ಬಂದ ಕೂಡಲೇ ಶಾಪವಿಮೋಚನೆಯಾಗುವುದೆಂದನು ತೃಣಬಿಂದು ಮುನಿ.



ಇಂದುಮತಿಗೆ ಯುಕ್ತವಯಸ್ಸು ಬಂದ ಕೂಡಲೇ ಭೋಜನು ಅವಳಿಗೆ ಸ್ವಯಂವರವನ್ನು ಪ್ರಕಟಿಸಿ ನಾನಾ ದೇಶಗಳ ರಾಜರನ್ನು ಆಹ್ವಾನಿಸಿದನು.



ಅಯೋಧ್ಯೆಯ ರಾಜನಾದ ಅಜನು ಸ್ವಯಂವರಕ್ಕೆ ಬರುತ್ತಿರುವಾಗ, ಒಂದು ಆನೆ ಅವನನ್ನು ಇದಿರಿಸಿತು. ಅಜನು ಅದರೊಂದಿಗೆ ಹೋರಾಡಿ ಅದನ್ನು ಕೊಂದನು.



ಸತ್ತ ಆನೆಯಿಂದ ಒಬ್ಬ ಗಂಧರ್ವನು ಹೊರಟು ತಾನು ಶಾಪ ಕಾರಣದಿಂದ ಆನೆಯಾದೆನೆಂದೂ, ತನಗೀಗ ಶಾಪವಿಮೋಚನೆಯಾಯಿತೆಂದೂ ಹೇಳಿ, ಅಜನಿಗೆ ಕೃತಜ್ಞತೆಯ ಕುರುಹಾಗಿ ಸಮ್ಮೋಹನಾಸ್ತ್ರವನ್ನು ಕೊಟ್ಟನು.

ಸ್ವಯಂವರದಲ್ಲಿ ಇಂದುಮತಿ ಅಜನನ್ನು ಆರಿಸಿ ಅವನ ಕೊರಳಿಗೆ ವರಮಾಲೆ ಹಾಕಿದಳು. ಇತರ ರಾಜರಿಗೆಲ್ಲಾ ಇಂದುಮತಿಯನ್ನೇ ಮದುವೆಯಾಗ ಬೇಕೆಂದಿದ್ದುದರಿಂದ, ಅವರೆಲ್ಲರೂ ಅಸೂಯೆ ಯಿಂದ ಅಜನ ಮೇಲೆ ಬಿದ್ದರು.





ಅಜನು ಅವರೆಲ್ಲರನ್ನೂ ಇದಿರಿಸಿ ಯುದ್ಧ ಮಾಡಿದನು. ಗಂಧರ್ವನು ಕೊಟ್ಟ ಸಮ್ಮೋಹ ನಾಸ್ತ್ರವನ್ನು ಪ್ರಯೋಗಿಸಿ ಅಜನು ಕ್ಷಣ ಮಾತ್ರದಲ್ಲಿ ಎಲ್ಲರನ್ನೂ ಮೂರ್ಛೆ ಬೀಳಿಸಿದನು.

ತರುವಾಯ ಅಜನು ಇಂದುಮತಿಯೊಂದಿಗೆ ಅಯೋಧ್ಯೆಗೆ ಬಂದು ಅವಳೊಂದಿಗೆ ರಾಜ್ಯ ಪಾಲನೆ ಮಾಡಿದನು.





ಆ ದಂಪತಿಗಳಿಗೆ ಒಬ್ಬ ಮಗನು ಹುಟ್ಟಿದನು. ಅವನೇ ಕಾಲಕ್ರಮದಲ್ಲಿ ರಾಮಲಕ್ಷ್ಮಣಾದಿಗಳಿಗೆ ತಂದೆಯಾದ ಪುರಾಣ ಪ್ರಸಿದ್ಧನಾದ ದಶರಥನು.



ಬಹಳ ಕಾಲದ ಮೇಲೆ ಒಂದು ದಿನ ನಾರದನು ಸ್ವರ್ಗದಿಂದ ಭೂಮಿಗೆ ಇಳಿಯುತ್ತಿದ್ದಾಗ ಅವನ ವೀಣೆಯನ್ನು ಅಲಂಕರಿಸಿದ ಸುರಪುಷ್ಪಮಾಲೆ ಜಾರಿ ಕೆಳಗೆ ಬಿತ್ತು.



ವನವಿಹಾರ ಮಾಡಿಕೊಂಡಿದ್ದ ಇಂದುಮತಿಯ ಮೇಲೆಯೇ ಆ ಮಾಲೆ ಬಿತ್ತು. ಮರುಕ್ಷಣದಲ್ಲಿ ಅವಳಿಗೆ ಪೂರ್ವಜನ್ಮದ ನೆನಪು ಬಂದು ಶಾಪ ಹೋಯಿತು. ಇಂದುಮತಿಯ ದೇಹ ಬಿಟ್ಟು ಹರಿಣಿ ಅಪ್ಸರೆಯಾಗಿ ಸ್ವರ್ಗಕ್ಕೆ ಹೋದಳು.



# ಮನೆ ಸೇರಿದ ಶತ್ರು

ಸುಮೇರು ಪರ್ವತದಲ್ಲಿ ವಜ್ರನಾಭನೆಂಬ ದಾನವನು ಬ್ರಹ್ಮನನ್ನು ಕುರಿತು ತೀವ್ರ ತಪಸ್ಸು ಮಾಡಿ, ಕಡೆಗೆ ದೇವತೆಗಳಿಂದ ತನಗೆ ಸಾವು ಬಾರದಂತೆ ವರ ಪಡೆದನು.

ವಜ್ರನಾಭನು ದೇವತೆಗಳಿಗೆ ಅಜೇಯನಾದ ಹಾಗೆಯೇ ವಜ್ರಪುರವೆಂಬ ಅವನ ಕೋಟೆಯೂ ದುರ್ಭೇದ್ಯವಾದುದು. ಅದರೊಳಗೆ ಅವನ ಅನುಮತಿ ಇಲ್ಲದೆ ವಾಯುವೂ ನುಸುಳಲಾರ.





ವರಗರ್ವದಿಂದ ವಜ್ರನಾಭನು ಒಬ್ಬೊಬ್ಬ ರಾಜನನ್ನೂ ಯುದ್ಧದಲ್ಲಿ ಜಯಿಸಿ ಒಂದೊಂದು ರಾಜ್ಯವನ್ನೂ ನಿರ್ಮೂಲಮಾಡಿ, ಲೋಕದೊಳಗೆಲ್ಲಾ ಪ್ರಜೆಗಳ ಆಕ್ರಂದನವೇಳುವಂತೆ ಮಾಡಿದನು.

ಹೀಗೆ ಭೂಲೋಕವನ್ನೆಲ್ಲಾ ಜಯಿಸಿದಷ್ಟಕ್ಕೆ ತೃಪ್ತನಾಗದೆ ವಜ್ರನಾಭನು, ಸ್ವರ್ಗದ ಮೇಲೆ ದಂಡೆತ್ತಿ ಹೋದನು. ದೇವತೆಗಳ ಮೇಲೂ ಅವನಿಗೇನೂ ಭಯವಿಲ್ಲವಷ್ಟೆ ?





ತನ್ನೊಂದಿಗೆ ಯುದ್ಧಕ್ಕೆ ಬಾರೆಂದೂ, ಇಲ್ಲವೇ ತನಗೆ ಶರಣಾಗತನಾಗೆಂದೂ ವಜ್ರನಾಭನು ಇಂದ್ರನಿಗೆ ಸುದ್ದಿ ಕಳುಹಿಸಿದನು. ಏನು ಮಾಡುವುದೆಂದು ಇಂದ್ರನಿಗೆ ತೋರಲಿಲ್ಲ.



ದೇವತೆಗಳು ತಮ್ಮೊಳಗೆ ಮಾತಾಡಿಕೊಂಡು. ಯುದ್ಧದಲ್ಲಿ ತಾವು ಜಯಿಸಲು ಸಾಧ್ಯವಾಗದುದರಿಂದ, ಅವನ ದುರ್ಗವನ್ನು ರಹಸ್ಯವಾಗಿ ಪ್ರವೇಶಿಸಿ ಧ್ವಂಸ ಮಾಡಬೇಕೆಂದುಕೊಂಡರು. ಆದರೆ ವಜ್ರಪುರಿ ದುರ್ಭೇದ್ಯವಾದುದಷ್ಟೆ ?



ವಜ್ರನಾಭನನ್ನು ದೇವತೆಗಳು ಕೊಲ್ಲಲು ಸಾಧ್ಯವಿಲ್ಲದಿದ್ದರೂ ಮನುಷ್ಯರು ಕೊಲ್ಲಬಹುದು. ಆದಕ್ಕಾಗಿ ದ್ವಾರಕೆಯಲ್ಲಿರುವ ಕೃಷ್ಣನ ಮಗ ಪ್ರದ್ಯುಮ್ನನನ್ನು ಉಪಯೋಗಿಸಬಹುದೆಂದು ಇಂದ್ರನಿಗೆ ತೋರಿತು.



ವಜ್ರನಾಭನ ಮಗಳು ಪ್ರಭಾವತಿ ತುಂಬಾ ಸೌಂದರ್ಯವತಿ. ಮತ್ತು ಒಳ್ಳೆಯ ನೃತ್ಯಗಾತಿ. ವಜ್ರನಾಭನಿಗೆ ಮಗಳೆಂದರೆ ಪಂಚಪ್ರಾಣ.



ಒಂದು ದಿನ ಪ್ರಭಾವತಿ ಕ್ರೀಡಾ ಸರೋವರದ ಬಳಿಯಲ್ಲಿ ಕುಳಿತುಕೊಂಡಿರುವಾಗ, ಇಂದ್ರನು ಕಳುಹಿಸಿದ ಕೆಲವು ರಾಜ ಹಂಸಗಳು ಅವಳ ಸಮೀಪದಲ್ಲೇ ಎರಗಿದವು. ಅವುಗಳು ಪ್ರಭಾವತಿಯ ದೃಷ್ಟಿಯನ್ನು ಆಕರ್ಷಿಸಿದುವು.



ಆ ಹಂಸಗಳು ತಮ್ಮ ತಮ್ಮೊಳಗೆ “ಈ ಪ್ರಭಾವತಿ ಎಷ್ಟು ಚೆಂದ! ಇವಳಿಗೆ ದ್ವಾರಕೆಯಲ್ಲಿರುವ ಪ್ರದ್ಯುಮ್ನನೇ ತಕ್ಕ ಗಂಡ.” ಎಂದು ಹೇಳಿಕೊಂಡುವು. ಆ ಮಾತುಗಳನ್ನು ಪ್ರಭಾವತಿ ಕೇಳಿಸಿಕೊಂಡಳು.

ಇಷ್ಟರಲ್ಲಿ ವಜ್ರನಾಭನು ತನ್ನ ಕುಮಾರಿಗೆ ನಾಟ್ಯಶಿಕ್ಷಣ ಕೊಡಿಸಲು ಜಗತ್ಪ್ರಸಿದ್ಧನಾದ ಭದ್ರನೆಂಬ ನಾಟ್ಯಾಚಾರ್ಯನನ್ನು ಕರೆಯಿಸಿದನು. ಭದ್ರನು ವಜ್ರಪುರಿಗೆ ಬರುವಾಗ ದೇವತೆಗಳು ಅವನನ್ನು ಅಪಹರಿಸಿಕೊಂಡು ಹೋದರು.





ದೇವತೆಗಳು ಭದ್ರನ ಹಳೆಯ ವಸ್ತ್ರಭೂಷಣ ಆಭರಣಗಳನ್ನೆಲ್ಲ ತೆಗೆದು. ಬೆಲೆ ಬಾಳುವ ದಿವ್ಯಾಭರಣಗಳನ್ನು ಕೊಟ್ಟು ಸುಮ್ಮನಾಗಿಸಿದರು. ಅವನ ವಸ್ತ್ರಾಭರಣಗಳನ್ನು ಪ್ರದ್ಯುಮ್ನನಿಗೆ ಧರಿಸಲು ಕೊಟ್ಟು ಅವನನ್ನು ಪ್ರಭಾವತಿಯ ಬಳಿಗೆ ಕಳುಹಿಸಿದರು.

ಭದ್ರನ ವೇಷದಲ್ಲಿ ಪ್ರದ್ಯುಮ್ನನು ವಜ್ರಪುರಿಯನ್ನು ಸೇರಿ ಪ್ರಭಾವತಿಯೊಂದಿಗೆ ತಾನು ಯಾರೆಂಬುದನ್ನು ಹೇಳಿದನು, ಪ್ರಭಾವತಿಗೆ ಪರಮಾನಂದವಾಯಿತು.





ಪ್ರಭಾವತೀ ಪ್ರದ್ಯುಮ್ನರು ರಹಸ್ಯವಾಗಿ ಗಾಂಧರ್ವ ವಿವಾಹ ಮಾಡಿಕೊಂಡರು. ಯಾವಾಗಲೂ ದಂಡಯಾತ್ರೆಯಲ್ಲಿರುವ ವಜ್ರನಾಭನಿಗೆ ಈ ಸಂಗತಿ ತಿಳಿಯದು. ಕಾಲಕ್ರಮದಲ್ಲಿ ಪ್ರಭಾವತಿ ಮಗನನ್ನು ಹಡೆದಳು.

ಪ್ರಭಾವತಿ ಪುತ್ರನನ್ನು ಹಡೆದಾಗಲೇ ವಜ್ರನಾಭನು ನಿಜವನ್ನು ತಿಳಿದು ಪ್ರದ್ಯುಮ್ನನೊಂದಿಗೆ ಯುದ್ಧಕ್ಕೆ ನಿಂತನು. ಕೃಷ್ಣನು ಕಳುಹಿಸಿದ ಚಕ್ರಾಯುಧದಿಂದ ಪ್ರದ್ಯುಮ್ನನು ವಜ್ರನಾಭನನ್ನು ಕೊಂದುಬಿಟ್ಟನು.



# ಅಂಬರೀಷ



ನಾಭಾಗನ ಮಗನಾದ ಅಂಬರೀಷನು ಮಹಾ ವಿಷ್ಣುಭಕ್ತನು. ಅವನ ಭಕ್ತಿಗೆ ಮೆಚ್ಚಿ ವಿಷ್ಣು ಅವನಿಗೆ ತನ್ನ ಸುದರ್ಶನ ಚಕ್ರವನ್ನು ನೆನೆದಾಗ ಕೊಡುವೆನೆಂದು ಹೇಳಿದ್ದನು. ಆದರೆ ಅಂಬರೀಷನಿಗೆ ಅದರಿಂದ ಉಪಯೋಗವೇನಿರಲಿಲ್ಲ.

ಮಹಾರಾಜನಾದ ಅಂಬರೀಷನು ಅನೇಕ ಅಶ್ವಮೇಧ ಯಾಗಗಳನ್ನು ಮಾಡಿದ್ದನು. ಯಾಗಗಳು ಮುಗಿದಾಗಲೆಲ್ಲ ಅಪರಿಮಿತವಾಗಿ ದಾನ ಧರ್ಮಗಳನ್ನು ಮಾಡುತ್ತಿದ್ದನು.







ಅಂಬರೀಷನು ಏಕಾದಶೀ ವ್ರತವನ್ನು ತಪ್ಪದೆ ಆಚರಿಸುತ್ತಿದ್ದನು. ದ್ವಾದಶಿಯ ಘಳಿಗೆ ಮುಗಿಯುವುದರೊಳಗೆ ಪಾರಣೆ ಮುಗಿಸಿ ಭೋಜನ ಮಾಡುವನು.



ಒಂದುಸಾರಿ ದ್ವಾದಶಿಯ ಹೊತ್ತಿಗೆ ಅತಿಥಿಯಾಗಿ ದೂರ್ವಾಸನು ಬಂದನು. ಅಂಬರೀಷನು ದೂರ್ವಾಸನಿಗೆ ಸ್ವಾಗತ ಹೇಳಿ ದ್ವಾದಶಿ ಪಾರಣೆಗೆ ಬರಬೇಕೆಂದು ಆಹ್ವಾನಿಸಿದನು. ಸ್ನಾನ ಮಾಡಿ ಬರುವೆನೆಂದು ದೂರ್ವಾಸನು ನದಿಗೆ ಹೋದನು.



ನದಿಗೆ ಹೋದ ದೂರ್ವಾಸನು ಎಷ್ಟು ಹೊತ್ತಾದರೂ ಬಾರದಿರಲು, ದ್ವಾದಶಿಘಳಿಗೆ ಮೀರುವ ಹೊತ್ತು ಸಮೀಪಿಸಲು, ಅತಿಥಿಯನ್ನು ಬಿಟ್ಟು ಭೋಜನ ಮಾಡಲಾಗದೆ, ಅಂಬರೀಷನು ಆ ಘಳಿಗೆಯಲ್ಲಿ ತೀರ್ಥಪಾನ ಮಾಡಿದನು.



ಮರು ನಿಮಿಷದಲ್ಲೇ ದೂರ್ವಾಸನು ಬಂದು "ನನಗಿಂತ ಮೊದಲು ತೀರ್ಥ ತೆಗೆದುಕೊಂಡು ಅತಿಥಿಯನ್ನು ಅವಮಾನಿಸಿದೆಯಾ ?" ಎಂದು ಕೋಪದಿಂದ ಕೂಗಾಡಿದನು.

ದೂರ್ವಾಸನು ತನ್ನ ಜಟೆಯೊಂದನ್ನು ಕಿತ್ತು ನೆಲಕ್ಕೆ ಬಡಿಯಲು, ಮಹಾಕೃತ್ಯ ಎಂಬ ಭೂತವು ಹುಟ್ಟಿ ಅಂಬರೀಷನ ಮೇಲೆ ಧುಮುಕಿತು.







ಆ ಕ್ಷಣದಲ್ಲಿ ಅಂಬರೀಷನು ಸುದರ್ಶನ ಚಕ್ರವನ್ನು ಸ್ಮರಿಸಿದನು. ಆ ಚಕ್ರವು ಮಹಾಕೃತ್ಯ ಭೂತವನ್ನು ಕೊಂದು ಹಾಕಿತು.

ಅಷ್ಟಕ್ಕೆ ಸುಮ್ಮನಾಗದೆ ಆ ಚಕ್ರವು ದೂರ್ವಾಸನ ಕಡೆಗೆ ಹೊರಳಿತು. ಅದನ್ನು ತಡೆಯಲು ದೂರ್ವಾಸನ ತಪಃಶಕ್ತಿ ಸಾಲಲಿಲ್ಲ.





ದೂರ್ವಾಸನು ಓಡಲು ತೊಡಗಿ ಅರಣ್ಯದಲ್ಲಿ ಅಡಗಿಕೊಂಡನು. ಸುದರ್ಶನ ಚಕ್ರದ ರಭಸಕ್ಕೆ ಅರಣ್ಯಕ್ಕೆ ಕಾಡುಕಿಚ್ಚು ಹತ್ತಿಕೊಂಡಿತು. ದೂರ್ವಾಸನು ಸಮುದ್ರದೊಳಗೆ ಹೋಗಿ ಅಡಗಿದನು. ಚಕ್ರವು ಸಮುದ್ರದೊಳಗೆ ನುಗ್ಗಿ ಕಲ್ಲೋಲವೆಬ್ಬಿಸಿತು.

ಎಲ್ಲಿಯೂ ರಕ್ಷಣೆಕಾಣದೆ ದೂರ್ವಾಸನು ವೈಕುಂಠಕ್ಕೆ ಓಡಿ ವಿಷ್ಣುವಿನ ಕಾಲಿಗೆ ಬಿದ್ದನು. ಅಂಬರೀಷನನ್ನೆ ಮರೆ ಹೋಗಬೇಕೆಂದು ವಿಷ್ಣು ಅವನಿಗೆ ಹೇಳಿದನು.





ದೂರ್ವಾಸನು ಮತ್ತೆ ಅಂಬರೀಷನ ಬಳಿಗೆ ಬಂದು ಶರಣಾಗತನಾದನು. ಆಗಲೇ ವಿಷ್ಣು ಚಕ್ರವು ದೂರ್ವಾಸನ ಬೆನ್ನು ಬಿಟ್ಟು ಶಾಂತವಾಗಿ ಮಾಯವಾಯಿತು. ಒಬ್ಬ ಸಜ್ಜನನಿಂದಾಗಿ ಒಬ್ಬ ದುರಹಂಕಾರಿಗೆ ಬುದ್ಧಿ ಬಂತು.



# ತುಲಸೀ ಜನ್ಮವೃತ್ತಾಂತ

ಇಂದ್ರನು ಒಮ್ಮೆ ಶಿವನನ್ನು ನೋಡಲು ಕೈಲಾಸಕ್ಕೆ ಹೋಗಿ. ಒಂದು ಕಲ್ಲಿನ ಮೇಲೆ ನಿಶ್ಚಲನಾಗಿ ಕುಳಿತಿದ್ದ ವ್ಯಕ್ತಿಯನ್ನು ನೋಡಿ. ಶಿವನಬಳಿಗೆ ಹೋಗಲು ದಾರಿ ಕೇಳಿದನು. ಆ ವ್ಯಕ್ತಿ ಮಾತಾಡದಿರುವುದನ್ನು ನೋಡಿ ಇಂದ್ರನು ತನ್ನ ವಜ್ರಾಯುಧದಿಂದ ಆವನ ನಡುನೆತ್ತಿಗೆ ಹೊಡೆದನು.



ಆ ಕೂಡಲೇ ಆ ವ್ಯಕ್ತಿಯ: ತಲೆಯೊಳಗಿನಿಂದ ದಾರುಣವಾದ ಅಗ್ನಿಜ್ವಾಲೆಗಳೆದ್ದುವು. ಆ ವ್ಯಕ್ತಿ ಸಾಕ್ಷಾತ್ ಶಿವನೇ ! ಇಂದ್ರನು ಶಿವನ ಮುಂದೆ ಕ್ಷಮೆ ಕೇಳಿಕೊಂಡು, ಆ ಜ್ವಾಲೆಯಿಂದ ತಾನು ಬೂದಿಯಾಗದಂತೆ ತಪ್ಪಿಸಿಕೊಂಡನು.



ಶಿವನ ನೆತ್ತಿಯಿಂದೆದ್ದ ಆ ಅಗ್ನಿಜ್ವಾಲೆ ಆಕಾಶದಲ್ಲಿ ಹೋಗಿ ಸಮುದ್ರದಲ್ಲಿ ಬಿದ್ದು ಒಂದು ಶಿಶುವಿನ ರೂಪತಾಳಿ ತೇಲಿತು.



ಕೋಪಾಗ್ನಿಯಿಂದ ಹುಟ್ಟಿದ ಆ ಮಗು ಭಯಂಕರ ಶಕ್ತಿಯಿಂದ ಬೆಳೆಯಿತು. ಸಮುದ್ರನು ಆ ಮಗುವನ್ನು ಬ್ರಹ್ಮನಿಗೆ ಒಪ್ಪಿಸಲು, ಆ ಬಾಲಕನ ಭಾರವನ್ನು ಭರಿಸಲು ಬ್ರಹ್ಮನಿಗೂ ಅಸಾಧ್ಯವಾಯಿತು. ಆ ಬಾಲನೇ ಜಲಂಧರನೆಂಬ ರಾಕ್ಷಸ.



ಕಾಲಕ್ರಮ:ದಲ್ಲಿ ಜಲಂಧರನು ರಾಕ್ಷಸರಿಗೆ ಪ್ರಭುವಾದನು. ಅವನು ಭೂಮಿಯ ರಾಜರನ್ನೆಲ್ಲಾ ಜಯಿಸಿ, ದೇವತೆಗಳನ್ನು ಕೂಡಾ ಜಯಿಸಲು ನಿಶ್ಚಯಿಸಿದನು.



ಅವನು ದೊಡ್ಡ ಸೇನೆಯೊಂದಿಗೆ ಇಂದ್ರನ ಅಮರಾವತಿಗೆ ದಾಳಿಯಿಟ್ಟನು. ಇಂದ್ರನ ಮೇಲೆ ಶಿವನಿಗಿದ್ದ ಕೋಪವು ಈ ರೂಪದಲ್ಲಿ ಮತ್ತೆ ಇಂದ್ರನ ಮೇಲೆಯೇ ಬಂದಿತು. ದೇವತೆಗಳು ಅಸಹಾಯರಾದರು.

ಯುದ್ಧದಲ್ಲಿ ಇಂದ್ರನೂ. ಅವನ ದೇವ ಪರಿವಾರವೂ ಸೋತುಹೋಗಿ ಜಲಂಧರನು ಅಮರಾವತಿಯನ್ನು ವಶಪಡಿಸಿಕೊಂಡನು. ಸೋತ ಇಂದ್ರನು ಕೈಲಾಸಕ್ಕೆ ಹೋಗಿ ಜಲಂಧರನನ್ನು ನಿಗ್ರಹಿಸಬೇಕೆಂದು ಶಿವನನ್ನೇ ಪ್ರಾರ್ಥಿಸಿದನು.





ಈ ಬಗೆಯ ಅಹಂಕಾರದ ಚೇಷ್ಟೆಗಳನ್ನು ಬಿಡುವಂತೆ ಶಿವನು ಜಲಂಧರನಿಗೆ ಬುದ್ಧಿ ಹೇಳಿದನು. ಅದೇನೂ ಪ್ರಯೋಜನವಾಗದೆ ಶಿವನು ಸ್ವಯಂ ಜಲಂಧರನನ್ನು ಸಂಹರಿಸಬೇಕಾಗಿ ಬಂತು. ವಿಚಿತ್ರವೆಂದರೆ, ಜಲಂಧರನನ್ನು ಏನು ಮಾಡಲಿಕ್ಕೂ ಶಿವನಿಂದ ಸಾಧ್ಯವಿರಲಿಲ್ಲ !

ಜಲಂಧರನನ್ನು ಕಾಪಾಡುವ ಮಹಾಶಕ್ತಿಯೊಂದಿದ್ದಿತು. ಅದು ಅವನ ಹೆಂಡತಿಯಾದ ಬೃಂದಾದೇವಿ ನಿತ್ಯವೂ ಮಾಡುವ ವಿಷ್ಣುಪೂಜೆ ! ಅವಳು ತನ್ನ ಗಂಡನ ಕ್ಷೇಮಕ್ಕಾಗಿ ಧ್ಯಾನಿಸುತ್ತಿರುವಾಗ ಅವನಿಗೆ ಏನೂ ಆಗದು.





ದೇವತೆಗಳು ತಮಗೆ ಸಹಕರಿಸಬೇಕೆಂದು ವಿಷ್ಣು ವನ್ನು ಬೇಡಿಕೊಂಡರು. ವಿಷ್ಣುವಿಗೆ ಇಕ್ಕಟ್ಟಿನ ಪರಿಸ್ಥಿತಿ. ಬೃಂದೆಯ ಭಕ್ತಿಯೇ ರಾಕ್ಷಸನ ಅಂಗರಕ್ಷೆ. ಆದರೆ ಜಲಂಧರನು ಸಾಯದೆ ವಿಧಿಯಿಲ್ಲ.



ವಿಷ್ಣು ಜಲಂಧರನ ರೂಪದಲ್ಲಿ ಬೃಂದೆಯ ಬಳಿಗೆ ಬಂದನು. ತನ್ನ ಗಂಡ ವಿಜಯಶಾಲಿ ಯಾಗಿ ಬಂದನೆಂದುಕೊಂಡು ಬೃಂದೆ ಧ್ಯಾನ ದಿಂದೆದ್ದಳು. ಆ ಕ್ಷಣದಲ್ಲೇ ಅತ್ತ ಶಿವನು ಜಲಂಧರನನ್ನು ಕೊಂದನು.



ಆ ಮೇಲೆ ನಡೆದ ಮೋಸವನ್ನು ತಿಳಿದು ಬೃಂದೆ ತನ್ನ ಗಂಡನ ಚಿತಿಯ ಮೇಲೆ ಸಹಗಮನ ಮಾಡಿದಳು. ಅವಳ ಚಿತಾ ಭಸ್ಮದಿಂದ ತುಲಸೀ ಗಿಡ ಹುಟ್ಟಿತು. ಅದು ವಿಷ್ಣುವಿಗೆ ಅತ್ಯಂತ ಪ್ರೀತಿಪಾತ್ರವಾದ ಗಿಡ. ಆದುದರಿಂದ ಎಲ್ಲರೂ ತುಲಸಿಯನ್ನು ಆರಾಧಿಸಿ, ತುಲಸೀದಳಗಳಿಂದ ವಿಷ್ಣುವನ್ನು ಪೂಜಿಸುವರು.

# ಚಂದ್ರಹಾಸ



ಕೇರಳ ರಾಜನನ್ನು ಶತ್ರುಗಳು ಕೊಂದುಬಿಟ್ಟರು. ಅವನ ಹೆಂಡತಿ ಗಂಡನೊಂದಿಗೇ ಸಹಗಮನ ಮಾಡಿದಳು. ಅವರ ಮಗನಾದ ಚಂದ್ರಹಾಸನು ಹಸುಮಗು. ಅವನನ್ನು ಒಬ್ಬಳು ದಾಸಿ ಕುಂತಲ ದೇಶಕ್ಕೆ ಒಯ್ದಳು.



ಕುಂತಲ ರಾಜನಿಗೆ ಮಕ್ಕಳಿರಲಿಲ್ಲ. ಮಂತ್ರಿ ದುಷ್ಟಬುದ್ಧಿ ತನ್ನ ಮಗನೇ ರಾಜನಾಗಬೇಕೆಂದು ಆಶಿಸುತ್ತಿದ್ದನು. ಆದರೆ ಒಂದು ದಿನ, ಆಸ್ಥಾನದ ಜೋಯಿಸನು ಚಂದ್ರಹಾಸನನ್ನು ನೋಡಿ " ಈ ಹುಡುಗನು ರಾಜನಾಗುತ್ತಾನೆ ! " ಎಂದನು.



ಚಂದ್ರಹಾಸನು ಬದುಕಿದ್ದರೆ ತನ್ನ ಮಗನು ರಾಜನಾಗಲಾರನೆಂದು ದುಷ್ಟಬುದ್ಧಿ ಚಂದ್ರಹಾಸನನ್ನು ಕೊಲ್ಲಿಸಲು ಕಟುಕರನ್ನು ನಿಯಮಿಸಿದನು. ಆದರೆ ಆ ಹುಡುಗನನ್ನು ಕೊಲ್ಲಲು ಕಟುಕರಿಗೆ ಕೈಬಾರದೆ ಕಾಡಿನಲ್ಲಿ ಬಿಟ್ಟು ಹೋಗಿಬಿಟ್ಟರು.



ಕುಳಿಂದಕನೆಂಬ ರಾಜನು ಬೇಟೆಯಾಡಲು ಬಂದು, ಚಂದ್ರಹಾಸನನ್ನು ನೋಡಿ, ಮಕ್ಕಳಿಲ್ಲದವನಾದುದರಿಂದ, ಅವನನ್ನೇ ತನ್ನ ಮಗನಾಗಿ ಬೆಳೆಸ ತೊಡಗಿದನು. ಚಂದ್ರಹಾಸನು ಸಾಯಲಿಲ್ಲವೆಂದು ತಿಳಿದು ದುಷ್ಟಬುದ್ಧಿ ಅವನನ್ನು ತನ್ನ ಪರಿವಾರದಲ್ಲಿ ಇರಿಸಿಕೊಂಡನು.



ದುಷ್ಟಬುದ್ಧಿಯ ಮಗನಾದ ಮದನನು ಒಂದು ಪ್ರಾಂತಕ್ಕೆ ರಾಜ ಪ್ರತಿನಿಧಿಯಾಗಿದ್ದನು. ದುಷ್ಟಬುದ್ಧಿ ಒಂದು ಪತ್ರವನ್ನು ಬರೆದು, ಅದನ್ನು ಚಂದ್ರಹಾಸನ ಮೂಲಕ ಮದನನಿಗೆ ಕಳುಹಿಸಿದನು. ಚಂದ್ರಹಾಸನು ರಾಜಪ್ರತಿನಿಧಿಯ ಮನೆಯ ಆವರಣದೊಳಗೆ ಹೋಗಿ, ಬಳಲಿಕೆಯಿಂದ ಒಂದು ಮರದ ಕೆಳಗೆ ಮಲಗಿ ನಿದ್ರಿಸಿದನು.



ದುಷ್ಟಬುದ್ಧಿಯ ಮಗಳಾದ ವಿಷಯೆ ತನ್ನ ಅಣ್ಣನ ಮನೆಯಲ್ಲಿದ್ದಳು. ಅವಳು ನಿದ್ದೆಯಲ್ಲಿರುವ ಚಂದ್ರಹಾಸನನ್ನು ನೋಡಿ ಮೋಹಿಸಿ, ಅವನ ಹತ್ತಿರವಿದ್ದ ಪತ್ರವನ್ನು ತೆಗೆದು ಓದಿದಳು. ಅದರಲ್ಲಿ ಚಂದ್ರಹಾಸನಿಗೆ " ವಿಷ " ಕೊಡಬೇಕೆಂದು ಬರೆದಿದ್ದಿತು. ಅವಳು " ವಿಷ " ಎಂಬ ಮಾತನ್ನು " ವಿಷಯೆ " ಎಂದು ತಿದ್ದಿಟ್ಟಳು.

ತರುವಾಯ ಚಂದ್ರಹಾಸನು ಮದನನ ಬಳಿಗೆ ಹೋಗಿ ಪತ್ರವನ್ನು ಕೊಟ್ಟನು. ಅದರಲ್ಲಿ ಚಂದ್ರಹಾಸನಿಗೆ ವಿಷಯೆಯನ್ನು ಕೊಡಬೇಕೆಂದಿದ್ದುದರಿಂದ, ಮದನನು ಅವರಿಬ್ಬರಿಗೆ ಮದುವೆ ಮಾಡಿ ಮುಗಿಸಿದನು.





ತನ್ನ ಪಥಕವು ತಿರುಗಿ ಹೊಡೆದ ಸಂಗತಿ ದುಷ್ಟಬುದ್ಧಿಗೆ ತಿಳಿಯಿತು. ಚಂದ್ರಹಾಸನು ಸಾಯುವುದರ ಬದಲಾಗಿ ತನ್ನ ಅಳಿಯನಾಗಿ ಬಿಟ್ಟನಲ್ಲ! ಆದರೂ ಚಂದ್ರಹಾಸನನ್ನು ಕೊಲ್ಲುವ ಆಲೋಚನೆಯನ್ನು ದುಷ್ಟಬುದ್ಧಿ ಬಿಡಲಿಲ್ಲ.

ದುಷ್ಟಬುದ್ಧಿ ಚಂದ್ರಹಾಸನೊಂದಿಗೆ, "ಈ ದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಚಂಡಿಕಾಲಯಕ್ಕೆ ಹೋಗಿ ದೇವಿಯನ್ನು ಪೂಜಿಸಿ ಬಾ. ಅದು ಎಲ್ಲಾ ಶುಭಗಳಿಗೂ ಅಗತ್ಯವಾದ ಮುಹೂರ್ತ ವೇಳೆ" ಎಂದನು. ತನ್ನ ತಂದೆ ಚಂದ್ರಹಾಸನೊಂದಿಗೆ ಹಾಗೆ ಹೇಳುವುದನ್ನು ಮದನನೂ ಕೇಳಿದನು.





ಅರ್ಧರಾತ್ರಿಯ ವೇಳೆಯಲ್ಲಿ ಚಂದ್ರಹಾಸನು ಹೊರಡಲಿರುವಾಗ ವಿಷಯೆಗೆ ಸಂದೇಹವಾಗಿ ಚಂಡಿಕಾಲಯಕ್ಕೆ ಹೋಗಬೇಡವೆಂದು ತಡೆದಳು. ಅವನಿಗೆ ಬದಲಾಗಿ ತಾನು ಹೋಗಿ ದೇವಿಯನ್ನು ಪೂಜಿಸಿ ಬರುವೆನೆಂದು ಹೇಳಿ ಮದನನು ಹೋದನು. ಆಲಯದಲ್ಲಿ ಕಾದಿದ್ದ ಹಂತಕರು ಮದನನ್ನು ಕೊಂದರು.



ತನ್ನ ಪ್ರಯತ್ನ ವಿಫಲವಾದುದು ಮಾತ್ರವಲ್ಲದೆ ತನ್ನ ಮಗನೇ ಸತ್ತುದನ್ನು ನೋಡಿ, ದುಷ್ಟಬುದ್ಧಿ ಎದೆಯೊಡೆದು ಸತ್ತುಹೋದನು.



ರಾಜನು ತನ್ನ ಮಗಳನ್ನು ಕೂಡಾ ಚಂದ್ರಹಾಸನಿಗೇ ಕೊಟ್ಟು ಮದುವೆ ಮಾಡಿದನು. ರಾಜನ ಅನಂತರ ಚಂದ್ರಹಾಸನೇ ರಾಜನಾಗಿ ಚಿರಕಾಲದ ವರೆಗೆ ದೊಡ್ಡ ರಾಜನೆಂದು ಖ್ಯಾತಿ ಪಡೆದನು.



# ಶ್ಯಮಂತಕಮಣಿ

ಸತ್ರಾಜಿತ್ತು ಎಂಬ ರಾಜನು ಸೂರ್ಯನನ್ನು ಮೆಚ್ಚಿಸಿ ಶ್ಯಮಂತಕಮಣಿಯನ್ನು ಬಹುಮಾನ ವಾಗಿ ಪಡೆದನು. ಅದು ದಿನಾ ಎಂಟು ಖಂಡಿ ಬಂಗಾರವನ್ನು ಕೊಡುವಂತಹುದು.

ಒಂದು ಸಾರಿ ಕೃಷ್ಣನು ಸತ್ರಾಜಿತ್ತುವಿನ ಬಳಿಗೆ ಬಂದು ಶ್ಯಮಂತಕಮಣಿಯನ್ನು ಕುರಿತು ವಿಚಾರಿಸಿ, ಅದನ್ನು ತನಗೆ ಕೊಡುವಂತೆ ಕೇಳಿದನು. ಆದರೆ ಸತ್ರಾಜಿತ್ತು ಕೃಷ್ಣನಿಗೆ ಮಣಿಯನ್ನು ಕೊಡಲು ನಿರಾಕರಿಸಿದನು.





ಮುಂದೆ ಒಂದಾನೊಂದು ದಿನ ಸತ್ರಾಜಿತ್ತುವಿನ ತಮ್ಮ ಪ್ರಸೇನನು ಆ ಮಣಿಯನ್ನು ಧರಿಸಿ ಕೊಂಡು ಬೇಟೆಯಾಡಲು ಹೋದನು.



ಅರಣ್ಯದಲ್ಲಿ ಪ್ರಸೇನನು ಬೇಟೆಯಾಡುತ್ತಿದ್ದಾಗ ಒಂದು ಸಿಂಹವು ಅವನನ್ನು ಕೊಂದು, ಶ್ಯಮಂತಕ ಮಣಿಯನ್ನು ಎತ್ತಿಕೊಂಡು ಹೋಯಿತು.

ಆಗ ಜಾಂಬವಂತನು ಸಿಂಹವನ್ನು ಇದಿರಿಸಿ ಹೊಡೆದು ಕೊಂದು, ಶ್ಯಮಂತಕ ಮಣಿಯನ್ನು ತೆಗೆದುಕೊಂಡು ಹೋಗಿ ತನ್ನ ಕುಮಾರಿಯಾದ ಜಾಂಬವತಿಗೆ ಕೊಟ್ಟನು.





ಶ್ಯಮಂತಕಮಣಿಯನ್ನು ಕೃಷ್ಣನೇ ಕದ್ದುಕೊಂಡು ಹೋದನೆಂದು ಅಪವಾದ ಹುಟ್ಟಿತು. ಈ ಅಪವಾದವನ್ನು ಕಳೆದುಕೊಳ್ಳಲು ಕೃಷ್ಣನು ಪ್ರಸೇನನ ಜಾಡು ಹುಡುಕುತ್ತಾ, ಅರಣ್ಯದಲ್ಲಿ ಜಾಂಬವಂತನ ಗುಹೆಗೆ ಬಂದು, ಅವನೊಂದಿಗೆ ಯುದ್ಧ ಮಾಡಿ ಸೋಲಿಸಿದನು.



ಜಾಂಬವಂತನು ಕೃಷ್ಣನನ್ನು ಮೆಚ್ಚಿ ಶ್ಯಮಂತಕ ಮಣಿಯನ್ನು ಕೊಟ್ಟು, ತನ್ನ ಮಗಳು ಜಾಂಬವತಿಯನ್ನೂ ಕೃಷ್ಣನಿಗೇ ಮದುವೆ ಮಾಡಿ ಕೊಟ್ಟನು. ಕೃಷ್ಣನ ಎಂಟು ಮಂದಿ ಪತ್ನಿಯರಲ್ಲಿ ಅವಳೂ ಒಬ್ಬಳು.



ಕೃಷ್ಣನು ಶ್ಯಮಂತಕಮಣಿಯನ್ನು ತೆಗೆದುಕೊಂಡು ಹೋಗಿ ಸತ್ರಾಜಿತ್ತುವಿಗೆ ಕೊಟ್ಟನು. ಸತ್ರಾಜಿತ್ತು ಸಂತೋಷಪಟ್ಟು ಕೃಷ್ಣನಿಗೆ ತನ್ನ ಮಗಳು ಸತ್ಯಭಾಮೆಯನ್ನು ಕೊಟ್ಟು ಮದುವೆ ಮಾಡಿದನು.



ನ್ಯಾಯವಾಗಿ ಸತ್ಯಭಾಮೆಯನ್ನು ಮದುವೆಯಾಗ ಬೇಕಾದವನು ಶತಧನ್ವನು. ಕೃತವರ್ಮ ಮತ್ತು ಅಕ್ರೂರ ಎಂಬ ಯಾದವರು ಶತಧನ್ವನನ್ನು ಕೆರಳಿಸಿ ಸತ್ರಾಜಿತ್ತುವನ್ನು ಕೊಂದು ಶ್ಯಮಂತಕಮಣಿಯನ್ನು ವಶಪಡಿಸಿ ತರಲು ಪ್ರೇರೇಪಿಸಿದರು.



ಅವರ ಪ್ರೇರೇಪಣೆಯಂತೆ ಶತಧನ್ವನು ಹೋಗಿ ಸತ್ರಾಜಿತ್ತು ನಿದ್ರೆಯಲ್ಲಿರುವಾಗ ಅವನನ್ನು ಕೊಲೆ ಮಾಡಿಬಿಟ್ಟನು.



ಸತ್ಯಭಾಮೆ ತನ್ನ ತಂದೆಯ ಮರಣಕ್ಕೆ ದುಃಖಿಸುತ್ತ, ಕೃಷ್ಣನನ್ನು ಶತಧನ್ವನ ಮೇಲೆ ಯುದ್ಧಕ್ಕೆ ಕಳುಹಿಸಿದಳು. ಯುದ್ಧದಲ್ಲಿ ಶತಧನ್ವನು ಸತ್ತುಹೋದನು.



ಆದರೆ ಶ್ಯಮಂತಮಣಿ ಶತಧನ್ವನ ಹತ್ತಿರ ಇರಲಿಲ್ಲ. ಅದು ಅವನ ಮಗ ಭೋಜನಬಳಿಗೆ ಸೇರಿತ್ತು. ಅಕ್ರೂರನು ಅದನ್ನು ತಂದು ಕೃಷ್ಣನಿಗೆ ಕೊಟ್ಟನು. ಶ್ಯಮಂತಕಮಣಿಯಿಂದ ಉಂಟಾದ ಹಿಂಸೆಗಳಿಗೆ ಪರಿಹಾರವಾಗಿ ಅಕ್ರೂರನು ಯಜ್ಞಗಳನ್ನು ಮಾಡಿದನು.

# ಇಂದ್ರನಾದ ರಾಜ



ಒಂದು ಸಾರಿ ಇಂದ್ರನಿಗೆ ವಿಶ್ವರೂಪನೆಂಬವನನ್ನು ಕೊಲ್ಲಬೇಕಾಯಿತು. ಆ ಕೊಲೆಯಿಂದ ಬಂದ ಪಾಪಕ್ಕೆ ಹೆದರಿ ಇಂದ್ರನು ಓಡಿ ಹೋಗಿ ಎಲ್ಲಿಯೋ ಸರೋವರದ ಮಧ್ಯದಲ್ಲಿ ಅಡಗಿದನು. ಇಂದ್ರ ಪದವಿ ಅನಾಥವಾಯಿತು.





ಆಸಮಯದಲ್ಲಿ ಭೂಲೋಕದಲ್ಲಿ ನಹುಷನೆಂಬ ದೊಡ್ಡ ರಾಜನು ಪಾಲಿಸಿಕೊಂಡಿದ್ದನು. ಅವನು ರಾಕ್ಷಸರನ್ನು ಕೊಂದು, ಯಜ್ಞಗಳನ್ನು ಮಾಡಿ ಮಾನವೋತ್ತಮನೆನಿಸಿಕೊಂಡವನು.



ಇಂದ್ರ ಪದವಿ ಶೂನ್ಯವಾಗಿರುವುದು ಒಳಿತಲ್ಲವೆಂದುಕೊಂಡು, ದೇವತೆಗಳು ತಮ್ಮೊಳಗೆ ಮಾತಾಡಿಕೊಂಡು, ನಹುಷನನ್ನೇ ಇಂದ್ರ ಪದವಿಯಲ್ಲಿ ಕೂಡಿಸುವುದೆಂದು ನಿಶ್ಚಯಿಸಿದರು.



ನಹುಷನು ದೇವತೆಗಳ ಕೋರಿಕೆಯನ್ನೂ, ಋಷಿಗಳ ಒತ್ತಾಯವನ್ನೂ ನಿರಾಕರಿಸಲಾಗದೆ ಸ್ವರ್ಗಲೋಕಕ್ಕೆ ಹೋಗಿ ಇಂದ್ರನ ಸಿಂಹಾಸನದಲ್ಲಿ ಆಸೀನನಾದನು. ಆ ವಿಧವಾಗಿ ಒಬ್ಬ ಮಾನವ ರಾಜನಿಗೆ ಇಂದ್ರ ಪದವಿ ಲಭಿಸಿತು.



ನಹುಷನು ಸ್ವಲ್ಪಕಾಲ ನಮ್ರತೆಯಿಂದ ವ್ಯವಹರಿಸಿಕೊಂಡಿದ್ದರೂ ಕ್ರಮವಾಗಿ ಅವನಲ್ಲಿ ಅಹಂಕಾರವು ಹೆಚ್ಚುತ್ತಾ ಬಂದಿತು. ಒಂದು ದಿನ ಅವನು ಇಂದ್ರನ ಪತ್ನಿಯಾದ ಶಚೀದೇವಿಯನ್ನು ನೋಡಿದನು.



ನಹುಷನು ದೇವ ಸಭೆಯಲ್ಲಿ, "ನಾನು ಈಗ ಇಂದ್ರನಾಗಿರುವೆನಾದುದರಿಂದ, ಶಚೀದೇವಿಯೂ ನನಗೆ ಪತ್ನಿಯಾಗ ತಕ್ಕದ್ದು" ಎಂದು ಹೇಳಿದನು. ಆ ಮಾತು ಕೇಳಿ ದೇವತೆಗಳಿಗೆ ದಿಗ್ಭ್ರಮೆ ಹಿಡಿಯಿತು.



ಈ ಸಂಗತಿ ತಿಳಿದು ಶಚೀದೇವಿಯೂ ತುಂಬಾ ಆಂದೋಳನಗೊಂಡಳು. ಕಡೆಗೆ ದೇವಗುರು ಬೃಹಸ್ಪತಿಯನ್ನು ಕರೆಯಿಸಿ ಅವನ ಆಲೋಚನೆಯನ್ನು ಕೇಳಿದನು.





ಬೃಹಸ್ಪತಿ ತನ್ನ ಆಲೋಚನೆಯನ್ನು ಅವಳಿಗೆ ಹೇಳಿದನು. ಅದರಂತೆ ನಹುಷನು ತನ್ನ ಬಳಿಗೆ ಪಲ್ಲಕಿಯಲ್ಲಿ ಸಪ್ತ ಋಷಿಗಳಿಂದ ಹೊರಿಸಲ್ಪಟ್ಟು ಬಂದರೆ, ತಾನು ಅವನನ್ನು ಪತಿಯಾಗಿ ಸ್ವೀಕರಿಸುವೆನೆಂದು ಶಚೀದೇವಿ ಸುದ್ದಿ ಕಳುಹಿಸಿದಳು.



ನಹುಷೇಂದ್ರನ ಆಜ್ಞೆಯಂತೆ ಸಪ್ತರ್ಷಿಗಳೂ ಅವನು ಕುಳಿತ ಪಲ್ಲಕಿಯನ್ನು ಹೊತ್ತುಕೊಂಡು ನಡೆದರು. ಅವರಲ್ಲಿ ಅಗಸ್ತ್ಯನು ಗಿಡ್ಡನಾದುದರಿಂದ ವೇಗವಾಗಿ ನಡೆಯದೆ ನಿಂತು ನಿಂತು ಅಡಿ ತೆಗೆಯುವುದನ್ನು ನೋಡಿ, ಅವಸರಪಡುತ್ತಿದ್ದ ನಹುಷನು ಕೋಪದಿಂದ ಅಗಸ್ತ್ಯನನ್ನು ಕಾಲಿನಿಂದ ಒದ್ದನು.



ತನ್ನನ್ನು ಕಾಲಿನಿಂದ ಒದ್ದ ನಹುಷನು ಕಾಲಿಲ್ಲದ ಹಾವಾಗುವಂತೆ ಕೋಪ ಗೊಂಡ ಅಗಸ್ತ್ಯನು ಶಪಿಸಿದನು. ಕೂಡಲೇ ನಹುಷನು ಹಾವಾಗಿ ಭೂಮಿಗೆ ಬಿದ್ದನು.



ಆಮೇಲೆ ಅಗಸ್ತ್ಯನು ನಹುಷನ ಮೇಲೆ ಕನಿಕರ ಪಟ್ಟು, ಒಬ್ಬ ಮಹನೀಯನಿಂದ ಅವನ ಶಾಪವು ವಿಮೋಚನೆಯಾಗುವಂತೆ ಅನುಗ್ರಹ ಕೊಟ್ಟನು. ಮುಂದೆ ಒಂದು ದಿನ ಆ ಹಾವು ಭೀಮನನ್ನು ಹಿಡಿದುಕೊಂಡಿತು.



ಧರ್ಮರಾಜನು ಬಂದು ತನ್ನ ತಮ್ಮನನ್ನು ಬಿಟ್ಟು ಬಿಡುವಂತೆ ಹಾವನ್ನು ಪ್ರಾರ್ಥಿಸಿದನು. ಹಾವು ಕೇಳಿದ ಪ್ರಶ್ನೆಗಳಿಗೆ ಧರ್ಮರಾಜನು ಸರಿಯಾದ ಉತ್ತರ ಕೊಟ್ಟುದರಿಂದ, ಹಾವು ಭೀಮನನ್ನು ಬಿಟ್ಟು ಕೊಟ್ಟಿತು. ಶಾಪ ವಿಮೋಚನೆಯೂ ಆಗಿ, ನಹುಷನು ಸ್ವರ್ಗ ಸೇರಿದನು.

# ಉಕ್ಕಿಬಂದ ಸರಸ್ವತಿ



ಗೌತಮನೆಂಬ ಋಷಿಗೆ ಏಕತನೆಂದೂ, ದ್ವಿತನೆಂದೂ, ತ್ರಿತನೆಂದೂ ಮೂವರು ಗಂಡು ಮಕ್ಕಳಿದ್ದರು. ತಂದೆ ಮೂವರಿಂದಲೂ ಒಳ್ಳೆಯ ಅಧ್ಯಯನ ಮಾಡಿಸಿದನು.



ಮೂವರಲ್ಲಿ ತ್ರಿತನು ಶ್ರೇಷ್ಠನಾಗಿದ್ದನು. ಅವನ ಉಪನ್ಯಾಸಗಳನ್ನು ಕೇಳಲಿಕ್ಕೆ ಎಲ್ಲೆಲ್ಲಿಯ ಜನರು ಬಂದು ಗುಂಪುಗೂಡುತ್ತಿದ್ದರು



ಒಂದುಸಾರಿ ಮೂವರು ಸೋದರರೂ ಯಜ್ಞ ಕಾರ್ಯಕ್ಕೆ ಪ್ರಾರಂಭಿಸಿ, ಅದಕ್ಕೆ ತಕ್ಕ ಸ್ಥಳವನ್ನು ಹುಡುಕುತ್ತಾ ಹೊರಟರು.



ಅವರು ನಿರ್ಜನ ಪ್ರದೇಶದಲ್ಲಿ ನಡೆಯುತ್ತಿರುವಾಗ, ತ್ರಿತನ ಇದಿರಿನಲ್ಲಿ ದೊಡ್ಡದೊಂದು ಹುಲಿ ಪ್ರತ್ಯಕ್ಷವಾಯಿತು. ಅದು ತೀರ ಸಮೀಪಿಸುವವರೆಗೂ ಅವನಿಗೆ ಗೊತ್ತಾಗಲಿಲ್ಲ.



ಏಕತನೂ, ದ್ವಿತನೂ ಹುಲಿಯನ್ನು ಮುಂದಾಗಿ ನೋಡಿದರೂ, ತ್ರಿತನಿಗೆ ಎಚ್ಚರಿಕೆ ಹೇಳದೆ, ತಮ್ಮಷ್ಟಕ್ಕೆ ಓಡಿಹೋಗಿ ಮರದ ಮೇಲೆ ಏರಿಕೊಂಡರು.



ತ್ರಿತನು ಸಹಾ ಓಡಿ ಹೋಗುತ್ತಾ, ಒಂದು ಪಾಳು ಬಾವಿಯೊಳಗೆ ಬಿದ್ದನು. ಅವನಿಗೆ ಹುಲಿಯಿಂದ ಅಪಾಯ ತಪ್ಪಿತು. ಬಾವಿಯೊಳಗೆ ಬಿದ್ದುದರಿಂದ ಮೂರ್ಛಿತನಾದವನಿಗೆ ಬೇಗದಲ್ಲೇ ಸ್ಮೃಹೆಯೂ ಬಂತು.



ಅವನನ್ನು ಹುಲಿ ಕೊಂದು ಹಾಕಿ ತಿಂದಿತೆಂದು ಕೊಂಡು ಅಣ್ಣಂದಿರಿಗೆ ಸಂತೋಷವಾಯಿತು. ಅವನಿಗೆ ಯಜ್ಞ ಭಾಗವನ್ನು ಕೊಡುವ ನಷ್ಟ ಇನ್ನಿಲ್ಲ ಎಂದುಕೊಂಡರು.



ಆದರೆ ಭೂತ ಪಿಶಾಚಿಗಳ ಉಚ್ಚಾಟನೆಯ ಮಂತ್ರ ತ್ರಿತನಿಗಷ್ಟೇ ಗೊತ್ತು. ಅವನ ಅಣ್ಣಂದಿರಿಗೆ ತಿಳಿಯದು. ಅಂತೆಯೇ ಅವರ ಯಜ್ಞ ಭೂಮಿಯನ್ನು ಪಿಶಾಚಿಗಳು ಆಕ್ರಮಿಸಿ ಕೊಂಡುವು.



ಪಾಳುಬಿದ್ದ ಬಾವಿಯಲ್ಲಿದ್ದ ತ್ರಿತನು, ಯಜ್ಞದ ಮುಹೂರ್ತವು ಸಮೀಪಿಸಿದುದನ್ನು ತಿಳಿದು, ಕಲ್ಲುಗಳನ್ನು ಒಡೆದು ಬೆಂಕಿಯ ಕಿಡಿಗಳನ್ನು ಹುಟ್ಟಿಸುತ್ತ, ಅದೇ ಯಜ್ಞವೆಂದುಕೊಂಡನು.



ಅದು ಪವಿತ್ರ ಸ್ಥಳವೂ ಅಲ್ಲ. ಅವನ ಹತ್ತಿರ ಯಜ್ಞ ಪರಿಕರಗಳಾವುದೂ ಇರಲಿಲ್ಲ. ಆದರೂ ಅವನ ದೀಕ್ಷೆಗೆ ಮೆಚ್ಚಿ ದೇವತೆಗಳು ಪ್ರತ್ಯಕ್ಷರಾಗಿ, ವರವನ್ನು ಕೇಳು ಎಂದರು.

“ಈ ಬಾವಿಯನ್ನು ಪುನೀತ ಗೊಳಿಸಿರಿ. ಇದರಲ್ಲಿ ಸ್ನಾನಮಾಡಿದವರು ಪವಿತ್ರರಾಗುವಂತೆ ಅನುಗ್ರಹಿಸಿರಿ.” ಎಂದು ತ್ರಿತನು ದೇವತೆಗಳನ್ನು ವರ ಕೇಳಿದನು. ಕೂಡಲೇ ಬಾವಿಯೊಳಗೆ ನೀರು ಉಕ್ಕಿ ಅವನನ್ನು ಮೇಲಕ್ಕೆತ್ತಿತು.





ಅದುವರೆಗೆ ಅಂತರ್ವಾಹಿನಿಯಾಗಿದ್ದ ಸರಸ್ವತೀ ನದಿ, ತ್ರಿತನ ವರ ಫಲಿತವಾಗಿ ಮೇಲೆ ಉಕ್ಕಿ ಹರಿಯಿತು. ಹೀಗೆ ಸರಸ್ವತೀ ನದಿಯನ್ನು ಒದಗಿಸಿದ ತ್ರಿತನು ಪ್ರಶಂಸೆಗೆ ಪಾತ್ರನಾದನು.

# ಆದರ್ಶ ಶಿಷ್ಯ



ಪೂರ್ವಕಾಲದಲ್ಲಿ ಧೌಮ್ಯನೆಂಬ ಮುನಿಯ ಆಶ್ರಮವು ಅರಣ್ಯದಲ್ಲಿದ್ದಿತು. ಅಲ್ಲಿ ಶಿಷ್ಯರು ಅಧ್ಯಯನ ಮಾಡುತ್ತ ಗುರುಗಳ ಸೇವೆಗಳನ್ನು ಶ್ರದ್ಧೆಯಿಂದ ಮಾಡಿಕೊಂಡಿದ್ದರು.

ಧೌಮ್ಯನ ಶಿಷ್ಯರಲ್ಲಿ ಉಪಮನ್ಯು ಎಂಬವನು ಗುರುಗಳ ಪಶುಗಳನ್ನು ಕಾಯುವ ಕೆಲಸಮಾಡುತ್ತಿದ್ದನು. ಅವನು ಪಶುಗಳನ್ನು ಹುಲ್ಲುಗಾವಲಿಗೆ ಸಾಗಿಸಿಕೊಂಡು ಹೋಗಿ, ಸಾಯಂಕಾಲ ಆಶ್ರಮಕ್ಕೆ ಹಿಂದಿರುಗಿಸುತ್ತಿದ್ದನು.





ಒಂದು ದಿನ ಧೌಮ್ಯನು ಉಪಮನ್ಯುವನ್ನು ನೋಡಿ, "ಹುಲ್ಲುಗಾವಲಿನಲ್ಲಿ ಹಸಿವಾದರೆ ಏನು ತಿನ್ನುತ್ತಿ?" ಎಂದು ಕೇಳಿದನು. "ದನಗಳನ್ನು ಮೇಯಲು ಬಿಟ್ಟು, ಸಮೀಪದ ಹಳ್ಳಿಗಳಿಗೆ ಹೋಗಿ ಭಿಕ್ಷೆ ಬೇಡಿ ತಿನ್ನುತ್ತೇನೆ" ಎಂದನು ಉಪಮನ್ಯು. "ನನ್ನ ಅಪ್ಪಣೆಯಿಲ್ಲದೆ ಅದನ್ನು ಹೇಗೆ ತಿನ್ನುವಿ?" ಎಂದು ಧೌಮ್ಯನು ಪುನಃ ಕೇಳಿದನು.



ಮೂರನೇ ದಿನ ಉಪಮನ್ಯು, ತಾನು ಭಿಕ್ಷೆ ಬೇಡಿ ಸಂಪಾದಿಸಿದ ಆಹಾರವನ್ನು ಗುರುಗಳಿಗೇ ತಂದು ಕೊಟ್ಟನು. ಆದರಲ್ಲಿ ಸ್ವಲ್ಪ ತನಗೂ ಕೊಡುವರೆಂದು ಅವನ ಮನಸ್ಸಿನಲ್ಲಿತ್ತು. ಧೌಮ್ಯನು ಹಾಗೇನೂ ಕೊಡಲಿಲ್ಲ. ಆದರೂ ಉಪಮನ್ಯು ದಿನಾ ಭಿಕ್ಷೆ ಬೇಡಿ ತಂದುದನ್ನು ಗುರುಗಳಿಗೇ ಕೊಡುತ್ತ ಬಂದನು.



ಹಸಿವನ್ನು ತಾಳದೆ ಉಪಮನ್ಯು ದನಗಳ ಹಾಲನ್ನು ಹಿಂಡಿಕೊಂಡು ಕುಡಿಯಲು ತೊಡಗಿದನು. ಆ ಸಂಗತಿ ತಿಳಿದು ಧೌಮ್ಯನು, "ಆಶ್ರಮದಲ್ಲಿ ಹಿಂಡಿ, ಕೆಚ್ಚಲಿನಲ್ಲಿ ಉಳಿಯುವ ಹಾಲು ಕರುಗಳ ಸೊತ್ತು," ಎಂದು ಹೇಳಿದನು.



ಕರುಗಳು ದನಗಳ ಹಾಲನ್ನು ಕುಡಿಯುತ್ತಿರುವಾಗ ಕರುಗಳ ಮೂತಿಗಳಲ್ಲಿ ಅಂಟಿದ ನೊರೆಗಳನ್ನು ಉಪಮನ್ಯು ಒರೆಸಿ ನೆಕ್ಕಿಕೊಂಡನು. ಅವನ ಮೇಲಿನ ಪ್ರೇಮದಿಂದ ಕರುಗಳು ಹೆಚ್ಚು ನೊರೆ ಸೇರುವ ಹಾಗೆ ಮಾಡುತ್ತಿದ್ದುವೇನೋ !



ಕಡೆಗೆ ಹಸಿವಿನ ಸಂಕಟವನ್ನು ತಾಳಲಾರದೆ ಉಪಮನ್ಯು ಏನೇನೋ ಎಲೆಗಳನ್ನು ಹರಿದು ತಿನ್ನ ತೊಡಗಿದನು. ಆಗ ಯಾವುದೋ ಎಲೆಯ ರಸ ಕಣ್ಣಿಗೆ ಬಿದ್ದು ಅವನು ತೀರಾ ಕುರುಡನಾಗಿ, ತಡವರಿಸುತ್ತ ಆಶ್ರಮಕ್ಕೆ ಹೊರಟನು.



ದಾರಿಯಲ್ಲಿ ಉಪಮನ್ಯು ಒಂದು ಕಣಿವೆಯೊಳಗೆ ಬಿದ್ದು, ದುರ್ಬಲತ್ವದಿಂದ ಮತ್ತೆ ಮೇಲೇರಿ ಬರಲಾರದೆ ಚಡಪಡಿಸಿದನು. ಕೂಗಿಕೊಳ್ಳಲಿಕ್ಕೂ ಶಕ್ತಿಯಿರಲಿಲ್ಲ. ಕತ್ತಲೆಯಾಯಿತು.



ಗೋವುಗಳು ಆಶ್ರಮಕ್ಕೆ ಹಿಂದಿರುಗಿದುವು. ಉಪಮನ್ಯು ಬಾರದಿರುವುದನ್ನು ನೋಡಿ ಧೌಮ್ಯನು, ಅವನಿಗೇನೋ ಅಪಾಯವಾಗಿರುವುದೆಂದು ಊಹಿಸಿ, ಅವನನ್ನು ಹುಡುಕುತ್ತಾ ಹೊರಟನು.



ಕಣಿವೆಯೊಳಗಿರುವ ಶಿಷ್ಯನನ್ನು ನೋಡಿ ಧೌಮ್ಯನು, ನಡೆದ ಸಂಗತಿಯನ್ನು ತಿಳಿದನು. ದೇವತೆಗಳ ವೈದ್ಯರಾದ ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸುವಂತೆ ಉಪಮನ್ಯುವಿಗೆ ಹೇಳಿದನು.



ಹಾಗೆಯೇ ಮಾಡಿದನು ಉಪಮನ್ಯು. ಅಶ್ವಿನೀ ದೇವತೆಗಳು ಉಪಮನ್ಯುವಿನ ಬಳಿಯಲ್ಲೇ ಪ್ರತ್ಯಕ್ಷರಾಗಿ, ಅವನಿಗೆ ಒಂದು ರೊಟ್ಟಿಯನ್ನು ಕೊಟ್ಟು, "ಇದನ್ನು ತಿನ್ನು, ನಿನ್ನ ಕುರುಡು ಹೋಗುತ್ತದೆ." ಎಂದರು. "ನನ್ನ ಗುರುಗಳ ಅಪ್ಪಣೆಯಿಲ್ಲದೆ ನಾನು ಏನೂ ತಿನ್ನಬಾರದು" ಎಂದನು ಉಪಮನ್ಯು.



ಅಶ್ವಿನೀ ದೇವತೆಗಳು ಸಂತೋಷಪಟ್ಟು ಅವನನ್ನು ಗುರುಗಳ ಬಳಿಗೆ ಕರೆದು ತಂದರು. ಗುರುಗಳ ಅನುಮತಿ ಪಡೆದು ಉಪಮನ್ಯು ರೊಟ್ಟಿಯನ್ನು ತಿಂದನು. ಕೂಡಲೇ ಅವನಿಗೆ ದೃಷ್ಟಿ ಬಂದುದು ಮಾತ್ರವಲ್ಲದೆ, ಸಂಪೂರ್ಣ ಆರೋಗ್ಯವೂ ಉಂಟಾಯಿತು. ಅಶ್ವಿನೀ ದೇವತೆಗಳೂ ಅವನನ್ನು ಆಶೀರ್ವದಿಸಿದರು.

# ಪ್ರಾರ್ಥನೆಯ ಮಹಿಮೆ



ಕೋಸಲ ದೇಶವನ್ನು ಅಂಬರೀಷನೆಂಬ ರಾಜನು ಪಾಲಿಸಿಕೊಂಡಿದ್ದಾಗ ಒಮ್ಮೆ ಅತಿ ದೀರ್ಘ ಕಾಲದ ಕ್ಷಾಮ ಸಂಭವಿಸಿತು. ನದಿ ಬಾವಿ ಕೆರೆಗಳೆಲ್ಲಾ ಒಣಗಿದುವು. ಪೈರು ಪಚ್ಚೆಗಳು ಬೆಳೆಯದೆ ಭೂಮಿ ಬರಡಾಯಿತು.



ಚಿಂತೆಗೆ ಬಿದ್ದ ರಾಜನೊಂದಿಗೆ ಮಂತ್ರಿ ಪುರೋಹಿತಾದಿಗಳು, ಅಶ್ವಮೇಧ ಯಾಗ ಮಾಡಿದರೆ ಮಳೆ ಸುರಿಯುತ್ತದೆಂದೂ, ಕ್ಷಾಮ ನಿವಾರಣೆಯಾಗುತ್ತದೆಂದೂ ಹೇಳಿದರು. ಬಹಳ ಜಾಗರೂಕತೆಯಿಂದ ಮಾಡಬೇಕಾದ ಯಜ್ಞವದು.



ಈ ಯಜ್ಞಕ್ಕೆ ತಕ್ಕುದಾದ ಸರ್ವ ಲಕ್ಷಣಗಳಿರುವ ಕುದುರೆಯನ್ನು ತಂದು, ಮೀಯಿಸಿ ಅಲಂಕಾರ ಮಾಡಿ ಬಲಿ ಕೊಡಲು ಸಿದ್ಧ ಮಾಡಿದರು.




ಅಂಬರೀಷನು ಇಂದ್ರ ಪದವಿಗಾಗಿಯೇ ಯಜ್ಞ ಮಾಡುವನೆಂದು ದೇವತೆಗಳು ಭಾವಿಸಿದರು. ಅಂತೆಯೇ ಯಜ್ಞಕ್ಕೆ ವಿಘ್ನವನ್ನುಂಟುಮಾಡಲು ಯಾಗಾಶ್ವವನ್ನು ದೇವತೆಗಳು ಕದ್ದೊಯ್ದರು.



ಯಾಗಾಶ್ವವು ಕಾಣದೆ ಹೋಗಲು, ರಾಜನೂ, ಪುರೋಹಿತರೂ ಬಹಳ ಕಳವಳಗೊಂಡು ಅದನ್ನು ಹುಡುಕಿಸಲು ತೊಡಗಿದರು. ರಾಜ ಭಟರು ಕಾಡುಮೇಡು, ಹಳ್ಳಕೊಳ್ಳಗಳನ್ನೆಲ್ಲಾ ಹುಡುಕಿದರೂ ಯಾಗಾಶ್ವವು ಸಿಕ್ಕಲಿಲ್ಲ.




ಅಶ್ವವನ್ನು ಕಳೆದುಕೊಂಡು ಚಿಂತೆಯಲ್ಲಿರುವ ರಾಜನೊಂದಿಗೆ ಪುರೋಹಿತರು, " ಈ ಪರಿಸ್ಥಿತಿಯಲ್ಲಿ ಅಶ್ವಕ್ಕೆ ಬದಲಾಗಿ ಯಾವನಾದರೂ ಬ್ರಾಹ್ಮಣ ಬಾಲನನ್ನು ಬಲಿ ಕೊಡುವುದರ ಹೊರತು ಬೇರೆ ಮಾರ್ಗವಿಲ್ಲ " ಎಂದರು.

ಬಲಿ ಕೊಡಲು ಯೋಗ್ಯವಾದ ಲಕ್ಷಣಗಳಿರುವ ಬ್ರಾಹ್ಮಣ ಕುಮಾರನನ್ನು ಸಂಪಾದಿಸುವುದು ಸುಲಭವೇನಲ್ಲ. ಎಲ್ಲೆಲ್ಲೋ ಹುಡುಕಿದ ಮೇಲೆ ರುಚೀಕನೆಂಬ ಬ್ರಾಹ್ಮಣ ಮುನಿಗೆ ಮೂವರು ಕುಮಾರರಿರುವ ಸಂಗತಿ ತಿಳಿದು, ಸ್ವತಃ ರಾಜನೇ ಆ ಮುನಿಯ ಬಳಿಗೆ ಹೋದನು.





ರುಚೀಕನು ತನ್ನ ಹಿರಿಯ ಮಗನನ್ನು ಕೊಡಲು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲವೆಂದನು. ರುಚೀಕನ ಹೆಂಡತಿ ತನ್ನ ಚಿಕ್ಕ ಮಗನನ್ನು ಕೊಡಲಾರೆನೆಂದಳು. ಮಧ್ಯಮ ಕುಮಾರನಾದ ಶುನಶ್ಶೇಪನು ಬಲಿಪಶುವಾಗುವೆನೆಂದು ಮುಂದೆ ಬಂದನು.

ರಾಜನು ತೃಪ್ತನಾಗಿ ಶುನಶ್ಶೇಪನನ್ನು ಕರೆದು ಕೊಂಡು ಮನೆಗೆ ಹೊರಟನು. ಮಧ್ಯ ದಾರಿ ಯಲ್ಲಿ ಅವರಿಗೆ ವಿಶ್ವಾಮಿತ್ರನ ಆಶ್ರಮವು ಸಿಕ್ಕಿತು. ಶುನಶ್ಶೇಪನು ಬಲಿಪಶುವಾಗಿ ಹೋಗುವವನೆಂದು ಅವರನ್ನು ವಿಚಾರಿಸಿ ತಿಳಿದು ಕೊಂಡನು. ಬಹಳ ಕನಿಕರವೆನಿಸಿತು ವಿಶ್ವಾ ಮಿತ್ರನಿಗೆ !





ವಿಶ್ವಾಮಿತ್ರನು ಶುನಶ್ಶೇಪನಿಗೆ ಒಂದು ಮಂತ್ರವನ್ನು ಉಪದೇಶಿಸಿ, ಅದನ್ನು ಪಠಿಸಿ ಪ್ರಾರ್ಥಿಸಿದರೆ ಆಪತ್ತು ನಿವಾರಣೆಯಾಗುವುದೆಂದು ಹೇಳಿದನು. ರಾಜನು ಶುನಶ್ಶೇಪನನ್ನು ಕರೆದೊಯ್ದು ಬಲಿಗೆ ತಯಾರುಗೊಳಿಸಿದನು.



ಶುನಶ್ಶೇಪನು ಬಲಿಗೆ ಕರೆದೊಯ್ಯಲ್ಪಡುತ್ತಿರುವಾಗ ವಿಶ್ವಾಮಿತ್ರನು ಉಪದೇಶಿಸಿದ ಮಂತ್ರವನ್ನು ಪಠಿಸಿ, ಪ್ರಾರ್ಥಿಸಿದನು. ಅದರ ಶಕ್ತಿಯಿಂದ ಅಲ್ಲಿದ್ದವರೆಲ್ಲಾ ಮರದ ಬೊಂಬೆಗಳಂತೆ ನಿಂತು ಬಿಟ್ಟರು.



ಅಕಸ್ಮಾತ್ತಾಗಿ ಅಗ್ನಿಕುಂಡದಿಂದ ಇಂದ್ರನು ಪ್ರತ್ಯಕ್ಷನಾಗಿ, ಅಂಬರೀಷನಿಗೆ ಯಜ್ಞಫಲವನ್ನು ಕೊಡಿಸಿ, ಶುನಶ್ಶೇಪನನ್ನು ಬಿಡಿಸಿದನು. ದೇವತೆಗಳ ರಾಜನಿಂದ ಕಾಪಾಡಲ್ಪಟ್ಟವನಾದುದರಿಂದ ಶುನಶ್ಶೇಪನಿಗೆ ದೇವರಾತನೆಂಬ ಹೆಸರು ಬಂತು.



# ದುಷ್ಟ ಧನದ ದಾನ

ಪಾಂಡವರ ವಂಶಕ್ಕೆ ಸೇರಿದ ಜನಮೇಜಯನ ಮಗನಾದ ಶತಾನೀಕನು ಅನೇಕ ದೇಶಗಳನ್ನು ಜಯಿಸಿ, ಆ ದೇಶಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಅದರೊಂದಿಗೆ ಅಪಾರವಾದ ಸಂಪತ್ತೂ ಸೇರಿತು.

ಆ ಧನದಿಂದ ಶತಾನೀಕನು ಬ್ರಾಹ್ಮಣರಿಗೆ ಎಡೆ ಬಿಡದೆ ದಾನಧರ್ಮಗಳನ್ನು ಮಾಡಿ, ಅವರ ಆದರಾಭಿಮಾನಗಳಿಗೆ ಪಾತ್ರನಾದನು. ಅವರು ಅವನನ್ನು ಸಾವಿರಾರು ಬಾಯಿಗಳಿಂದ ಹೊಗಳುತ್ತಿದ್ದರು,





ಶತಾನೀಕನು ಸತ್ತುಹೋದ ಮೇಲೆ ಅವನ ಮಗ ಸಹಸ್ರಾನೀಕನು ಪಟ್ಟಕ್ಕೆ ಬಂದನು. ಅವನು ಕೂಡಾ ಶೌರ್ಯ ಪರಾಕ್ರಮಗಳುಳ್ಳವನಾದರೂ, ತಂದೆಯ ಹಾಗೆ ದಂಡಯಾತ್ರೆ ಮಾಡುವ ಗುಣದವನಾಗಿರಲಿಲ್ಲ.



ಸತ್ತುಹೋದ ರಾಜನಿಂದ ಆಗಾಗ ದಾನಧರ್ಮಗಳನ್ನು ಪಡೆದುಕೊಂಡು ಬಂದ ಬ್ರಾಹ್ಮಣರು, ಹೊಸರಾಜನ ಮೇಲೆ ಬೇಸರ ಪಡುತ್ತ, ಹಳೆಯ ಸಂಪ್ರದಾಯವನ್ನು ಬಿಡದೆ ನಡೆಸಬೇಕೆಂದು ಕೇಳಿಕೊಂಡರು.

"ನನ್ನ ತಂದೆಗೆ ಆ ಸಂಪ್ರದಾಯವು ಒಳ್ಳೆಯದನ್ನು ಮಾಡಿದ್ದರೆ ನಾನು ಅದರಂತೆ ನಡೆಸುತ್ತೇನೆ." ಎಂದನು ಸಹಸ್ರಾನೀಕ. ದಾನಗಳ ಮಹಿಮೆಯಿಂದ ಶತಾನೀಕನಿಗೆ ಏನು ಒಳಿತಾಯಿತೆಂದು ಬ್ರಾಹ್ಮಣರು ಭಾರ್ಗವ ಮಹರ್ಷಿಯನ್ನು ಕೇಳಿದರು.





ಅದನ್ನು ತಿಳಿಯಲು ಭಾರ್ಗವನು ಸಮಾಧಿಯೊಳಗೆ ಹೋಗಿ, ಆತ್ಮ ಶರೀರಿಯಾಗಿರುವ ಶತಾನೀಕನನ್ನು ಹುಡುಕುತ್ತಾ, ಸ್ವರ್ಗಕ್ಕೆ ಹೋದನು, ಸ್ವರ್ಗದಲ್ಲಿ ಶತಾನೀಕನ ಜಾಡೇ ಇರಲಿಲ್ಲ.

ತರುವಾಯ ಭಾರ್ಗವನು ನರಕಕ್ಕೆ ಹೋಗಿ ನೋಡುವಾಗ ಶತಾನೀಕನು ನರಕದಲ್ಲಿ ನರಳುತ್ತಿದ್ದನು! "ನಾನು ಅಕ್ರಮವಾಗಿ ಧನ ಸಂಪಾದಿಸಿದ್ದು ಮೊದಲನೇ ಪಾಪವಾಯಿತು, ಸುಖಸಂಪದಗಳಲ್ಲಿರುವ ಬ್ರಾಹ್ಮಣರಿಗೆ ದಾನ ಮಾಡಿದ್ದು ಎರಡನೇ ಪಾಪವಾಯಿತು." ಎಂದನು ಶತಾನೀಕ.





ಭಾರ್ಗವನು ಸಹಸ್ರಾನೀಕನ ಬಳಿಗೆ ಹೋಗಿ, ತಾನು ತಿಳಿದ ಸಂಗತಿಯನ್ನು ಹೇಳಿದನು. ನ್ಯಾಯಾರ್ಜಿತವಾದ ಧನವನ್ನು ಮಾತ್ರವೇ ದಾನ ಮಾಡಬೇಕೆಂದೂ, ಹಾಗೆ ಮಾಡಿದರೆ ಮಾತ್ರ ಆ ಪುಣ್ಯದಿಂದ ಅವನ ತಂದೆ ಸ್ವರ್ಗಕ್ಕೆ ಹೋಗುವರೆಂದೂ ಹೇಳಿದನು ಭಾರ್ಗವ.

ಮರುದಿನ ಸಹಸ್ರಾನೀಕನು ದೇಶಾಂತರಗಳಿಗೆ ಹೋಗಿ, ಅಲ್ಲಿ ಶ್ರಾಮಿಕನಾಗಿ ಕಷ್ಟಪಟ್ಟು ಜೀವಿಸುತ್ತ, ಒಂದು ವರ್ಷದ ಮೇಲೆ ಉಳಿದಿದ್ದ ಸ್ವಲ್ಪಮಾತ್ರ ಧನದೊಂದಿಗೆ ತನ್ನ ಭವನಕ್ಕೆ ಹಿಂದಿರುಗಿ ಬಂದನು.





ಅವನು ತನ ಸಂಪಾದನೆಯನ್ನು ಬ್ರಾಹ್ಮಣರಿಗೆ ದಾನ ಮಾಡುತ್ತ, "ಈ ದಾನವು ಅಲ್ಪ ವಾದರೂ ನ್ಯಾಯಾರ್ಜಿತವಾದುದು. ದಯ ಮಾಡಿ ಇದನ್ನು ಸ್ವೀಕರಿಸಿ ನನ್ನ ತಂದೆಗೆ ಉತ್ತಮಲೋಕ ಸಿಗುವ ಹಾಗೆ ಆಶೀರ್ವಾದ ಮಾಡಿರಿ" ಎಂದನು. ಬ್ರಾಹ್ಮಣರು "ಹಾಗೇ ಆಗಲಿ" ಎಂದರು.

ತರುವಾಯ ಸಹಸ್ರಾನೀಕನು ತನ್ನ ಖಜಾನೆ ಯನ್ನು ತೆರೆಯಿಸಿ, ತನ್ನ ತಂದೆ ಕೂಡಿ ಹಾಕಿದ್ದ ಧನವನ್ನೆಲ್ಲಾ ಬಡಬಗ್ಗರಿಗೂ ಅನಾಥರಿಗೂ ಹಂಚಿ ಕೊಟ್ಟುಬಿಟ್ಟನು. ಆಮೇಲೆ ಅವನು ಭಾರ್ಗವನನ್ನು ಕರೆದು, ತನ್ನ ತಂದೆಯ ಪರಿಸ್ಥಿತಿ ಹೇಗಿದೆಯೆಂದು ತಿಳಿದುಕೊಂಡು ಬರಲು ಕೇಳಿಕೊಂಡನು.







ಭಾರ್ಗವನು ಮತ್ತೊಂದುಸಾರಿ ನರಕಕ್ಕೆ ಹೋದನು. ಅಲ್ಲಿ ಶತಾನೀಕನ ಪಾಪಗಳು ಪರಿಹಾರವಾಗಿದ್ದುವು. ಅವನು ಬಂಗಾರದ ರಥದಲ್ಲಿ ಸ್ವರ್ಗಕ್ಕೆ ಹೊರಡುವ ದೃಶ್ಯ ನೋಡಿ, ಭಾರ್ಗವನಿಗೆ ಸಂತೋಷವಾಯಿತು.



# ಮಹಾ ಪ್ರಸ್ಥಾನ

ಮಹಾಭಾರತ ಯುದ್ಧದಲ್ಲಿ ಗೆದ್ದ ಪಾಂಡವರು ಬಹಳ ಕಾಲದವರೆಗೆ ಸುಖವಾಗಿ ರಾಜ್ಯಭಾರ ಮಾಡಿದರು. ಕೊನೆಗಾಲ ಸಮೀಪಿಸಲು ಧರ್ಮರಾಜನು ಎಲ್ಲಾ ಬಿಟ್ಟು ಮಹಾಪ್ರಸ್ಥಾನ ಮಾಡಲು ಸಂಕಲ್ಪಿಸಿದನು.

ರಾಜತ್ಯಾಗ ಮಾಡಲು ಸಿದ್ಧನಾದ ಧರ್ಮರಾಜನು ತಮ್ಮ ಮೊಮ್ಮಗನಾದ ಪರೀಕ್ಷಿತ್ತುವಿಗೆ ಮಹಾ ವೈಭವದಿಂದ ಪಟ್ಟಾಭಿಷೇಕ ಮಾಡಿದನು. ಋಷಿಗಳೂ ಸಾಮಂತರೂ ಪರೀಕ್ಷಿತ್ತುವನ್ನು ಆಶೀರ್ವದಿಸಿದರು.





ಅನಂತರ ಪಾಂಡವರು ಹಿಮಾಲಯದ ಕಡೆಗೆ ಹೊರಟರು. ಅವರ ಹಿಂದೆ ದ್ರೌಪದಿ ಕೂಡಾ ಹೊರಟಳು. ಎಲ್ಲರೂ ಸಾಮಾನ್ಯವಾದ ಉಡುಗೆಯಿಂದ ಹೊರಟಿದ್ದರು. ರಾಜ್ಯ ವೈಭವಗಳನ್ನು ಬಿಟ್ಟ ಚಿಂತೆ ಅವರಿಗಿಲ್ಲ.



ಹೋಗಿ ಹೋಗಿ ಅವರೆಲ್ಲಾ ಹಿಮಾಲಯ ಪರ್ವತದ ಮೇಲೆ ಏರತೊಡಗಿದರು. ಬಹಳ ಕಷ್ಟವಾದ ದಾರಿ; ಅತಿ ದೀರ್ಘ ಪ್ರಯಾಣ. ಎಷ್ಟೋ ಪುಣ್ಯಸ್ಥಳಗಳೂ, ಋಷ್ಯಾಶ್ರಮಗಳೂ, ದೇವತಾ ನಿವಾಸಗಳೂ ಇದ್ದುವು. ಅದಾವುದರ ಪರಿವೆಯೂ ಇಲ್ಲದೆ ಅವರು ನಡೆಯುತ್ತಿರಲು, ಮೊದಲು ದ್ರೌಪದಿ ಬಿದ್ದುಸತ್ತಳು. ಅನಂತರ ಪಾಂಡವರು ಒಬ್ಬೊಬ್ಬರೇ ಬಿದ್ದು ಸತ್ತು ಹೋಗಲು ತೊಡಗಿದರು. ಕಡೆಗೆ ಧರ್ಮರಾಜನೊಬ್ಬನೇ ಉಳಿದನು.

ಒಬ್ಬಂಟಿಗನಾಗಿ ನಡೆಯುತ್ತಿದ್ದ ಧರ್ಮರಾಜನು ತನ್ನ ಹಿಂದೆ ಒಂದು ನಾಯಿ ಬರುತ್ತಿರುವುದನ್ನು ಗಮನಿಸಿದನು. ದಾರಿ ಎಷ್ಟೇ ಕಠಿಣವಾಗಿದ್ದರೂ ಸಹ ಆ ನಾಯಿ ಧರ್ಮರಾಜನನ್ನು ಬಿಡದೆ ಅನುಸರಿಸಿಕೊಂಡಿತ್ತು.





ಧರ್ಮರಾಜನು ಹಿಮಾಲಯದ ಶಿಖರವನ್ನು ಸೇರಿದ ಕೂಡಲೇ ಇಂದ್ರನು ಬಂದು ಅವನನು ಸ್ವರ್ಗಕ್ಕೆ ಹೋಗೋಣವೆಂದು ಆಹ್ವಾನಿಸಿದನು. ತನ್ನೊಂದಿಗೆ ಈ ನಾಯಿಕೂಡಾ ಬರಬಹುದಾದ ರೇನೇ ತಾನು ಸ್ವರ್ಗಕ್ಕೆ ಬರುವೆನೆಂದು ಧರ್ಮ ರಾಜನು ಹೇಳಿದನು.

ಇಂದ್ರನು ಅದಕ್ಕೆ ಒಪ್ಪಲಿಲ್ಲ. ಧರ್ಮರಾಜನು ಇಂದ್ರನ ರಥದಲ್ಲಿ ಏರಲೂ ಇಲ್ಲ. ಆಗ ನಾಯಿ ಯಮಧರ್ಮರಾಜನ ರೂಪದಲ್ಲಿ ಪ್ರತ್ಯಕ್ಷ ವಾಯಿತು. ಯಮನು ಮಾಡಿದ ಈ ಪರೀಕ್ಷೆ ಯಲ್ಲಿ ಧರ್ಮರಾಜನು ತೇರ್ಗಡೆಯಾದನು.





ಅನಂತರ ಸ್ವರ್ಗ ಸೇರಿದ ಧರ್ಮರಾಜನನ್ನು ದೇವತೆಗಳೆಲ್ಲಾ ಸ್ವಾಗತ ಮಾಡಿದರು. ಧರ್ಮ ರಾಜನು ಸ್ವರ್ಗದಲ್ಲಿ ತನ್ನ ತಮ್ಮಂದಿರೂ, ದ್ರೌಪದಿಯೂ ಇರಬಹುದೆಂದು ನೋಡಿದರೆ, ಅವರೆಲ್ಲಾ ನರಕದಲ್ಲಿರುವ ಸಂಗತಿ ಗೊತ್ತಾಯಿತು. ಧರ್ಮರಾಜನು ತಾನೂ ಸಹ ನರಕಕ್ಕೇ ಹೋಗುವೆನೆಂದು ಹಟ ಹಿಡಿದನು.

ಅವನನ್ನು ನರಕದ ದ್ವಾರದ ಬಳಿಗೆ ಒಯ್ದು ತೋರಿಸಲಾಯಿತು. ಅಲ್ಲಿ ತಮ್ಮಂದಿರನ್ನೂ ದ್ರೌಪದಿಯನ್ನೂ ಕಾಣಲಿಲ್ಲ. ತಾನು ಸಣ್ಣ ದೊಂದು ಪಾಪ ಮಾಡಿದುದರಿಂದಲೇ ನರಕದ ದರ್ಶನವಾಯಿತೆಂದು ಮತ್ತೆ ಗೊತ್ತಾಯಿತು ಧರ್ಮರಾಜನಿಗೆ. ದ್ರೌಪದಿಯೂ ತಮ್ಮಂದಿರೂ ಸ್ವಲ್ಪಕಾಲ ನರಕದಲ್ಲಿದ್ದು ಆಗಲೇ ಸ್ವರ್ಗ ಸೇರಿದ್ದ ರೆಂದು ಆ ಮೇಲೆ ತಿಳಿದನು.





ತರುವಾಯ ಧರ್ಮರಾಜನು ಸ್ವರ್ಗಕ್ಕೆ ಹಿಂದಿರುಗಿ ಶಾಶ್ವತವಾಗಿ ಸ್ವರ್ಗವಾಸಿಯಾದನು. ಪ್ರಾಪಂಚಿಕ ಜೀವನದಲ್ಲಿರುವ ಮನುಷ್ಯನು ಪುಣ್ಯಾತ್ಮನಾಗಿರಲು ಸಾಧ್ಯವಿದೆ ಎಂಬುದಕ್ಕೆ ಧರ್ಮರಾಜನ ಜೀವಿತವು ಉತ್ತಮ ನಿದರ್ಶನ.



# ಇತಿಹಾಸದಿಂದ ಚರಿತ್ರೆಗೆ

ಭಾರತೀಯ ನಾಗರಿಕತೆ ಯಾವ ಕಾಲದ್ದೋ? ಈ ಸನಾತನ ಭೂಮಿಯಲ್ಲಿ ವಾಸಮಾಡಿದ ಮೊದಲನೇ ಮಾನವರು ಯಾರೋ? ಇಂತಹ ಪ್ರಶ್ನೆಗಳಿಗೆ ಸರಿಯಾದ ಉತ್ತರ ಸಿಗಲಾರದು. ಅನೇಕ ನಾಗರಿಕತೆಗಳು ಪ್ರಳಯಗಳಲ್ಲಿ ಹೊಡೆದು ಹೋಗಿವೆಯೆಂದು ಪ್ರತೀತಿ.

ಬಹು ದೀರ್ಘ ಕಾಲಾವಧಿಯಲ್ಲಿ ಮಹರ್ಷಿಗಳು ರಚಿಸಿದ ವೇದಗಳಿಂದಾಗಿ ನಮಗೊಂದು ನಾಗರಿಕತೆ ಇದ್ದಿತೆಂದು, ದೇವರು, ಜ್ಞಾನ ಅಮರತ್ವಗಳಂತಹವನ್ನು ಕುರಿತು ಅನ್ವೇಷಣೆ ನಡೆದಿದೆಯೆಂದು ಗೊತ್ತಾಗುತ್ತದೆ.





ಹರಪ್ಪಾ. ಮೊಹೆಂಜದಾರೋಗಳಂತಹ ಪ್ರದೇಶಗಳಲ್ಲಿ ಮಹಾ ನಗರಗಳ ಅವಶೇಷಗಳು, ಜನರು ವಾಸಿಸಿದ ಮನೆ ಮಠಗಳ ಶಿಥಿಲಗಳು ಹೊರಬಿದ್ದಿವೆ. ಅವುಗಳಿಗೆ ಐದು ಸಾವಿರಕ್ಕೂ ಹೆಚ್ಚಿನ ವಯಸ್ಸಾಗಿವೆ. ಪ್ರಪಂಚದಲ್ಲಿ ಬೇರೆಲ್ಲಿಯೂ ಆ ಕಾಲದಲ್ಲಿ ಅಂತಹ ನಗರಗಳಿರಲಿಲ್ಲ.



ಒಂದು ಕಾಲದಲ್ಲಿ ಭಾರತಿಯರು ಸಾಹಸೋಪೇತವಾದ ಸಮುದ್ರ ಯಾನಗಳನ್ನು ಮಾಡಿದ್ದಾರೆ. ಅವರು ದೂರ ದೂರ ಪ್ರಾಂತಗಳಿಗೆ ತಮ್ಮ ವ್ಯಾಪಾರವನ್ನೂ ಸಂಸ್ಕೃತಿಯನ್ನೂ ಹೊಂದಿಸಿದ್ದಾರೆ. ನಾಗರಿಕತೆಯ ಪ್ರಾರಂಭ ದಶೆಯಲ್ಲಿ ಭಾರತಿಯರು ದಕ್ಷಿಣ ಅಮೆರಿಕದ ವರೆಗೂ ಹೋಗಿರುವರೆಂದು ಕೆಲವರು ಪಂಡಿತರ ಅಭಿಪ್ರಾಯ.

ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲಿ ಒಂದಾದ ಮೆಸಾಪೊಟಾಮಿಯಾದಲ್ಲಿ ಭಾರತೀಯರ ಮುದ್ರಿಕೆಗಳೂ, ಮೊಹೆಂಜದಾರೋನಲ್ಲಿ ಮೆಸಾಪೊಟಾಮಿಯಾ ಮುದ್ರಿಕೆಗಳೂ ಲಭಿಸಿದುದರಿಂದ, ಆ ಉಭಯ ದೇಶಗಳ ಮಧ್ಯೆ ಬರುಹೋಗುವಿಕೆಗಳಿದ್ದಂತೆ ಸ್ಪಷ್ಟವಾಗುತ್ತದೆ.





ಭಾರತೀಯ ವಿಜ್ಞಾನಿಗಳು ಅನೇಕ ದೇಶಗಳಿಗೆ ಹೋಗಿ ಅಲ್ಲಿಯ ವಿಜ್ಞಾನಿಗಳನ್ನು ಸಂಧಿಸಿದ್ದಾರೆ. ಒಬ್ಬ ಭಾರತೀಯನು ಕ್ರಿ. ಪೂ. ೫ ನೆಯ ಶತಾಬ್ದದಲ್ಲಿ ದೊಡ್ಡ ಗ್ರೀಕು ತತ್ವವೇತ್ತನಾದ ಸೊಕ್ರಟೀಸನನ್ನು ಕಲೆತುಕೊಂಡ ಸಂಗತಿ ನಮಗೆ ಗೊತ್ತಾಗಿದೆ.



ಭಾರತ ದೇಶದಲ್ಲಿ ಅನೇಕ ಆಧ್ಯಾತ್ಮಿಕ ಮತ ವಾದಗಳು ಹುಟ್ಟಿದುವು. ವೇದಗಳೂ, ಉಪನಿ ಷತ್ತುಗಳೂ ಋಷಿಗಳಿಂದ ರಚಿತವಾದ ಅನಂತರ, ಕ್ರಿ. ಪೂ. ೬ ನೇ ಶತಾಬ್ದದಲ್ಲಿ ಜೈನಮತ ಸ್ಥಾಪಕ ನಾದ ಮಹಾವೀರ ಜಿನನು ಬಂದನು.

ಗೌತಮಬುದ್ಧನು ಕೂಡಾ ಕ್ರಿ. ಪೂ. ೬ ನೇ ಶತಾಬ್ದದಲ್ಲೇ ಹುಟ್ಟಿದವನು. ಮೋಕ್ಷ ಮಾರ್ಗ ವನ್ನು ಅನ್ವೇಷಿಸುತ್ತ ಅವನು ರಾಜ ಸುಖ ವೈಭವಗಳನ್ನೆಲ್ಲಾ ಬಿಟ್ಟು, ತಪಸ್ಸುಮಾಡಿ ಸತ್ಯ ವನ್ನು ತಿಳಿದುಕೊಂಡನು.





ಪುರಾಣಗಳಲ್ಲಿ ನಮಗೆ ಬಹಳಮಂದಿ ರಾಜರು ಕಂಡುಬರುತ್ತಾರೆ. ಚರಿತ್ರ ಕಾಲದಲ್ಲಿ ನಂದ ವಂಶ ವನ್ನು ಸ್ಥಾಪಿಸಿದ ಮಹಾಪದ್ಮನಂದನು ಕ್ರಿ.ಪೂ. ೪ ನೆಯ ಶತಾಬ್ದದಲ್ಲಿ ಕಳಿಂಗದಿಂದ ಪಂಜಾಬಿನ ವರೆಗೆ ವಿಸ್ತೃತ ದೇಶವನ್ನು ಪಾಲಿಸುತ್ತಿದ್ದನೆಂದು ನಮಗೆ ಗೊತ್ತಾಗಿದೆ.

ರಾಜರ ಪಾಲನೆಗೆ ಬದಲಾಗಿ ಪ್ರಜೆಗಳಿಂದ ಆರಿಸಲ್ಪಟ್ಟ ಸಮಿತಿಗಳಿಂದ ಪರಿಪಾಲನೆ ನಡೆದ ಪ್ರದೇಶಗಳು ಕೂಡಾ ಇದ್ದುವು. ಅವುಗಳನ್ನು ಗಣತಂತ್ರ ರಾಜ್ಯಗಳೆಂದು ಕರೆಯುವರು. ಪ್ರಾಚೀನ ಭಾರತದಲ್ಲಿ ಅನೇಕ ವಿಭಾಗಗಳಿದ್ದರೂ, ಸಾಂಸ್ಕೃತಿಕ ಸಮೈಕ್ಯತೆಯೂ ಬೆಸೆದುಕೊಂಡಿದ್ದಿತು.





ಭಾರತದ ಖ್ಯಾತ ನಾಮವು ವಿದೇಶೀಯ ರಾಜರನ್ನು ದಾಳಿ ಮಾಡುವಂತೆ ಪ್ರೇರೇಪಿಸುತ್ತಿತ್ತು. ಭಾರತ ಭೂಭಾಗದ ಮೇಲೆ ಮೊತ್ತಮೊದಲು ದಂಡೆತ್ತಿ ಬಂದವನು ಪರ್ಷಿಯಾ ರಾಜನಾದ ಸೈರಸ್. ಕ್ರಿ. ಪೂ. ೬ ನೇ ಶತಮಾನದಲ್ಲಿ ಅವನು ವಾಯುವ್ಯ ಪ್ರಾಂತದಲ್ಲಿರುವ ಗಾಂಧಾರದೇಶವನ್ನು ಜಯಿಸಿದನು.

ಆಮೇಲೆ ಎರಡು ಶತಮಾನಗಳ ಮೇಲೆ ಗ್ರೀಸು ದೇಶಕ್ಕೆ ಸೇರಿದವನಾದ ಅಲೆಗ್ಝಾಂಡರ್, ಪರ್ಷಿಯಾವನ್ನು ಜಯಿಸಿ, ಭಾರತದೇಶದೊಳಗೆ ಪ್ರವೇಶಿಸಬೇಕೆಂದು ಕನಸು ಕಂಡನು. ಏಕೆಂದರೆ ಭಾರತ ದೇಶದ ಪುಟ್ಟದೊಂದು ಭಾಗವನ್ನು ಜಯಿಸಿಕೊಂಡುದಕ್ಕೇ ಪರ್ಷಿಯಾ ತುಂಬಾ ಹೆಮ್ಮೆಪಟ್ಟಿತ್ತು!





# ಅಲೆಗ್ಜಾಂಡರ್ ಪುರುರಾಜ

ಕ್ರಿಸ್ತಪೂರ್ವ ೪ ನೇ ಶತಮಾನದಲ್ಲಿ ಮಾಸಿಡೋನಿಯಾದ ರಾಜನಾದ ಯುವಕ ಅಲೆಗ್ಜಾಂಡರ್ ಪ್ರಪಂಚವನ್ನು ಜಯಿಸಬೇಕೆಂದು ಹೊರಟನು. ಹಿಂದೂಕುಷ್ ಪರ್ವತಗಳ ಕಣಿವೆಯ ಮೂಲಕವಾಗಿ ಅವನು ತನ್ನ ಪ್ರಚಂಡ ಸೈನ್ಯವನ್ನು ಸಾಗಿಸಿಕೊಂಡು ಪಂಜಾಬು, ಸಿಂಧೂ ಪ್ರಾಂತಗಳಿಗೆ ಬಂದನು.

ತಕ್ಷಶಿಲೆಯ ರಾಜನಾದ ಅಂಭಿ ಪುರುರಾಜನಿಗೆ ಶತ್ರುವಾಗಿದ್ದನು. ಅವನು ಅಲೆಗ್ಜಾಂಡರನ ಸ್ನೇಹ ಸಂಪಾದಿಸಿಕೊಂಡನು. ಆಗ ಝೀಲಂ, ಚೀನಾಬ್ ನದಿಗಳ ಮಧ್ಯಪ್ರದೇಶಕ್ಕೆ ರಾಜನಾಗಿದ್ದವನು ಧೀರನಾದ ಪುರು.





ಅಂಭಿಯ ಸಹಾಯದಿಂದ ಅಲೆಗ್ಜಾಂಡರನು ತನ್ನ ದೇಶದ ಮೇಲೆ ಯುದ್ಧಕ್ಕೆ ಬರುವನೆಂದು ತಿಳಿದು ಪುರು ಯುದ ಸನ್ನದ್ಧನಾದನು.



ಆ ಕಾಲದಲ್ಲಿ ವಿತಸ್ತಾ ಎಂದು ಹೆಸರು ಪಡೆದಿದ್ದ ಝೀಲಂ ನದಿಯ ಎರಡು ಕಡೆಗಳಲ್ಲಿಯೂ ಉಭಯ ಸೇನೆಗಳು ಸೇರಿದುವು.

ಅಲೆಗ್ಝಾಂಡರ್ ಒಂದು ಉಪಾಯ ಮಾಡಿದನು. ಅವನು ತನ್ನ ಸೇನೆಗಳ ಅತ್ಯಧಿಕ ಭಾಗವನ್ನು ಅನೇಕ ಮೈಲು ದೂರಕ್ಕೆ ಒಯ್ದು ನದಿಯನ್ನು ದಾಟಿಸಿ ಪುರುರಾಜನ ಶಿಬಿರದ ಮೇಲೆ ದಾಳಿ ಮಾಡಿದನು.





ಅಲೆಗ್ಝಾಂಡರ್ ಪುರು ಸೈನ್ಯದಲ್ಲಿದ್ದ ಆನೆಗಳ ಗೋಜಿಗೆ ಹೋಗಲಿಲ್ಲ. ಕಾಲ್ಬಲಗಳನ್ನೇ ರಭಸಗೊಳಿಸಿ ದಾಳಿ ಮಾಡಿದನು. ಹಾಗೆ ನಡೆಯುವುದೆಂದು ಊಹಿಸದಿದ್ದರೂ, ಪುರುರಾಜನು ತನ್ನ ಶಿಬಿರವನ್ನು ವೀರೋಚಿತವಾಗಿ ರಕ್ಷಿಸಿಕೊಳ್ಳುವ ಪ್ರಯತ್ನ ಮಾಡಿದನು.

ಯುದ್ಧವು ಘೋರವಾಯಿತು. ಗಜಬಲಗಳೊಂದಿಗೆ ಹೇಗೆ ಯುದ್ಧ ಮಾಡಬೇಕೆಂದು ಅಲೆಗ್ಝಾಂಡರನಿಗೆ ಆಂಭಿಯೇ ಹೇಳಿಕೊಟ್ಟನು. ಆದರೂ ಅಲೆಗ್ಝಾಂಡರನು ಪುರು ಸೇನೆಗಳ ಧೈರ್ಯಸಾಹಸಗಳಿಗೆ ಆಶ್ಚರ್ಯಪಟ್ಟನು.





ಪುರುರಾಜನು ತನ್ನ ಸೇನೆಗಳಿಗೆಲ್ಲಾ ತಾನೇ ನಾಯಕನಾಗಿದ್ದನು. ಅವನು ಅನೇಕಸಾರಿ ಗಾಯಗೊಂಡರೂ ಸ್ವಲ್ಪವೂ ಹಿಂಜರಿಯಲಿಲ್ಲ. ಅವನ ಸಣ್ಣ ಸೇನೆಯೇ ದೊಡ್ಡದಾದ ಗ್ರೀಕು ಸೇನೆಯೊಂದಿಗೆ ದೀರ್ಘ ಸಂಗ್ರಾಮ ನಡೆಸಿತು.

ಪುರುವಿನ ಸ್ನೇಹಿತರು ಯುದ್ಧವನ್ನು ನಿಲ್ಲಿಸುವಂತೆ ಅವನೊಂದಿಗೆ ಹೇಳಿದರು. ಪುರು ಅದಕ್ಕೆ ಒಪ್ಪದೆಯೇ ಯುದ್ಧ ಮಾಡಿದನು. ಅವನ ಅಂಗರಕ್ಷಕರು ಒಬ್ಬೊಬ್ಬರೇ ಬಿದ್ದರು. ಆದರೂ ಅವನು ಯುದ್ಧ ಮಾಡುವುದನ್ನು ದೂರದಲ್ಲಿ ಅಲೆಗ್ಝಾಂಡರನು ಗಮನಿಸಿಕೊಂಡಿದ್ದನು.





ಅಲೆಗ್ಝಾಂಡರನ ಸೇನಾನಿಗಳು ಪುರುವನ್ನು ಸುತ್ತು ಮುತ್ತಿ ಹಿಡಿಯುವ ಸಮಯಕ್ಕೆ, ಅವನ ಶರೀರದ ಮೇಲೆ ಒಂಬತ್ತು ಗಾಯಗಳಿದ್ದುವು. ಆದರೂ ಬಿಡದೆ ಹೋರಾಡುತ್ತ ತನ್ನನ್ನು ಹಿಡಿದವರಲ್ಲಿ ಒಬ್ಬನನ್ನು ಕೊಂದನು.

ಪುರುವಿನ ಕೈಗಳನ್ನು ಬೆನ್ನಿಗೆ ಕಟ್ಟಿ ಅವನನ್ನು ಎಳೆದೊಯ್ದು ಅಲೆಗ್ಝಾಂಡರನ ಮುಂದೆ ನಿಲ್ಲಿಸಿದರು. "ನನ್ನಿಂದ ನೀನು ಏನನ್ನು ಆಶಿಸುವಿ?" ಎಂದು ಅಲೆಗ್ಝಾಂಡರ್ ಪುರುವನ್ನು ಕೇಳಿದನು. "ಒಬ್ಬ ರಾಜನಿಗೆ ಮತ್ತೊಬ್ಬ ರಾಜನು ತೋರಿಸುವ ಮರ್ಯಾದೆ!" ಎಂದನು ಪುರು.





ಅಲೆಗ್ಝಾಂಡರ್ ಪುರುವನ್ನು ಮೀರಿಸುವ ಧೈರ್ಯಶಾಲಿಯನ್ನು ಅದುವರೆಗೆ ಕಂಡಿರಲಿಲ್ಲ. ಮೆಚ್ಚುಗೆಯ ಪರವಶತೆಯಲ್ಲಿ ಅವನು ಪುರುರಾಜನನ್ನು ಬಿಡುಗಡೆಮಾಡಿಸಿ, ಅವನ ಸ್ನೇಹವನ್ನು ಬಯಸಿದನು. ಅಂತೆಯೇ ಪುರುರಾಜನು ಸ್ವತಂತ್ರನಾಗಿ ಮತ್ತೆ ಪರಿಪಾಲನೆ ನಡೆಸಿದನು.



# ವಿಚಾರ ಚಿತ್ರ

ಅನೇಕಾನೇಕ ವರ್ಷಗಳ ಹಿಂದೆ ಸಾಕೇತಪುರದ ರಾಜನಿಗೆ ನಾಲ್ಕು ಮಂದಿ ಕುಮಾರರ ತರುವಾಯ ಐದನೇ ಮಗನು ಹುಟ್ಟಿದನು. ಅದಕ್ಕಾಗಿ ರಾಜನು ಚಿಕ್ಕ ರಾಣಿಯನ್ನು ಒಂದು ವರ ಕೇಳುವಂತೆ ಹೇಳಿದನು. ಅವಳು ತನ್ನ ಕುಮಾರನಿಗೇ ರಾಜ್ಯ ಸಿಗಬೇಕು ಎಂದಳು. ಈ ಸಂಗತಿ ತಿಳಿದು ದೊಡ್ಡವರು ನಾಲ್ವರೂ ಸಾಕೇತವನ್ನು ಬಿಟ್ಟು ಹೋಗಿಬಿಟ್ಟರು.

ಹಾಗೆ ಹೋದವರು ತಮ್ಮ ಪರಿವಾರದೊಂದಿಗೆ ಹಿಮಾಲಯ ಪರ್ವತದ ಬುಡವನ್ನು ಸೇರಿದರು. ಅವರು ಯಾವುದಾದರೊಂದು ನಗರವನ್ನು ಜಯಿಸಿ ಅದನ್ನು ಪಾಲಿಸಬಹುದೆಂದು ರಾಜನು ಅಂದುಕೊಂಡನು. ಆದರೆ ಒಬ್ಬ ಮುನಿ ಅವರಿಗೆ ಹೊಸ ನಗರ ನಿರ್ಮಿಸುವಂತೆ ಹೇಳಿದುದರಿಂದ, ರಾಜಕುಮಾರರು, ಆ ಮುನಿಕುಟೀರದ ಪ್ರಾಂತದಲ್ಲೇ ತಮ್ಮ ನಿವಾಸವನ್ನು ಕಲ್ಪಿಸಿಕೊಂಡರು.





ಕಪಿಲನೆಂಬ ಆ ಮುನಿಯಿಂದಾಗಿ ಆ ಜನಾವಾಸಕ್ಕೆ ಕಪಿಲವಸ್ತು ಎಂದು ಹೆಸರುಬಂತು. ಆ ಪ್ರಾಂತದಲ್ಲಿ ಶಾಕ (ತೇಗು) ವೃಕ್ಷಗಳು ಹೆಚ್ಚಾಗಿದ್ದುದರಿಂದ ಅಲ್ಲಿಯವರಿಗೆ ಶಾಕ್ಯರೆಂಬ ಹೆಸರುಬಂತು. ಅನೇಕ ಕಲಾಂತರಗಳಾದ ಮೇಲೆ ಶುದ್ಧೋದನನು ಆ ವಂಶದವರಿಗೆ ರಾಜನಾದನು. ಒಂದುದಿನ ರಾತ್ರಿ ಅವನ ರಾಣಿಯಾದ ಮಾಯಾದೇವಿ ತನ್ನ ಶರೀರದೊಳಗೆ ಬಿಳಿಯಾದ ಆನೆಯೊಂದು ಪ್ರವೇಶಿಸಿದಂತೆ ಸ್ವಪ್ನ ನೋಡಿದಳು.



ರಾಣಿಯ ಗರ್ಭದೊಳಗೆ ಒಬ್ಬ ಮಹಾತ್ಮನು ಪ್ರವೇಶಿಸಿದನೆಂದು ಶಾಸ್ತ್ರಜ್ಞರು ಆ ಸ್ವಪ್ನಕ್ಕೆ ಅರ್ಥ ಹೇಳಿದರು. ರಾಣಿ ತನ್ನ ತೌರು ಮನೆಗೆ ಹೊರಟಳು. ದಾರಿಯಲ್ಲಿ ಅವಳು ಲುಂಬಿನೀ ವನದಲ್ಲಿ ದಣಿವಾರಿಸಿ ಕೊಳ್ಳುತ್ತ, ಸಾಲವೃಕ್ಷದ ಕೊಂಬೆಯನ್ನು ಹಿಡಿದು ಕೊಂಡಿದ್ದಳು. ಆಗ ಅವಳಿಗೆ ಹೆರಿಗೆಯ ನೋವು ಶುರುವಾಯಿತು.

ರಾಣಿ ಲುಂಬಿನೀ ವನದಲ್ಲಿಯೇ ಮಗನನ್ನು ಹಡೆದಳು. ತಾಯಿ ಮಗಂದಿರು ಕಪಿಲ ವಸ್ತು ವಿಗೇ ಹಿಂದಿರುಗಿದರು. ರಾಜನು ಪರಮಾನಂದ ದಿಂದ ಆನಂದೋತ್ಸವ ನಡೆಸುವಂತೆ ಆಜ್ಞೆ ಮಾಡಿದನು. ಆದರೆ ಆ ಉತ್ಸವಗಳ ನಡುವೆ ರಾಣಿ ತನ್ನ ಮಗನನ್ನು ಮಾತೃಹೀನನಾಗು ವಂತೆ ಮಾಡಿ ತೀರಿ ಹೋದಳು.





ರಾಜಕುಮಾರನಿಗೆ ಸಿದ್ಧಾರ್ಥನೆಂದು ನಾಮಕರಣ ಮಾಡಿದರು. ಅಂದರೆ ಆಶಯಸಿದ್ಧಿ ಪಡೆದವ ನೆಂದು ಅರ್ಥ. ರಾಜಕುಮಾರನು ಒಂದು ದಿನ ಉದ್ಯಾನದಲ್ಲಿ ಕುಳಿತುಕೊಂಡಿದ್ದಾಗ, ಬಾಣ ದೇಟು ತಗಲಿದ ಪಕ್ಷಿಯೊಂದು ಅವನ ಮಡಿಲಿಗೆ ಬಿತ್ತು. ಅವನು ಬಾಣವನ್ನು ಕಿತ್ತು ಪಕ್ಷಿಯನ್ನು ಕಾಪಾಡಿದನು. ಅಷ್ಟರಲ್ಲಿ ಅವನ ಜ್ಞಾತಿಯಾದ ದೇವ ದತ್ತನು ಅಲ್ಲಿಗೆ ಬಂದನು.

"ಆ ಪಕ್ಷಿಯನ್ನು ಹೊಡೆದವನು ನಾನು. ಅದನ್ನು ನನಗೆ ಕೊಡು" ಎಂದನು ದೇವದತ್ತ. ಆದರೆ ಸಿದ್ಧಾರ್ಥನು ಪಕ್ಷಿಯನ್ನು ಕೊಡಲಿಲ್ಲ. ಇಬ್ಬರೂ ರಾಜನ ಸಭೆಗೆ ಹೋದರು. "ಯಾವ ಪ್ರಾಣಿಯಾದರೂ ಅದನ್ನು ಕೊಲ್ಲಲು ನೋಡಿದವನಿಗೆ ಸೇರುತ್ತದೆಯೆ? ಅದರ ಪ್ರಾಣವನ್ನು ಕಾಪಾಡಿದವನಿಗೆ ಸೇರುತ್ತದೆಯೆ?" ಎಂದು ಸಿದ್ಧಾರ್ಥನು ಕೇಳಿದನು. ಮಂತ್ರಿಗಳು ಅವನಿಗೆ ಅನುಕೂಲವಾಗಿ ಹೇಳಿದರು.





ಒಂದು ದಿನ ನೇಗಿಲು ಹಬ್ಬ ನಡೆಯಿತು. ಹೊಲಗಳನ್ನು ಉಳುವ ಆ ಉತ್ಸವ ನೋಡಲು ರಾಜಕುಮಾರನೂ ಹೋದನು. ಹೊಲದಲ್ಲಿ ಕೆಲವು ಮಂದಿ ರೈತರು ಒಂದು ಹಾವನ್ನು ಹೊಡೆದು ಕೊಲ್ಲುವುದನ್ನು ನೋಡಿದನು. ಈ ಪ್ರಪಂಚ ವ್ಯವಹಾರವು ಹಿಂಸೆಯೊಂದಿಗೆ ಮೇಳವಿಸಿರುವುದೆಂದು ತಿಳಿದು ಅವನಿಗೆ ವಿಚಾರವು ಹಿಡಿಯಿತು.

ಸಿದ್ಧಾರ್ಥನು ಯಾವಾಗಲೂ ಲೋಕದ ರೀತಿ ನೀತಿಗಳನ್ನು ಒಂದೇ ಸಮನೆ ಆಲೋಚಿಸ ತೊಡಗಿದನು. ಮಾನವನು ಯಾವಾಗಲೂ ಘರ್ಷಣೆಗೂ, ಹಿಂಸೆಗೂ ಬಲಿಯಾಗಲೇ ಬೇಕೇನು? ಮನುಷ್ಯನಿಗೆ ಜೀವನದಲ್ಲಿ ಸುಖ ಭೋಗಗಳು ಸಂತೃಪ್ತಿಯನ್ನು ಕೊಡಬಲ್ಲುವೇ? ಮಾನವ ಜೀವಿತಕ್ಕೆ ಬೇರೆ ಯಾವ ಲಕ್ಷ್ಯವೂ ಇಲ್ಲವೇ? ಇದೇ ಅವನ ಧ್ಯಾನ.





ಮನೆ ದಾಟದೆ ಒಳಗೇ ಇದ್ದರೆ ರಾಜಕುಮಾರನು ಚಕ್ರವರ್ತಿಯಾಗುವನೆಂದೂ, ಇಲ್ಲದಿದ್ದರೆ ಬುದ್ಧತ್ವ ಪಡೆಯುವನೆಂದೂ ಜ್ಯೋತಿಷ್ಕರು ಹೇಳಿದರು. ರಾಜನು ಕುಮಾರನಿಗಾಗಿ ಮೂರು ಮಂದಿರಗಳನ್ನು ನಿರ್ಮಿಸಿದನು. ಬೇಸಗೆಗೆ ಚಂದ್ರಶಿಲೆಗಳ ಮಂದಿರ, ಶೀತಕಾಲಕ್ಕೆ ದಾರು ಮಂದಿರ, ಮಳೆಗಾಲಕ್ಕೆ ವಿಶಾಲ ಮಂದಿರ ಹೀಗೆ ಅವನಿಗೆ ಸಕಲ ಸೌಖ್ಯಗಳೂ ಒದಗಿಸಲ್ಪಟ್ಟವು.

ಸುಪ್ರಬುದ್ಧನ ಮಗಳಾದ ಯಶೋಧರೆ ಅತ್ಯಂತ ಸುಂದರಿ. ಅವಳ ತಂದೆ ಅವಳಿಗೆ ಸ್ವಯಂವರವನ್ನು ಏರ್ಪಡಿಸಿದನು. ಶುದ್ಧೋದನನು ಆ ಸ್ವಯಂವರಕ್ಕೆ ಸಿದ್ಧಾರ್ಥನನ್ನು ಕಳುಹಿಸಿದನು. ಸ್ವಯಂವರದ ಸ್ಪರ್ಧೆಯಲ್ಲಿ ಅನೇಕ ರಾಜಕುಮಾರರು ಭಾಗವಹಿಸಿದರು. ಎಲ್ಲಾ ಸ್ಪರ್ಧೆಗಳಲ್ಲಿಯೂ ಸಿದ್ಧಾರ್ಥನೇ ಗೆದ್ದನು.





ಯಶೋಧರೆ ವರಮಾಲೆಯನ್ನು ಸಿದ್ಧಾರ್ಥನ ಕೊರಳಿಗೆ ಹಾಕಿದಳು. ಅವರ ವಿವಾಹವು ನಡೆಯಿತು. ಸಿದ್ಧಾರ್ಥನು ತನ್ನ ವಧುವಿನೊಂದಿಗೆ ತನ್ನ ನಗರಕ್ಕೆ ಹಿಂದಿರುಗಿದನು. ಕಪಿಲವಸ್ತುವಿನಲ್ಲಿ ವೈಭವದಿಂದ ಆನಂದೋತ್ಸವಗಳು ನಡೆದುವು. ಇನ್ನು ತನ್ನ ಮಗನು ಮನೆ ಬಿಟ್ಟು ಹೋಗಲಾರನೆಂದು ಶುದ್ಧೋದನನ ಮನಸ್ಸಿಗೆ ನೆಮ್ಮದಿಯಾಯಿತು.



# ಲೋಕೋತ್ತರ ಶೋಧನೆ

"ರಾಜಕುಮಾರನು ಕಷ್ಟಗಳನ್ನು ನೋಡಬಾರದು; ಕಷ್ಟಗಳನ್ನು ಕುರಿತು ಕೇಳಬಾರದು" ಎಂದು ಶುದ್ಧೋದನ ಮಹಾರಾಜನು ಆಣತಿ ಹೊರಡಿಸಿದ್ದನು. ಸಿದ್ಧಾರ್ಥನಿಗೆ ಎಲ್ಲಾ ಸುಖ ಸೌಕರ್ಯಗಳನ್ನೂ ಒದಗಿಸಿದ್ದನು. ಅವನ ವಿನೋದಕ್ಕಾಗಿ ಒಳ್ಳೆಯ ನರ್ತಕಿಯರನ್ನೂ, ಗಾಯಕರನ್ನೂ ನಿಯೋಜಿಸಿದ್ದನು.

ಯಶೋಧರೆಗೆ ಪುತ್ರೋದಯವಾಯಿತು. ಶುದ್ಧೋದನನು ತನ್ನ ಮಗನು ಆಗಾಗ ವೈರಾಗ್ಯ ಧೋರಣೆಯಲ್ಲಿರುವುದನ್ನು ನೋಡಿ, ಅವನ ಭವಿಷ್ಯತ್ತನ್ನು ಕುರಿತು ಹೆದರುತ್ತಿದ್ದುದರಿಂದ, ಸಿದ್ಧಾರ್ಥನ ಮಗನಿಂದಾಗಿ, ಇನ್ನು ಅವನು ಮನೆಬಿಟ್ಟು ಹೋಗಲಾರನೆಂದು ಧೈರ್ಯ ತಾಳಿದನು.





ಒಂದು ದಿನ ಸಿದ್ಧಾರ್ಥನು ತನ್ನ ತಂದೆಯ ಅನುಜ್ಞೆ ಪಡೆದು ಉದ್ಯಾನಕ್ಕೆ ಹೊರಟನು. ದಾರಿಯಲ್ಲಿ ಒಬ್ಬ ಮುದುಕನು ಬೆನ್ನು ಮುರಿದು ನಡೆಯುವುದನ್ನು ಕಂಡನು. ಮತ್ತೊಮ್ಮೆ ಒಬ್ಬ ರೋಗಗ್ರಸ್ತನೂ, ಇನ್ನೊಮ್ಮೆ ಸತ್ತವನ ಶವವೂ ಅವನ ಕಣ್ಣಿಗೆ ಬಿದ್ದುವು. ಅಂತಹ ದೃಶ್ಯಗಳನ್ನು ಎಂದೂ ನೋಡದಿದ್ದ ಅವನಿಗೆ ಕಳವಳವಾಯಿತು.



ನಾಲ್ಕನೇ ಸಾರಿ ಅವನಿಗೆ ಕಾಣಿಸಿದ ಸನ್ಯಾಸಿ ತುಂಬ ಶಾಂತವಾಗಿದ್ದನು. ಸಿದ್ಧಾರ್ಥನ ಸಹಚರನಾದ ಚೆನ್ನನು ಸಿದ್ಧಾರ್ಥನ ಪ್ರಶ್ನೆಗಳಿಗೆ ವಾರ್ಧಕ್ಯವೂ, ವ್ಯಾಧಿಯೂ, ಸಾವೂ ಎಲ್ಲರಿಗೂ ಬರುವಂಥಾದ್ದೇ ಎಂದನು. ಸನ್ಯಾಸಿ ಲೋಕದ ಬಂಧಗಳನ್ನು ಕಡಿದುಕೊಂಡು ದೇವರನ್ನು ಹುಡುಕುತ್ತಾನೆಂದೂ ಚೆನ್ನನಿಂದ ತಿಳಿಯಿತು.

ಸಿದ್ಧಾರ್ಥನ ಮನಸ್ಸಿನಲ್ಲಿ ಆ ದೃಶ್ಯಗಳನ್ನು ಕುರಿತು ಮಥನವು ಪ್ರಾರಂಭವಾಯಿತು. ಮನುಷ್ಯನು ಏತಕ್ಕಾಗಿ ಕಷ್ಟಪಡುತ್ತಾನೆ? ಲೋಕದಲ್ಲಿ ಸಂತೃಪ್ತಿ ಸಿಗುವಹಾಗಿದ್ದರೆ ಸನ್ಯಾಸಕ್ಕೆ ಏನು ಕೆಲಸ? ಈ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ತಿಳಿದುಕೊಳ್ಳಬೇಕೆಂದು ಸಿದ್ಧಾರ್ಥನು ಒಂದು ದಿನ ರಾತ್ರಿ ಮನೆಯಿಂದ ಹೊರಟುಹೋದನು.





ರಾಜಭವನದ ದ್ವಾರದ ಹತ್ತಿರ ಒಂದು ವಿಚಿತ್ರಾಕಾರವು ಅವನಿಗೆ ತೋರಿ, "ರಾಜಕುಮಾರಾ, ನಿನ್ನ ಕೀರ್ತಿ ದೊಡ್ಡದಾಗುತ್ತದೆ. ಸೌಖ್ಯವೂ ನಿನಗೆ ದೊರೆಯುತ್ತದೆ. ನೀನು ರಾಜಾಧಿರಾಜನಾಗುವೆ. ಹೋಗಬೇಡ!" ಎಂದು ರಹಸ್ಯವಾಗಿ ಹೇಳಿತು. ಹಾಗೆ ಹೇಳಿದವನು ಅನ್ವೇಷಕರನ್ನು ತಪ್ಪುದಾರಿ ಹಿಡಿಸುವವನಾದ ದುಷ್ಟಶಕ್ತಿಯ ಮಾರನೇ!

ಸಿದ್ಧಾರ್ಥನು ಕುದುರೆಯ ಮೇಲೇರಿ ತನ್ನ ಅನುಚರನಾದ ಚೆನ್ನನನ್ನು ತನ್ನೊಂದಿಗೆ ಕರೆದುಕೊಂಡು ಹೋದನು. ಅರಣ್ಯಕ್ಕೆ ಹೋದ ಕೂಡಲೇ ಅವನು ಕುದುರೆಯಿಂದ ಇಳಿದು ಕುದುರೆಯನ್ನು ತೆಗೆದುಕೊಂಡು ರಾಜಭವನಕ್ಕೆ ಹೋಗುವಂತೆ ಚೆನ್ನನಿಗೆ ಹೇಳಿದನು. ಆಮೇಲೆ ಅವನು ತನ್ನ ಉದ್ದವಾದ ತಲೆಗೂದಲನ್ನು ಕತ್ತಿಯ ಒಂದೇಟಿಗೆ ಕತ್ತರಿಸಿದನು.





ಮರು ದಿನ ಬೆಳಿಗ್ಗೆ ಚೆನ್ನನು ರಾಜಕುಮಾರನ ನಿಷ್ಕ್ರಮಣವನ್ನು ಕುರಿತು ರಾಜನೊಂದಿಗೂ, ಇತರರೊಂದಿಗೂ ಹೇಳಿದನು. ಅದೇ ಸಮಯದಲ್ಲಿ ಸಿದ್ಧಾರ್ಥನು ಅರಣ್ಯದಾಚೆಯ ಕಡೆಯಲ್ಲಿ ತನ್ನ ವಸ್ತ್ರಭೂಷಣಗಳನ್ನು ಒಬ್ಬ ಭಿಕ್ಷುಕನಿಗೆ ಕೊಟ್ಟು, ಅವನದನ್ನು ತಾನು ಧರಿಸಿಕೊಂಡನು.

ಸಿದ್ಧಾರ್ಥನು ಅನೇಕ ಪ್ರದೇಶಗಳಿಗೆ ಹೋಗಿ ದೊಡ್ಡ ದೊಡ್ಡ ಜ್ಞಾನಿಗಳನ್ನು ಸಂಧಿಸಿ ಅವರಿಗೆ ತಿಳಿದುದನ್ನೆಲ್ಲಾ ಕೇಳಿ ತಿಳಿದುಕೊಂಡನು. ಆದರೆ ಸತ್ಯವನ್ನು ಸ್ವತಃ ಶೋಧಿಸಿ ತಿಳಿಯಬೇಕಾದುದೇ ಎಂದು ಅವನಿಗೆ ತೋರಿತು. ಧ್ಯಾನನಿಷ್ಠೆಗೆ ತಕ್ಕ ಸ್ಥಳವನ್ನು ಶೋಧಿಸಿದನು.





ಸಿದ್ಧಾರ್ಥನು ಉರುವೇಲ ವನದೊಳಗಿನ ಒಂದು ವಟವೃಕ್ಷದ ಕೆಳಗೆ ಕುಳಿತುಕೊಂಡು ಧ್ಯಾನನಿಷ್ಠೆಯಲ್ಲಿ ಮುಳುಗಿ ಹೋದನು. ಐದು ಮಂದಿ ಸಂಚಾರ ತಾಪಸರು ಅವನನ್ನು ನೋಡಿ ಮಹಾಪುರುಷನೆಂದು ತಿಳಿದು ಅವನಿಗೆ ಶುಶ್ರೂಷೆ ಮಾಡಿದರು. ಸಿದ್ಧಾರ್ಥನು ಆತ್ಮಾನ್ವೇಷಣೆಯಲ್ಲಿ ಆರು ವರ್ಷಗಳನ್ನು ಕಳೆದನು.

ಶರೀರವನ್ನು ತಪಿಸಿಕೊಳ್ಳುವುದರಿಂದ ತನ್ನ ಲಕ್ಷ್ಯವು ಸಿದ್ಧಿಸಲಾರದೆಂದು ಅವನಿಗೆ ತಿಳಿದು ಹೋಯಿತು. ಸುಜಾತಾ ಎಂಬ ಯುವತಿ ತನಗಾಗಿ ತಂದ ಆಹಾರವನ್ನು ಅವನು ಸ್ವೀಕರಿಸಿದನು. ಅವನಿಗೆ ನಿಷ್ಠಾಭಂಗವಾಯಿತೆಂದುಕೊಂಡು ಅವನ ಐದು ಮಂದಿ ಶಿಷ್ಯರೂ ಅವನನ್ನು ಬಿಟ್ಟು ಹೊರಟುಹೋದರು.





ಸಿದ್ಧಾರ್ಥನು ನದೀತೀರದಲ್ಲಿದ್ದ ಬೋಧಿವೃಕ್ಷದ ಕೆಳಗೆ ತನ್ನ ಜಾಗವನ್ನು ಬದಲಿಸಿಕೊಂಡನು. ಆ ದಿನ ಹುಣ್ಣಿಮೆಯ ರಾತ್ರಿ. ಅವನು ತನ್ನನ್ನು ಶಾಂತಿ ಆವರಿಸಿಕೊಂಡಂತೆ, ತನ್ನಲ್ಲಿ ದೊಡ್ಡ ಶಾಂತಿ ವಿಕಾಸವಾದಂತೆ ಭಾವಿಸಿದನು. ಅವನಿಗೆ ಜ್ಞಾನೋದಯವಾಯಿತು. ಅವನು ಬುದ್ಧತ್ವವನ್ನು ಹೊಂದಿದನು.



# ಬುದ್ಧನ ಪ್ರಸ್ಥಾನ

ಬುದ್ಧತ್ವ ಹೊಂದಿದ ಸಿದ್ಧಾರ್ಥನು ಜನನ ಮರಣ ಬಂಧಗಳಿಂದ ವಿಮುಕ್ತನಾಗಿ ನಿರ್ವಾಣತೆಯ ಪರಿಸ್ಥಿತಿಯಲ್ಲಿದ್ದನು. ಆದರೆ ಮಾನವ ಸಮುದಾಯವು ಪೀಡಿತ ಪರಿಸ್ಥಿತಿಯಲ್ಲಿ; ಅಜ್ಞಾನಾಂಧಕಾರದಲ್ಲಿ ಬಿದ್ದಿರುವುದನ್ನು ನೋಡಿ ಅವನು ನಿರ್ವಾಣನಾಗುವ ಆಲೋಚನೆಯನ್ನು ಬಿಟ್ಟು, ಪ್ರಜೆಗಳಿಗೆ ಜ್ಞಾನೋಪದೇಶ ಮಾಡಬೇಕೆಂದು ಸಂಕಲ್ಪಿಸಿಕೊಂಡನು.

ಮೊತ್ತಮೊದಲು ಅವನು ತನ್ನನ್ನು ಬಿಟ್ಟು ಹೋದ ಐವರು ತಪಸ್ವಿಗಳನ್ನು ಹುಡುಕುತ್ತ, ವಾರಾಣಾಸಿಯ ಸಮೀಪದಲ್ಲಿದ್ದ ಒಂದು ವನದಲ್ಲಿ ಅವರನ್ನು ನೋಡಿದನು. ಅವರು ಅವನನ್ನು ಮೊದಲು ಲಕ್ಷ್ಯಮಾಡಲಿಲ್ಲ. ಆದರೆ ಅವನು ತೀರ ಸಮೀಪಿಸಿದ ಮೇಲೆ ಪರವಶರಾಗಿ ಅವನಿಗೆ ಪ್ರಣಾಮ ಮಾಡಿದರು.





ಆಮೇಲೆ ಬುದ್ಧನಿಗೆ ಶಿಷ್ಯನಾಗಿ ಒಬ್ಬ ಧನಿಕನ ಕುಮಾರನಾದ ಯಶನೆಂಬವನು ಬಂದನು. ಅದನ್ನು ತಿಳಿದು ಯಶನ ತಂದೆ ಕೋಪಗೊಂಡು ತನ್ನ ಮಗನನ್ನು ಕರೆದುಕೊಂಡು ಹೋಗಲು ಬಂದನು. ಬುದ್ಧನು ಆ ತಂದೆಯೊಂದಿಗೆ ಸ್ವಲ್ಪ ಹೊತ್ತು ಮಾತಾಡಿದ ಮೇಲೆ, ಅವನು ಕೂಡಾ ಬುದ್ಧನಿಗೆ ಶಿಷ್ಯನಾದನು.



ಒಂದು ಕೊಳದ ಬದಿಯಲ್ಲಿ ಕೆಲಮಂದಿ ಸಂಪನ್ನ ಯುವಕರು ತಮ್ಮ ಹೆಂಡತಿಯರೊಂದಿಗೆ ವಿಹರಿಸಿಕೊಂಡಿದ್ದರು. ಅವರಲ್ಲಿ ಬ್ರಹ್ಮಚಾರಿಯಾದ ಒಬ್ಬನು ತನ್ನೊಂದಿಗೆ ಒಬ್ಬಳು ನರ್ತಕಿಯನ್ನು ಕರೆದುಕೊಂಡಿದ್ದನು. ಎಲ್ಲರೂ ನಿದ್ರೆಯಲ್ಲಿದ್ದಾಗ ಆ ನರ್ತಕಿ ಎಲ್ಲರ ನಗಗಳನ್ನೂ ಅಪಹರಿಸಿಕೊಂಡು ಓಡಿಹೋದಳು.

ನಿದ್ರೆಯಿಂದೆದ್ದ ಯುವಕರು ಅವಳನ್ನು ಹಿಡಿಯಲು ಹೊರಟರು. ದಾರಿಯಲ್ಲಿ ಅವರಿಗೆ ಬುದ್ಧನು ಕಾಣಿಸಿದನು. "ನರ್ತಕಿಗಾಗಿ ಹುಡುಕುವುದೂ, ನಿಮ್ಮ ಆತ್ಮಗಳನ್ನು ಅನ್ವೇಷಿಸುವುದೂ ಇವೆರಡರಲ್ಲಿ ಯಾವುದು ಮೇಲು ?" ಎಂದು ಬುದ್ಧನು ಅವರನ್ನು ಕೇಳಿದನು. ಅವರು ಜಡತ್ವದಿಂದ ಹೊರಬಿದ್ದು ಬುದ್ಧನ ಶಿಷ್ಯರಾದರು.





ಉರುವೇಲದ ಬಳಿಯಲ್ಲಿ ಕಸ್ಸಪನೆಂಬ ಪ್ರಸಿದ್ಧ ತಪಸ್ವಿ ಐನೂರು ಮಂದಿ ಶಿಷ್ಯರೊಂದಿಗೆ, ತಾನು ಮಹಾ ಜ್ಞಾನಿಯೆಂದು ಗರ್ವದಲ್ಲಿದ್ದನು. ಅವನಿಗೆ ಬುದ್ಧನು ತನ್ನ ಮತವನ್ನು ಬೋಧಿಸಿ ಅವನನ್ನೂ ಅವನ ಶಿಷ್ಯರನ್ನೂ ತನ್ನ ಶಿಷ್ಯ ವರ್ಗದಲ್ಲಿ ಸೇರಿಸಿಕೊಂಡನು.

ಕಸ್ಸಪನೂ ಅವನ ಶಿಷ್ಯರೂ ತಮ್ಮ ಜಡೆಗಳನ್ನು ಕತ್ತರಿಸಿ ನದಿಯಲ್ಲಿ ಬಿಸುಟರು. ಅನೇಕ ಯೋಜನಗಳ ದೂರದಲ್ಲಿ ಮತ್ತಿಬ್ಬರು ತಪಸ್ವಿಗಳ ಶಿಷ್ಯರು ನದಿಯಲ್ಲಿ ಸ್ನಾನಮಾಡುತ್ತ, ನೀರಿನಲ್ಲಿ ಹೊಡೆದುಕೊಂಡು ಬರುವ ಜಡೆಗಳನ್ನು ನೋಡಿ, ಕುತೂಹಲದಿಂದ ಉರುವೇಲಕ್ಕೆ ಬಂದು ಬುದ್ಧನ ಶಿಷ್ಯರಾದರು.





ಬುದ್ಧನ ಖ್ಯಾತಿ ವಿಸ್ತರಿಸಿತು. ಅಸಂಖ್ಯಾಕರಾದ ಶಿಷ್ಯರನ್ನು ಹಿಂದಿಟ್ಟುಕೊಂಡು ಬುದ್ಧನು ರಾಜ ಗೃಹಕ್ಕೆ ಬಂದನು. ಬಿಂಬಿಸಾರ ಮಹಾರಾಜನು ಅವನಿಗೆ ಗೌರವ ಪುರಸ್ಸರವಾಗಿ ಆತಿಥ್ಯವಿತ್ತು ತನ್ನ ಕೈಯಿಂದಲೇ ಬುದ್ಧನಿಗೆ ತುತ್ತನ್ನು ಊಡಿಸಿದನು.

ಬುದ್ಧನ ತಂದೆ ಶುದ್ಧೋದನನು ಬುದ್ಧನನ್ನು ಕಪಿಲ ವಸ್ತುವಿಗೆ ಆಹ್ವಾನಿಸಲು ದೂತರನ್ನು ಕಳುಹಿಸಿದನು. ಹೋದ ದೂತರು ತಿರುಗಿ ಬರಲಿಲ್ಲ. ಅವರು ಬುದ್ಧನೊಂದಿಗೇ ಉಳಿದು ಹೋದರು. ಆದರೂ ಬುದ್ಧನು ಕಪಿಲವಸ್ತುವಿಗೆ ಬಂದನು. ಅವನಿಗೆ ಅವನ ತಂದೆಯೂ, ಮಲತಾಯಿಯೂ ಇತರರೂ ಘನವಾದ ಸ್ವಾಗತವಿತ್ತರು.





ರಾಜಕುಟುಂಬಕ್ಕೆ ಸೇರಿದವರೆಲ್ಲರೂ ಬುದ್ಧನನ್ನು ನೋಡಲು ಬಂದರು. ಆದರೆ ಅವನ ಹೆಂಡತಿ ಯಶೋಧರೆ ಬರಲಿಲ್ಲ. "ನಾನು ಅವರ ದಯೆಗೆ ಪಾತ್ರಳಾಗಿದ್ದರೆ ಅವರೇ ನನ್ನ ಬಳಿಗೆ ಬರುತ್ತಾರೆ" ಎಂದಳು ಅವಳು. ನಿಜಕ್ಕೂ ಅವಳೂ ಸನ್ಯಾಸಿನಿ ಜೀವಿತದಲ್ಲೇ ಇದ್ದಳು. ಕಡೆಗೆ ಬುದ್ಧನು ತಾನೇ ಅವಳನ್ನು ನೋಡಲು ಬಂದನು.

ಬುದ್ಧನು ಸನ್ಯಾಸಿಯಾದ ಕಾರಣದಿಂದ ಅವನ ಸ್ಥಾನದಲ್ಲಿ ಅವನ ಜ್ಞಾತಿಯಾದ ಆನಂದನನ್ನು ರಾಜನನ್ನಾಗಿ ಮಾಡಲು ಪ್ರಯತ್ನ ನಡೆಯುತ್ತಿದ್ದಿತು. ಆ ದಿನವೇ ಅವನ ವಿವಾಹವೂ ನಡೆಯಲಿತ್ತು. ಆನಂದನು ಮದುಮಗನ ಅಲಂಕಾರದಲ್ಲಿ ಬೆಳಗಿಕೊಂಡಿದ್ದನು. ನಗರದಲ್ಲಿ ಉತ್ಸವ ಸಂಭ್ರಮ.





ಆನಂದನು ಬುದ್ಧನ ಆಶೀರ್ವಾದ ಪಡೆಯಲು ಬಂದನು. ಬುದ್ಧನು ಅವನಿಗೆ ತನ್ನ ಭಿಕ್ಷಾಪಾತ್ರವನ್ನು ಕೊಟ್ಟು ಪ್ರಯಾಣ ಹೊರಟನು. ಆನಂದನು ಅವನ ಹಿಂದೆಯೇ ಹೊರಟನು. ಆನಂದನ ವಧು ಕಿಟಕಿಯಿಂದ ಆ ದೃಶ್ಯವನ್ನು ನೋಡಿ ಅತ್ತಳು. ಆದರೆ ಬುದ್ಧನು ತನ್ನ ಭಿಕ್ಷಾಪಾತ್ರವನ್ನು ತಾನು ಪಡೆಯಲಿಲ್ಲ. ಆನಂದನು ಅದನ್ನು ಅವನಿಗೆ ತಿರುಗಿ ಕೊಡಲಾಗದೆ ಬುದ್ಧನ ಹಿಂದೆಯೇ ಹೋದನು.



# ಸಿಕ್ಕದೇ ಹೋದ ಸಾಸಿವೆ

ಒಂದು ದಿನ ಯಶೋಧರೆ ತನ್ನ ಮಗ ರಾಹುಲನೊಂದಿಗೆ "ನಿನ್ನ ತಂದೆಯ ಹತ್ತಿರ ನಾಲ್ಕು ಪೆಟ್ಟಿಗೆ ತುಂಬಾ ಆಭರಣಗಳಿದ್ದುವು. ಅವೆಲ್ಲಾ ಅವರ ಮಗನಾದ ನಿನಗೇ ಸೇರಬೇಕು. ಹೋಗಿ ಅವುಗಳನ್ನು ಎಲ್ಲಿ ಇಟ್ಟಿದ್ದಾರೆಂದು ಕೇಳು" ಎಂದಳು. ಮಹಾತ್ಮನಾದ ಬುದ್ಧನೊಂದಿಗೆ ಮಾತಾಡುವ ಅವಕಾಶ ಸಿಕ್ಕಿತೆಂದು ರಾಹುಲನಿಗೆ ಸಂತೋಷವಾಯಿತು.

ರಾಹುಲನು ಬುದ್ಧನ ಬಳಿಗೆ ಹೋಗಿ "ಅಪ್ಪಾ, ನಿಮ್ಮ ಸೊತ್ತು ನನಗೆ ತಾನೇ ಬರಬೇಕು? ಕೊಡುವಿರಾ?" ಎಂದನು. ಬುದ್ಧನು ಕಿರುನಗುವಿನಿಂದ, "ನನ್ನ ವಾರಸುದಾರನಾದ ನಿನಗೆ ನನ್ನ ಉತ್ತಮ ಸಂಪತ್ತಾದ ಜ್ಞಾನವನ್ನು ಕೊಡುತ್ತೇನೆ, ತೆಗೆದುಕೊ" ಎಂದು ತನ್ನ ಪ್ರಧಾನ ಶಿಷ್ಯರಲ್ಲೊಬ್ಬನಾದ ಸಾರಿಪುತ್ರನನು ಕರೆದು ರಾಹುಲನಿಗೆ ಸನ್ಯಾಸದೀಕ್ಷೆ ಕೊಡುವಂತೆ ಹೇಳಿದನು.





ಇದನ್ನು ತಿಳಿದು ಶುದ್ಧೋದನ ರಾಜನಿಗೆ ಬಹಳ ಚಿಂತೆಯಾಯಿತು. ಅವನು ಬುದ್ಧನ ಬಳಿಗೆ ಬಂದು, "ಪ್ರಭೂ! ನೀವು ರಾಜ್ಯವನು ತಿರಸ್ಕರಿಸಿದಿರಿ. ನಿಮ್ಮ ತಮ್ಮ ಆನಂದನಿಂದಲೂ ತಿರಸ್ಕರಿಸುವಂತೆ ಮಾಡಿದಿರಿ. ಈಗ ನಿಮ್ಮ ಮಗನು ಕೂಡಾ ನಮಗಿಲ್ಲದಂತಾಯಿತು. ಇನ್ನು ನಮಗೆ ಯಾರುಗತಿ?" ಎಂದು ಕೇಳಿದನು. ಆಗ ಬುದ್ಧನು ಯಾವ ಯುವಕನಾದರೂ ತಾಯಿ ತಂದೆಯರ ಅನುಮತಿ ಇಲ್ಲದೆ ಸನ್ಯಾಸಿಯಾಗಬಾರದೆಂಬ ನಿಯಮವನ್ನು ಏರ್ಪಡಿಸಿದನು.



ಶ್ರಾವಸ್ತಿಯಲ್ಲಿ ಸುದತ್ತನೆಂಬ ಧನಿಕ ವರ್ತಕ ನಿದ್ದನು. ಅವನು ಬುದ್ಧನಿಗೆ ಮಳೆಗಾಲದಲ್ಲಿ ವಾಸಮಾಡಲು ಅಂದವಾದ ಜೇತವನವನ್ನು ಕೊಡಬೇಕೆಂದುಕೊಂಡನು. ಆ ವನವು ಜೇತ ನೆಂಬ ಕ್ಷತ್ರಿಯನದು. ಸುದತ್ತನು ಆ ವನದಲ್ಲೆಲ್ಲಾ ಬಂಗಾರವನ್ನು ಹರಡಿ, ಅದನ್ನು ಮೂಲ್ಯವಾಗಿ ಕೊಟ್ಟರೆ ವನವನ್ನು ಮಾರುವೆನೆಂದನು ಜೇತ·

ಸುದತ್ತನು ತನಗಿರುವುದನ್ನೆಲ್ಲಾ ಮಾರಿ ಬಂಗಾರದ ತಗಡುಗಳನ್ನು ಕೊಂಡುಕೊಂಡನು. ಅವೆಲ್ಲಾ ವನದ ಅರ್ಧ ಭಾಗವನ್ನು ಹರಡುವು ದಕ್ಕಷ್ಟೇ ಸರಿಯಾಯಿತು. ಇದನ್ನು ನೋಡಿ ಜೇತನು ಮುಗ್ಧನಾಗಿ ಉಳಿದ ವನದಲ್ಲಿ ತಾನೇ ಬಂಗಾರವನ್ನು ಹರಡಿದನು. ಇಬ್ಬರೂ ಕೂಡಿಯೇ ಬುದ್ಧನನ್ನು ಅಲ್ಲಿಗೆ ಸ್ವಾಗತಿಸಿದರು.





ಬುದ್ಧನು ಜೇತವನದಲ್ಲಿರುವಾಗ ಗೌತಮಿ ಎಂಬ ಕುಲಸ್ತ್ರೀಯೊಬ್ಬಳು ಪುತ್ರವಿಯೋಗಕ್ಕೆ ಗುರಿಯಾದಳು. ಬಂಧುಗಳು ಎಷ್ಟು ವಿಧದಲ್ಲಿ ಹೇಳಿದರೂ ಅವಳು ತನ್ನ ಮಗನ ಶವವನ್ನು ಬಿಟ್ಟುಕೊಡಲಿಲ್ಲ. ಅವಳ ದುಃಖಕ್ಕಂತೂ ಪಾರವೇ ಇರಲಿಲ್ಲ.

"ನಿನ್ನ ಮಗನನ್ನು ಬುದ್ಧನು ಬದುಕಿಸುವನೋ ಏನೊ?" ಎಂದು ಕೆಲವರು ಗೌತಮಿಯೊಂದಿಗೆ ಹೇಳಿದರು. ಅವಳು ಶೀಘ್ರವಾಗಿ ಬುದ್ಧನ ಬಳಿಗೆ ಬಂದಳು. ಸಂಗತಿ ತಿಳಿದು ಬುದ್ಧನು, "ಸೋದರೀ, ನೀನು ಹೋಗಿ ಮೃತ್ಯು ಎಂದಿಗೂ ಪ್ರವೇಶಿಸದ ಮನೆಯಿಂದ ಒಂದೇ ಒಂದು ಸಾಸಿವೆಕಾಳು ತಂದುಬಿಡು. ನಿನ್ನ ಮಗ ಬದುಕುತ್ತಾನೆ" ಎಂದು ಅವಳಿಗೆ ಹೇಳಿದನು.





ತಾನು ತರುವಸಾಸಿವೆಕಾಳಿನಿಂದ ಬುದ್ಧನು ಅದ್ಭುತವೇನೋ ಮಾಡುವನೆಂದುಕೊಂಡು ಗೌತಮಿ ಮನೆಮನೆ ತಿರುಗಿದಳು. ಆದರೆ ಮೃತ್ಯು ಪ್ರವೇಶಿಸದಿದ್ದ ಮನೆ ಎಲ್ಲಿಯೂ ಸಿಗಲಿಲ್ಲ. ಅತ್ಯಂತ ಧನಿಕನೊಬ್ಬನ ಮನೆಯಲ್ಲಿ ಆ ವರ್ಷ ಮೂರು ಮರಣಗಳಾದುವಂತೆ!

ಅವಳು ಒಬ್ಬ ಸುಪ್ರಸಿದ್ಧ ವೈದ್ಯನ ಮನೆಗೆ ಹೋದಳು. ಅಂತಹ ವೈದ್ಯನ ಮನೆಗೆ ಮೃತ್ಯು ಅಡಿಯಿಡಲಾರನೆಂದುಕೊಂಡಳು. ಆದರೆ ಆ ವೈದ್ಯನ ಮಗನೂ ಮಗಳೂ ಕೂಡಾ ಮೃತ್ಯುವಿನ ಪಾಲಾದ ಸಂಗತಿ ಅವಳಿಗೆ ತಿಳಿಯಿತು.





ಬುದ್ಧನು ತನಗೆ ಮಾಡುವ ಉಪದೇಶವೇನೆಂಬುದು ಕ್ರಮವಾಗಿ ಅವಳಿಗೆ ತಿಳಿಯಿತು. ಅವಳು ತನ್ನ ಕುಮಾರನ ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಚಿತಿಯ ಮೇಲಿಟ್ಟು "ಕಂದಾ! ಸತ್ತುಹೋದವರೆಲ್ಲಾ ನನ್ನಂತಹ ತಾಯಿಯ ಮಕ್ಕಳೇ!" ಎಂದಳು.

ಸಾಯಂಕಾಲದಲ್ಲಿ ಗೌತಮಿ ಬುದ್ಧನ ಬಳಿಗೆ ಬಂದಳು. "ಸಾಸಿವೇಕಾಳು ಸಿಕ್ಕಿತೇನು?" ಎಂದು ಬುದ್ಧನು ಕೇಳಿದನು. "ಇಲ್ಲ ದೇವಾ! ಆದರಿಂದ ನನಗೆ ನಿಮ್ಮ ದಿವ್ಯ ಉಪದೇಶ ಸಿಕ್ಕಿತು" ಎಂದಳು ಗೌತಮಿ. ಈಗ ಅವಳು ಜೀವನದ ಲಕ್ಷ್ಯವನ್ನು ತಿಳಿದುಕೊಳ್ಳುವ ಸ್ಥಿತಿಯಲ್ಲಿದ್ದಳು. ಬುದ್ಧನು ಅದನ್ನು ಅವಳಿಗೆ ಬೋಧಿಸಿದನು. ಅವಳು ಅವನ ಶಿಷ್ಯಳಾದಳು.





ಬುದ್ಧನು ವೈಶಾಲಿಯಲ್ಲಿರುವಾಗ ಒಂದು ದಿನ ಅವನಿಗೆ ತನ್ನ ತಂದೆ ಮರಣಶಯ್ಯೆಯಲ್ಲಿರುವಂತೆ ತಿಳಿಯಿತು. ಅವನು ಕಪಿಲವಸ್ತುವಿಗೆ ಹೋಗಿ ಸಾಯುವ ತಂದೆಯನ್ನು ಆಶೀರ್ವದಿಸಿದನು. ತರುವಾಯ ಅವನು ತನ್ನ ಮತವನ್ನು ಪ್ರಜೆಗಳಲ್ಲಿ ಪ್ರಚಾರ ಮಾಡಲು ಹೊರಟನು.



# ಅಜೇಯನಾದ ಬುದ್ಧ

ಬುದ್ಧನ ಜ್ಞಾತಿಯಾದ ದೇವದತ್ತನು ಬುದ್ಧನಿಗೆ ಶಿಷ್ಯನಾಗಿ ನಟಿಸುತ್ತ, ಬುದ್ಧನ ಮೇಲೆ ಅಸೂಯೆಯಿಂದಿದ್ದನು. ಮಗಧರಾಜ ಕುಮಾರನಾದ ಅಜಾತ ಶತ್ರುವೂ, ದೇವದತ್ತನೂ ಸ್ನೇಹಿತರು. ಅಜಾತಶತ್ರು, ಅವನ ತಂದೆಯಾದ ಬಿಂಬಿಸಾರನನ್ನು ಕೊಲ್ಲುವಂತೆ ದೇವದತ್ತನು ಪ್ರೋತ್ಸಾಹ ಕೊಡುತ್ತಿದ್ದನು. ಹಾಗೆ ಅಜಾತಶತ್ರು ರಾಜನಾಗಿ ಬಿಟ್ಟರೆ, ತನಗೆ ಉನ್ನತಿ ಬರುವುದೆಂದು ದೇವದತ್ತನ ಆಶೆ.

ದೇವದತ್ತನ ಪ್ರೋತ್ಸಾಹದಿಂದ ಅಜಾತಶತ್ರು ಒಂದುದಿನ ಸಮಯನೋಡಿ ಬಿಂಬಿಸಾರನ ಶಯನಾಗಾರವನ್ನು ರಹಸ್ಯವಾಗಿ ಪ್ರವೇಶಿಸಿದನು. ನಿದ್ದೆಯಲ್ಲಿದ್ದ ರಾಜನನ್ನು ಸಮೀಪಿಸಿ ಸುರಿಗತ್ತಿಯನ್ನು ಮೇಲೆತ್ತಿ ರಾಜನನ್ನು ತಿವಿಯಲು ನೋಡಿದನು.





ಆಗ ಕಾಕತಾಳೀಯವಾಗಿ ಸೇವಕನೊಬ್ಬ ಆ ಕೋಣೆಗೆ ಬಂದು ಗಟ್ಟಿಯಾಗಿ ಕೂಗಿದನು. ಅಜಾತ ಶತ್ರುವಿನ ಕೈಯಿಂದ ಕತ್ತಿ ಜಾರಿ ಕೆಳಗೆ ಬಿತ್ತು. ರಾಜನ ಅಂಗರಕ್ಷಕರು ಓಡುತ್ತಾ ಬಂದರು. ಅಜಾತಶತ್ರು ಸುಲಭವಾಗಿ ಅವರ ಕೈಗೆ ಸಿಕ್ಕಿ ಬಿದ್ದನು.



ಈ ದುಷ್ಕಾರ್ಯಕ್ಕೆ ತನ್ನನ್ನು ಪ್ರೇರೇಪಿಸಿದವನು ದೇವದತ್ತನೆಂದು ಅಜಾತಶತ್ರು ಒಪ್ಪಿದನು. ಮಂತ್ರಿಗಳು ಅಜಾತಶತ್ರುವನ್ನು ಶಿಕ್ಷಿಸಬೇಕು ಎಂದರು. ಆದರೆ ರಾಜನು "ನಾನು ವೃದ್ಧನಾದೆ. ಇನ್ನು ವಿರಮಿಸುತ್ತೇನೆ. ನನ್ನ ಮಗನು ರಾಜನಾದ ಮೇಲೆ ಅವನಿಗೆ ಆತ್ಮವಿಶ್ವಾಸ ಉಂಟಾಗುತ್ತದೆ. ದುಷ್ಟರು ಅವನನ್ನು ಪ್ರೇರೇಪಿಸಲಾರರು !" ಎಂದನು.

ಅಜಾತಶತ್ರು ತಂದೆಯ ಕಾಲಿನ ಬುಡದಲ್ಲಿ ಬಿದ್ದು ತಂದೆ ಕೊಡುವ ಕ್ಷಮಾಭಿಕ್ಷೆಗೆ ಅರ್ಹನಾಗಿ ನಡೆದುಕೊಳ್ಳುತ್ತೇನೆಂದು ಹೇಳಿದನು. ಬಿಂಬಿಸಾರನು ಮಗನಿಗೇ ರಾಜ್ಯವನ್ನು ಕೊಟ್ಟುಬಿಟ್ಟನು. ಆ ಮೇಲೆ ಅಜಾತಶತ್ರು ದೇವದತ್ತನನ್ನು ಅಲಕ್ಷ್ಯ ಮಾಡಿ, ಬುದ್ಧನ ಬೋಧನೆಗಳನ್ನು ಕೇಳ ತೊಡಗಿದನು. ಅವನು ಬೌದ್ಧ ಮತ್ತು ಜೈನ ಎರಡು ಮತಗಳನ್ನೂ ಆದರಿಸಿದನು.





ಅಜಾತಶತ್ರುವಿನಲ್ಲಿ ಉಂಟಾದ ಹೃದಯ ಪರಿವರ್ತನೆಯನ್ನು ನೋಡಿ, ಆಶಾಭಂಗ ಗೊಂಡ ದೇವದತ್ತನು ತಾನೇ ಬುದ್ಧನನ್ನು ಕೊಂದು ಬಿಡಬೇಕೆಂದು ನಿಶ್ಚಯಿಸಿ, ಕೊಂಡನು. ಬುದ್ಧನು ದಿನಾ ಸಂಧ್ಯಾ ಕಾಲದಲ್ಲಿ ಗುಡ್ಡದ ಬುಡದಲ್ಲಿ ಕಾಲಾಡಿಸುವ ಪದ್ಧತಿಯಿತ್ತು. ಒಂದು ದಿನ ದೇವದತ್ತನು ಗುಡ್ಡದ ಮೇಲಿನಿಂದ ಬುದ್ಧನ ಮೇಲಕ್ಕೆ ಬೀಳುವಂತೆ ದೊಡ್ಡದೊಂದು ಶಿಲೆಯನ್ನು ಉರುಳಿಸಿಬಿಟ್ಟನು.

ಅದೇ ಸಮಯದಲ್ಲಿ ಮತ್ತೊಂದು ಶಿಲೆ ತನ್ನಂತಾನೇ ಕೆಳಗೆ ಹೊರಳುತ್ತ, ಮಧ್ಯ ದಾರಿಯಲ್ಲಿ ಮೊದಲನೇ ಕಲ್ಲಿಗೆ ಒಂದು ಬದಿಯಲ್ಲಿ ಢೀಕೊಟ್ಟು, ಅದರ ಮಾರ್ಗವನ್ನು ತಪ್ಪಿಸಿತು. ಎರಡು ಶಿಲೆಗಳೂ ಬುದ್ಧನಿಗೆ ಕೆಲವು ಗಜಗಳಷ್ಟು ದೂರದಲ್ಲಿ ಬಿದ್ದುವು. ಬುದ್ಧನಿಗೆ ಅಪಾಯ ತಪ್ಪಿದರೂ ಅವನ ಪಾದಕ್ಕೆ ಕಲ್ಲಿನ ಚೂರೊಂದು ಹಾರಿಬಂದು ಚುಚ್ಚಿಕೊಂಡಿತು.





ತರುವಾಯ ದೇವದತ್ತನು ನೀಲಗಿರಿ ಎಂಬ ಆನೆಯನ್ನು ಸಾಕುವ ಮಾವಟಿಗನೊಂದಿಗೆ ತಂತ್ರಮಾಡಿದನು. ಆ ಆನೆಗೆ ಮನುಷ್ಯರನ್ನು ತುಳಿದು ಕೊಲ್ಲುವ ದುರಭ್ಯಾಸವಿದ್ದಿತು. ಅವರು ನೀಲಗಿರಿಗೆ ಮಾದಕ ಪಾನೀಯವನ್ನು ಚೆನ್ನಾಗಿ ಕುಡಿಸಿದರು. ಬುದ್ಧನು ಬೀದಿಗೆ ಬರುವ ಮೊದಲು ಅವರು ಈ ಕೆಲಸ ಮಾಡಿಬಿಟ್ಟರು.

ಚೆನ್ನಾಗಿ ಮದವೇರಿದ ನೀಲಗಿರಿ ಆನೆಯನ್ನು ಅವರು ಬೀದಿಗೆ ಬಿಟ್ಟರು. ಅದನ್ನು ನೋಡಿ ಬೀದಿಯ ಜನರೆಲ್ಲಾ ಹೆದರಿ ಚೆಲ್ಲಾ ಚೆದರಾಗಿ ಓಡಿದರು. ಬುದ್ಧನು ಶಿಷ್ಯರು ಬುದ್ಧನನ್ನು ರಕ್ಷಿಸಲಿಕ್ಕಾಗಿ ಮುಂದಕ್ಕೆ ಹೋಗಲು ನೋಡಿದರು. ಆದರೆ ಬುದ್ಧನು ಅವರನ್ನು ಹಿಂದಕ್ಕೆ ಎಳೆದು ಮುಂದಕ್ಕೆ ನಡೆದನು.





ಆ ಗಲಾಟೆಯಲ್ಲಿ ಒಬ್ಬಳು ತಾಯಿಯ ಕಂಕುಳಲ್ಲಿದ್ದ ಮಗು ಕೆಳಗೆ ಜಾರಿ ಹೋಯಿತು. ಆನೆಯೂ ಆದರಬಳಿಗೆ ಬಂದುಬಿಟ್ಟಿತು. ಓಡುತ್ತಿದ್ದ ಜನರು ನೀಲಗಿರಿಯ ಕಾಲಕೆಳಗೆ ಮಗು ಜಜ್ಜಿ ಹೋಗುವುದೆಂದು ಕೂಗಿದರು.

ಬುದ್ಧನು ವೇಗವಾಗಿ ನಡೆದು ಮಗುವಿನ ಮುಂದೆ ನಿಂತನು. ಅದೇ ಕ್ಷಣದಲ್ಲಿ ಆನೆಯೂ ಅಲ್ಲಿಗೆ ಬಂದಿತು. ದುಷ್ಟ ಸ್ವಭಾವದ ಆ ಆನೆ ಬುದ್ಧನಿಗೂ ಮಗುವಿಗೂ ಕೂಡ ಕೇಡು ಮಾಡುವುದೆಂದು ಎಲ್ಲರೂ ಅಂದುಕೊಂಡಿರಲು, ವಿಚಿತ್ರವೆನಿಸುವಂತೆ ಆನೆ ಸುಮ್ಮನೆ ನಿಂತಿತು !





ಬುದ್ಧನು ಆನೆಯೊಂದಿಗೆ, "ನೀಲಗಿರೀ ! ಶಾಂತನಾಗು ! ಸೌಮ್ಯನಾಗು ! ಒಳೆಯವನಾಗು !" ಎಂದನು. ಆನೆ ಮೆಲ್ಲನೆ ಬುದ್ಧನ ಮುಂದೆ ಮೊಣಕಾಲೂರಿ ಆಶೀರ್ವಾದ ಬಯಸುವಂತೆ ತೋರಿತು. ಬುದ್ಧನು ಅದರ ಶರೀರವನ್ನು ಪೂಸಿದನು. ಇಂತಹ ಅನುಭವವನ್ನು ಅರಿಯದ ಪ್ರಜೆಗಳಿಗೆ, ಬುದ್ಧನು ಮಹಾಪುರುಷನೇ ನಿಜವೆಂದು ತಿಳಿಯಿತು.

# ಬುದ್ಧನ ನಿರ್ವಾಣ

ಸಾರಿ ಪುತ್ರ ಮತ್ತು ಮೌದ್ಗಲ್ಯಾಯನ ಎಂಬಿಬ್ಬರು ಬುದ್ಧನಿಗೆ ಸಮರ್ಥರಾದ ಶಿಷ್ಯರಾಗಿದ್ದರು. ಬುದ್ಧನು ಅವರಿಬ್ಬರನ್ನೂ ಬೌದ್ಧ ಧರ್ಮ ಪ್ರಚಾರಕ್ಕಾಗಿ ನಿಯಮಿಸಿದನು. ಅವರಿಬ್ಬರೂ ಬೇರೆ ಬೇರೆ ಪ್ರಾಂತಗಳಲ್ಲಿ ತಮ್ಮ ವಾಸವನ್ನು ಏರ್ಪಡಿಸಿಕೊಂಡರು.

ಕೆಲವು ವರ್ಷಗಳ ಮೇಲೆ ಸಾರಿ ಪುತ್ರನು ತನ್ನ ನಿರ್ವಾಣದ ವೇಳೆ ಬಂದಿತೆಂದು ತಿಳಿದು, ಬುದ್ಧನ ದರ್ಶನ ಪಡೆದನು. ಬುದ್ಧನ ಆಶೀರ್ವಾದ ಪಡೆದು ಅವನು ತನ್ನ ತಾಯಿಯ ಬಳಿಗೆ ಹೋಗಿ, ಅವಳು ಬುದ್ಧ ಮತವನ್ನು ಸ್ವೀಕರಿಸುವಂತೆ ಮಾಡಿ, ಒಂದು ದಿನ ಬೆಳಗ್ಗಿನ ಹೊತ್ತಿನಲ್ಲಿ ನಿರ್ವಾಣ ಹೊಂದಿದನು.





ಮೌದ್ಗಲ್ಯಾಯನನ ಬೋಧನೆಗಳು ಮತ ಮರಹಂಕಾರಿಗಳಾದ ಕೆಲವರನ್ನು ಕೋಪಕ್ಕೆ ಗುರಿ ಮಾಡಿದುವು. ಅವರು ಅವನನ್ನು ಕೊಲ್ಲಲು ಒಬ್ಬ ದುಷ್ಟನನ್ನು ನಿಯಮಿಸಿದರು. ಆದರೆ ಅವನು ಮೌದ್ಗಲ್ಯಾಯನನ ಕುಟೀರವನ್ನು ಪ್ರವೇಶಿಸುವಾಗ, ಮೌದ್ಗಲ್ಯಾಯನನು ಗಾಳಿಯಲ್ಲಿ ತೇಲುತ್ತಾ ಆಕಾಶವನ್ನೇರಿದನು.



ಈ ವಿಧವಾಗಿ ಮೌದ್ಗಲ್ಯಾಯನನು ತನ್ನನ್ನು ಕೊಲ್ಲಲು ಬಂದವರಿಗೆ ಸಿಕ್ಕದೆ ತನ್ನನ್ನು ತಾನೇ ಕಾಪಾಡಿಕೊಂಡನು. ಆಗ ಒಂದು ದಿನ ಹಂತಕನೊಬ್ಬನು ದೊಣ್ಣೆಯೊಂದನ್ನು ಎತ್ತಿಕೊಂಡು ಕುಟೀರದೊಳಗೆ ಪ್ರವೇಶಿಸುತ್ತಿರಲು, ಆಕಸ್ಮಾತ್ತಾಗಿ ಮೌದ್ಗಲ್ಯಾಯನನಿಗೆ ತನ್ನ ಪೂರ್ವಜನ್ಮಕ್ಕೆ ಸಂಬಂಧಿಸಿದ ಒಂದು ಘಟನೆ ನೆನಪಿಗೆ ಬಂದಿತು.

ಪೂರ್ವ ಜನ್ಮದಲ್ಲಿ ಅವನು ತನ್ನ ವೃದ್ಧ ಮಾತಾಪಿತರಿಂದ ಬಿಡುಗಡೆಹೊಂದಲು ಅವರನ್ನು ಕಾಡಿಗೆ ಕರೆದುಕೊಂಡು ಹೋದನು. ಅಲ್ಲಿ ಅವರು ಒಂದು ಮರದ ನೆರಳಿನಲ್ಲಿ ಕುಳಿತಿದ್ದಾಗ, ತಾನು ಉದ್ದುದ್ದವಾದ ಗಡ್ಡ ಮೀಸೆಗಳನ್ನು ಅಂಟಿಸಿಕೊಂಡು ಅವರನ್ನು ಕೊಲ್ಲಲು ನೋಡಿದನು. ಆಗ ಅವರು "ಅಪ್ಪಾ ಮಗನೇ ! ನಮ್ಮನ್ನು ಯಾರೋ ಕೊಲ್ಲಲು ಬಂದಿದ್ದಾರೆ. ನೀನು ಓಡಿ ಹೋಗಿ ಪ್ರಾಣ ಕಾಪಾಡಿಕೋಪ್ಪಾ !" ಎಂದು ಗಟ್ಟಿಯಾಗಿ ಕೂಗಿದರು. ತನ್ನ ರಕ್ಷಣೆಗಾಗಿ ತಂದೆ ತಾಯಿಗಳಿಗಿರುವ ಎಚ್ಚರಿಕೆಯನ್ನು ನೋಡಿ, ಅವನ ಹೃದಯವು ಪರಿವರ್ತನೆಗೊಂಡಿತು.





ಅವನು ಕೂಡಲೇ ದೂರ ಹೋಗಿ ಗಡ್ಡ ಮೀಸೆಗಳನ್ನು ತೆಗೆದು ಹಾಕಿ, ತಂದೆತಾಯಿಗಳನ್ನು ಮನೆಗೆ ಕರೆದುಕೊಂಡು ಬಂದನು. ಈ ಪೂರ್ವ ಜನ್ಮದ ಪಾಪ ಕಾರ್ಯವು ನೆನಪಿಗೆ ಬಂದ ಕೂಡಲೇ ಮೌದ್ಗಲ್ಯಾಯನನಿಗಿದ್ದ ಅದ್ಭುತಶಕ್ತಿ ನಶಿಸಿತು. ಹಂತಕನು ಅವನನ್ನು ದೊಣ್ಣೆಯಿಂದ ಹೊಡೆದು ಸತ್ತನೆಂದುಕೊಂಡು ಹೊರಟು ಹೋದನು. ಆದರೆ ಮೌದ್ಗಲ್ಯಾಯನನು ಕೊನೆಯುಸಿರಿನಿಂದ ಬುದ್ಧನ ಬಳಿಗೆ ಹೋಗಿ ಅವನ ಪಾದಗಳ ಮುಂದೆ ಪ್ರಾಣಬಿಟ್ಟನು.

ಈಗ ಎಂಬತ್ತು ವರ್ಷ ವಯಸ್ಸಾದ ಬುದ್ಧನು, ಒಂದು ದಿನ ವೈಶಾಲೀ ನಗರಕ್ಕೆ ಹೋದನು. ಅತ್ಯಂತ ಸುಂದರಿಯಾದ ರಾಜನರ್ತಕಿ ಅಂಬಾ ಪಾಲಿ ಅವನನ್ನು ನೋಡಲು ಬಂದಳು. ಅವಳು ಬುದ್ಧನಿಗೂ ಅವನ ಶಿಷ್ಯರಿಗೂ ಉದ್ಯಾನವನ ದಲ್ಲಿ ಬಿಡದಿಗಳನ್ನು ಏರ್ಪಡಿಸಿ, ಭೋಜನಕ್ಕೆ ತನ್ನ ಮನೆಗೆ ಬರಬೇಕೆಂದು ಆಹ್ವಾನಿಸಿದಳು. ಬುದ್ಧನು ಒಪ್ಪಿದನು.





ಈ ಸಂಗತಿ ನಡೆದ ಮರುಕ್ಷಣದಲ್ಲಿ ಕೆಲಮಂದಿ ಕುಲೀನರು ಬುದ್ಧನ ದರ್ಶನಕ್ಕೆ ಬಂದು ತಮ್ಮೊಂದಿಗೆ ಊಟ ಮಾಡಬೇಕೆಂದು ಕೇಳಿ ಕೊಂಡರು. ಅವನು ರಾಜನರ್ತಕಿಯ ಮನೆಯಲ್ಲಿ ಊಟಕ್ಕೆ ಒಪ್ಪಿಕೊಂಡುದರಲ್ಲಿ ತಪ್ಪು ಹಿಡಿದರು. ಬುದ್ಧನು ಅವರನ್ನು ಕುರಿತು, " ಗಂಗಾಕೃಷ್ಣಾ ನದಿಗಳು ಬೇರೆ ಬೇರೆಯಾದರೂ, ಒಮ್ಮೆ ಅವು ಸಮುದ್ರದಲ್ಲಿ ಕಲೆತಮೇಲೆ ತಮ್ಮ ಭಿನ್ನತೆ ಯನ್ನು ಕಳೆದುಕೊಳ್ಳುತ್ತವೆ. ನನ್ನ ಬೋಧನೆ ಯನ್ನು ಅಂಗೀಕರಿಸಿದ ನರ್ತಕಿಯಾದರೂ ಕುಲೀನರಾದರೂ ಸಹ ಒಂದೇ " ಎಂದನು.

ತರುವಾಯ ಒಂದಾನೊಂದು ದಿನ ಬುದ್ಧನು ತನ್ನ ಶಿಷ್ಯರನ್ನೆಲ್ಲಾ ಕರೆದು ತಾನು ಇನ್ನು ಮೂರು ತಿಂಗಳಲ್ಲಿ ನಿರ್ವಾಣ ಹೊಂದುವೆನೆಂದು ಹೇಳಿದನು. ಅದನ್ನು ಕೇಳಿ ದುಃಖಿಸುವ ಶಿಷ್ಯರಿಗೆ ಬುದ್ಧನು ಧೈರ್ಯ ಹೇಳಿ. " ಎಂಥವರಿಗಾದರೂ ಮರಣವು ತಪ್ಪದು. ಇನ್ನು ಮೇಲೆ ನನ್ನ ಬೋಧನೆಗಳೇ ನಿಮಗೆ ಮಾರ್ಗದರ್ಶಕಗಳು " ಎಂದನು.





ಬುದ್ಧನು ವೈಶಾಲಿಯಿಂದ ಹೊರಟು ಪಾವಾ ನಗರಕ್ಕೆ ಹೋದನು. ಅಲ್ಲಿ ಅವನ ಶಿಷ್ಯನಾದ ಚುಂಡನೆಂಬ ಕುಂಬಾರನು ಬುದ್ಧನಿಗೆ ಅತಿಥಿ ಮಿತ್ರನು. ಅವನು ಅತ್ಯಂತ ಭಕ್ತಿಯಿಂದ ಬುದ್ಧನಿಗೆ ಮಾಂಸದ ಅಡಿಗೆಯನ್ನು ಬಡಿಸಿದನು. ಮಾಂಸ ಭೋಜನವು ತನಗೆ ಕೇಡುಮಾಡುವುದೆಂದು ತಿಳಿದೂ, ಶಿಷ್ಯನ ಮೇಲಿನ ಪ್ರೇಮದಿಂದ, ಬುದ್ಧನು ಅದನ್ನು ನಿರಾಕರಿಸಲಾಗದೆ ಸ್ವೀಕರಿಸಿದನು.

ಊಟದ ಅನಂತರ ಬುದ್ಧನಿಗೆ ಆರೋಗ್ಯ ಕೆಟ್ಟಿತು. ತನ್ನ ನಿರ್ವಾಣ ಕಾಲ ಸಮೀಪಿಸಿತೆಂದು ಅವನು ಶಿಷ್ಯರಿಗೆ ಹೇಳಿದನು. ಬುದ್ಧನ ಕೊನೆಯ ದರ್ಶನಕ್ಕಾಗಿ ಜನರು ಗುಂಪು ಗುಂಪಾಗಿ ಕೂಡಿದರು. ಅಂತಹ ರೋಗ ಪರಿಸ್ಥಿತಿಯಲ್ಲಿಯೂ ಬುದ್ಧನು ಕೇಳಿದವರ ಪ್ರಶ್ನೆಗಳಿಗೂ, ಧರ್ಮ ಸಂದೇಹಗಳಿಗೂ ಉತ್ತರ ಕೊಡುತ್ತಾ, ಕಟ್ಟ ಕಡೆಗೆ ಪ್ರಶಾಂತವಾಗಿ ಕಣ್ಣು ಮುಚ್ಚಿದನು.





ಬುದ್ಧನ ಧರ್ಮ ಬೋಧನೆಗಳು ಹತ್ತು ದಿಕ್ಕುಗಳಲ್ಲಿಯೂ ವ್ಯಾಪಿಸಿದುವು. ಆತನ ಹೆಸರಿನ ಸ್ತೂಪಗಳೂ, ಭಿಕ್ಷು ವಿಹಾರಗಳೂ ಭಾರತ ದೇಶದಲ್ಲಿ ಕೂಡು ಸ್ಥಾಪಿಸಲ್ಪಟ್ಟುವು. ಆತನ ಧರ್ಮ ಬೋಧನೆಗಳ ಮೇಲೆ ಅಸಂಖ್ಯ ಕಾವ್ಯಗಳೂ ನಾಟಕಗಳೂ, ಸಮೀಕ್ಷಾ ಗ್ರಂಥಗಳೂ ಹೊರಬಿದ್ದುವು. ಬೌದ್ಧ ಮತವು ಪ್ರಪಂಚದ ಮುಖ್ಯ ಮತಗಳಲ್ಲಿ ಒಂದಾಗಿ ಸ್ಥಿರಪಟ್ಟಿತು.



# ನಿಜವಾದ ವಿಜಯ

ಭಾರತದೇಶ ಚರಿತ್ರೆಯಲ್ಲಿ ಅಶೋಕ ಅಥವಾ ಅಶೋಕವರ್ಧನನು ಅತ್ಯಂತ ಪ್ರಮುಖನೆನ್ನ ಬಹುದು. ಅವನು ಮೌರ್ಯ ಚಂದ್ರಗುಪ್ತನ ಮೊಮ್ಮಗ. ಅವನಿಂದಲೇ ಬೌದ್ಧ ಮತವು ವ್ಯಾಪ್ತಿಗೊಂಡಿತು.

ಬಿಂದುಸಾರನಿಗೆ ಅನೇಕಮಂದಿ ಹೆಂಡತಿಯರೂ ಅನೇಕಮಂದಿ ಕುಮಾರರೂ ಇದ್ದರು. ಯಾವನೋ ಮುನಿಯನ್ನು ಸಂದರ್ಶಿಸಲಿಕ್ಕಾಗಿ ರಾಜ ಕುಮಾರರೆಲ್ಲಾ ರಾಜಪ್ರಾಂಗಣದಲ್ಲಿ ಸಮಾವೇಶ ಗೊಂಡು, ತಮ್ಮ ತಮ್ಮ ಆಸನಗಳಲ್ಲಿ ಕುಳಿ ತಿದ್ದರು. ಹುಡುಗನಾದ ಅಶೋಕನು ಬಂದಾಗ ಅವನಿಗೆ ಆಸನವಿರಲಿಲ್ಲ.





ಅಶೋಕನು ನೆಲದ ಮೇಲೆ ಕುಳಿತನು. ಬಿಂದು ಸಾರನು ಮುನಿಯನ್ನು ಕರೆದುಕೊಂಡು ಅಲ್ಲಿಗೆ ಬಂದನು. ದೊರಗು ನೆಲದ ಮೇಲೆ ಏಕೆ ಕುಳಿತೆ ಯೆಂದು ಮುನಿ ಪ್ರಶ್ನಿಸಲು ಅಶೋಕನು, " ಭೂಮಾತೆಗಿಂತ ಉತ್ತಮ ಆಸನವಿಲ್ಲ. ಅದು ಎಂದಿಗೂ ಮೋಸಮಾಡದು " ಎಂದನು.



ಅಶೋಕನಲ್ಲಿ ಕೆಲವು ಅಪೂರ್ವ ಲಕ್ಷಣಗಳಿವೆ ಯೆಂದೂ, ಇತರರ ಮೇಲೆ ಅವನ ಪ್ರಭಾವವು ಪ್ರಕಾಶಿಸುವುದೆಂದೂ ಮುನಿ ಬಿಂದುಸಾರ ಮಹಾರಾಜನೊಂದಿಗೆ ಹೇಳಿದನು. ಅಶೋಕನು ದೊಡ್ಡವನಾದ ಮೇಲೆ, ಬಿಂದುಸಾರನು ಅವನನ್ನು ಮಾಲ್ವಾದೇಶದ ಪಾಲಕನಾಗಿ ಉಜ್ಜಯಿನಿಗೆ ಕಳುಹಿಸಿದನು.

ಕ್ರಿ. ಪೂ. ೨೭೩ ರಲ್ಲಿ ಬಿಂದುಸಾರನು ತೀರಿ ಹೋದನು. ಈ ವಾರ್ತೆ ತಿಳಿದ ಕೂಡಲೇ ಅಶೋಕನು ಪಾಟಲೀಪುತ್ರಕ್ಕೆ ಬಂದನು. ತನ್ನ ಅನಂತರ ಯಾರು ಪಾಲಿಸಬೇಕೆಂದು ರಾಜನು ಪ್ರಕಟಿಸಿರಲಿಲ್ಲ. ಪರಿಸ್ಥಿತಿ ಅನಿಶ್ಚಿತವಾಗಿತ್ತು.





ಆದರೆ ಅಶೋಕನು ರಾಜಧಾನಿಗೆ ಬಂದ ಕೂಡಲೇ ಅನಿಶ್ಚಿತ ಪರಿಸ್ಥಿತಿ ತೊಲಗಿ ಹೋಯಿತು. ಅವನು ತನ್ನ ಪರಿಪಾಲನಾ ದಕ್ಷತೆಯನ್ನು ಈ ಮೊದಲೇ ವ್ಯಕ್ತಪಡಿಸಿದ್ದನು. ಅಲ್ಲದೆ ಧೈರ್ಯವಂತನಾದ ಅವನನ್ನು ನಿರ್ದಯಿ ಎಂದೂ ಹೇಳಬಹುದು. ಅವನನ್ನು ಯಾರೂ ನಿರೋಧಿಸುವವರಿಲ್ಲದ್ದರಿಂದ ಅವನೇ ಸಿಂಹಾಸನವನ್ನು ಏರಿದನು.

ಅಶೋಕನು ಉನ್ನತವಾದ ಆಶಯುಗಳುಳ್ಳವನು. ಅವನನ್ನು ಚಂಡಾಶೋಕನೆನ್ನುವವರೂ ಇದ್ದಾರೆ. ಅವನು ಮಹಾಸಾಮ್ರಾಜ್ಯಕ್ಕೆ ಅಧಿಪತಿಯಾಗ ಬೇಕೆಂದುಕೊಂಡು ದೊಡ್ಡ ಸೇನೆಯನ್ನೂ, ಸಮರ್ಥರಾದ ಸೇನಾಪತಿಗಳನ್ನೂ ಶೇಖರಿಸಿ ಕೊಂಡನು.





ಮೊದಲು ಚಿಕ್ಕಚಿಕ್ಕ ರಾಜ್ಯಗಳನ್ನು ಒಳಪಡಿಸಿ ಕೊಂಡು ವಿಸ್ತಾರವಾದ ಕಳಿಂಗ ರಾಜ್ಯದ ಮೇಲೆ ದಂಡೆತ್ತಿದನು. ಅನೇಕ ದಿನಗಳವರೆಗೆ ಮಹಾ ದಾರುಣವಾದ ಯುದ್ಧವು ನಡೆಯಿತು. ಕಳಿಂಗ ಸೈನಿಕರೇನೂ ಸೋಲಲಿಲ್ಲ. ಆದುದರಿಂದ ಅಶೋಕನ ಸೈನಿಕರು ಅವರನ್ನು ತರಿತರಿದು ಕೆಡವಿ ಯುದ್ಧ ಮುಗಿಸಿದ್ದರು.

ಆ ಯುದ್ಧದಲ್ಲಿ ಒಂದು ಲಕ್ಷಮಂದಿ ಸಾಯುವು ದನ್ನು ಅಶೋಕನು ಒಂದು ಬೆಟ್ಟದ ಮೇಲೆ ನಿಂತು ನೋಡಿದನು. ಸತ್ತವರ ಎರಡು ಪಾಲು ಗಾಯಗೊಂಡು ನರಳುವವರು. ಒಂದೂವರೆ ಲಕ್ಷಮಂದಿ ಬಂದಿಗಳಾಗಿ ಸಿಕ್ಕಿದವರು. ವಿಜಯಿ ಯಾದ ಅಶೋಕನು ವಿಚಾರಕ್ಕೆ ಗುರಿಯಾದನು.





ತೀವ್ರವಾದ ಪಶ್ಚಾತ್ತಾಪದಿಂದ ಅಶೋಕನು ರಾಜಧಾನಿಗೆ ಹಿಂದಿರುಗಿದನು. ಒಬ್ಬ ಬೌದ್ಧ ಭಿಕ್ಷು ಅವನೊಂದಿಗೆ "ನಿಜವಾದ ವಿಜಯವು ಕತ್ತಿಯಿಂದ ಆಗುವುದಿಲ್ಲ; ಪ್ರೇಮದಿಂದಲೇ ಅದು ಸಾಧ್ಯ" ಎಂದನು. ಈ ಮಾತು ಕೇಳಿದ ಮೇಲೆ ಅಶೋಕನಿಗೆ ಶಾಂತಿ ಲಭಿಸಿತು.

ಅಶೋಕನು ತನ್ನ ಮಂತ್ರಿಗಳನ್ನೂ, ಸೇನಾಪತಿಗಳನ್ನೂ, ಸಾಮಂತರನ್ನೂ ಸಮಾವೇಶಗೊಳಿಸಿ, ತಾನು ಹಿಂಸೆಯನ್ನು ಶಾಶ್ವತವಾಗಿ ವಿಸರ್ಜಿಸುವೆನೆಂದು ಘೋಷಿಸಿದನು. ಅಂದಿನಿಂದ ಅಶೋಕನು ಶಾಂತಿದೂತನಾದನು. ವಿಜ್ಞಾನವನ್ನೂ, ಪ್ರೇಮವನ್ನೂ ಪ್ರಚಾರಮಾಡುವಂತೆ ಅವನು ಎಲ್ಲರಿಗೂ ಬೋಧಿಸುತ್ತಾ ಧರ್ಮಾಶೋಕನೆಂದು ಪ್ರಸಿದ್ಧಿಗೇರಿದನು.





ದೇಶದ ಮೊತ್ತದಲ್ಲಿರುವ ಸಾಮಾಜಿಕ ಸ್ವರೂಪವನ್ನೇ ಅಶೋಕನು ಬದಲಾಯಿಸಿದನು. ಶಿಲಾಶಾಸನಗಳ ಮೂಲಕ ಧರ್ಮ ಸೂತ್ರಗಳನ್ನು ಪ್ರಚಾರ ಮಾಡಿದನು. ಅವನ ಮಗಳೂ ಮಗನೂ ಬುದ್ಧನ ಸಂದೇಶಗಳನ್ನು ಶ್ರೀಲಂಕೆಗೆ ತೆಗೆದುಕೊಂಡು ಹೋದರು. ಧರ್ಮ ಪ್ರಚಾರಕರೂ, ಭಿಕ್ಷುಗಳೂ ಪ್ರಜೆಗಳನ್ನು ಧರ್ಮ ಮಾರ್ಗದಲ್ಲಿ ನಡೆಸ ತೊಡಗಿದರು.



# ಮಹಾಕವಿ ಕಾಳಿದಾಸ

ಇನ್ನೂ ಕುಮಾರ ಪ್ರಾಯದಲ್ಲಿದ್ದ ಯುವರಾಜನೊಬ್ಬನು ತಾಯಿಯಬಳಿಗೆ ಬಂದು, "ಅಮ್ಮಾ, ಈ ಕ್ಷಣವೇ ನನಗೊಂದು ಕತ್ತಿಯನ್ನು ಕೊಡು" ಎಂದನು. ಏಕೆಂದು ಕೇಳಿದಳು ತಾಯಿ. "ಯುದ್ಧ ಮಾಡಲಿಕ್ಕೆ", ಎಂದನು ಯುವರಾಜ. ತಾಯಿ ನಕ್ಕು "ಇನ್ನೂ ಸ್ವಲ್ಪ ದೊಡ್ಡವನಾಗು. ಕತ್ತಿ ಹಿಡಿಯುವ ವಯಸ್ಸು ಬರಲಿ" ಎಂದಳು.

ಆ ಯುವರಾಜನೇ ವಿಕ್ರಮಾದಿತ್ಯ. ಮಧ್ಯ ಏಷ್ಯಾದಿಂದ ದಾಳಿಬಂದು ಭಾರತದೇಶದಲ್ಲಿ ರಾಜ್ಯಗಳನ್ನು ಸ್ಥಾಪಿಸಿದ ಶಕರೆಂಬ ಭಯಂಕರ ಜಾತಿಯವರನ್ನು ಅವನು ಯುದ್ಧದಲ್ಲಿ ಮಣ್ಣು ಮುಕ್ಕಿಸಿ ಓಡಿಸಿದನು.





ಆಮೇಲೆ ವಿಕ್ರಮಾದಿತ್ಯನು ಅನೇಕ ಪರ ರಾಜ್ಯಗಳನ್ನು ಜಯಿಸಿ, ತನ್ನ ರಾಜಧಾನಿಯನ್ನು ಪಾಟಲೀಪುತ್ರದಿಂದ ಉಜ್ಜಯಿನಿಗೆ ಬದಲಾಯಿಸಿದನು. ಅವನ ಪಾಲನೆಯಲ್ಲಿ ಉಜ್ಜಯಿನಿ ದೊಡ್ಡ ದೊಡ್ಡ ಭವನಗಳಿಂದ ದೇವಾಲಯಗಳಿಂದ ವೈಭವವಾಗಿ ಶೋಭಿಸಿತು.



ವಿಕ್ರಮಾದಿತ್ಯನನ್ನು ಕುರಿತು ಅನೇಕ ಕಥೆಗಳಿವೆ. ಅದ್ಭುತ ದಂತ ಕಥೆಗಳು ಪ್ರಚಾರದಲ್ಲಿವೆ. ಅವುಗಳಲ್ಲಿ ಮುಖ್ಯವಾದುದು ಮಹಾಕವಿ ಕಾಳಿದಾಸನ ಉದಂತಗಳು. ವಿಕ್ರಮಾದಿತ್ಯನ ಕುಟುಂಬದವಳಲ್ಲದ, ಒಬ್ಬಾನೊಬ್ಬಳು ರಾಜಕುಮಾರಿ, ವಾದದಲ್ಲಿ ತನ್ನನ್ನು ಗೆದ್ದವನನ್ನೇ ಮದುವೆಯಾಗುವೆನೆಂದು ಹಟ ಹಿಡಿದಿದ್ದಳು. ಅನೇಕ ಮಂದಿ ಪಂಡಿತರು ಅವಳೊಂದಿಗೆ ವಾದಿಸಿ ಸೋತರು.

ಹೀಗೆ ಅವಮಾನಿತರಾದ ಪಂಡಿತರು ಆ ರಾಜಕುಮಾರಿಗೆ ಶತಮೂರ್ಖನೊಬ್ಬನು ಗಂಡನಾಗಬೇಕೆಂಬ ತಂತ್ರವನ್ನು ಮಾಡಿದರು. ಅವರಿಗೆ ಒಂದೆಡೆಯಲ್ಲಿ, ಮರದ ಕೊಂಬೆಯ ಮೇಲೆ ಕುಳಿತು ಕೆಳಗೆ ಕಡಿದು ಕೊಂಬೆಯೊಂದಿಗೆ ಬಿದ್ದ ಮೂರ್ಖನೊಬ್ಬನು ಸಿಕ್ಕಿದನು. ಅವನನ್ನು ಕರೆದುಕೊಂಡು ರಾಜಭವನಕ್ಕೆ ಹೋದರು.





ಆ ಪಂಡಿತರು ಚಮತ್ಕಾರವಾದ ಮಾತುಗಳಿಂದ ಆ ಮೂರ್ಖನು ದೊಡ್ಡ ಪಂಡಿತನೆಂದು ರಾಜಕುಮಾರಿಯನ್ನೂ, ಅವಳ ತಾಯಿತಂದೆಯರನ್ನೂ ನಂಬಿಸಿಬಿಟ್ಟರು. ರಾಜಕುಮಾರಿ ವಾದದಲ್ಲಿ ಸೋತದ್ದೂ ಆಗಿ, ಮದುವೆಯೂ ಆ ಮೂರ್ಖನೊಂದಿಗಾಯಿತು. ಆ ಮೇಲೆ ತನ್ನ ಗಂಡ ಮೂರ್ಖನೆಂದು ಗೊತ್ತಾಗಿ ರಾಜಕುಮಾರಿ ಅವನನ್ನು ರಾಜಭವನದಿಂದ ಹೊರಗೆ ಕಳುಹಿಸಿಬಿಟ್ಟಳು.

ಹೀಗೆ ಭಂಗಗೊಂಡ ಆ ಮೂರ್ಖನು, ಒಂದು ಕಾಳೀ ಆಲಯಕ್ಕೆ ಹೋಗಿ ಭಕ್ತಿ ಶ್ರದ್ಧೆಗಳಿಂದ ದೇವಿಯನ್ನು ಪ್ರಾರ್ಥಿಸಿದನು. ದೇವಿ ಪ್ರತ್ಯಕ್ಷಳಾಗಲಿಲ್ಲ. ಆವನು ಜೀವನದ ಮೇಲೆ ವಿರಕ್ತಿ ತಾಳಿ, ಪಕ್ಕದಲ್ಲಿದ್ದ ನದಿಗೆ ಧುಮುಕಿ ಸಾಯಲು ಸಿದ್ಧನಾದನು.





ಮರುಕ್ಷಣದಲ್ಲಿ ಸರಸ್ವತೀದೇವಿ ಅವನ ಮುಂದೆ ಪ್ರತ್ಯಕ್ಷಳಾಗಿ, "ನಿನಗೆ ಮುಂದಿನ ಏಳು ಜನ್ಮಗಳಲ್ಲಿಯೂ ಪಂಡಿತನಾಗುವ ಅದೃಷ್ಟವಿಲ್ಲ." ಎಂದಳು. ಅವನು ಮತ್ತೆ ನದಿಯಲ್ಲಿ ಹಾರಿ ಆತ್ಮಹತ್ಯೆ ಮಾಡಲು ನೋಡಿದನು.

ಆಗ ಕಾಳೀದೇವಿ ದಯಾರ್ದ್ರಳಾಗಿ ಸರಸ್ವತಿಗೆ ಪ್ರೇರೇಪಿಸಲು, "ನಿನ್ನ ಏಳು ಜನ್ಮಗಳನ್ನೂ ಕಾಳೀದೇವಿ ಉಪಸಂಹರಿಸಿಕೊಂಡಳು. ಅಂತೆಯೇ ನಿನಗೆ ನಾನು ಪಾಂಡಿತ್ಯ ಅನುಗ್ರಹಿಸಿದ್ದೇನೆ" ಎಂದು ಮಾಯವಾದಳು ಸರಸ್ವತಿ.





ಹೀಗೆ ಕಾಳೀದೇವಿಯ ಅನುಗ್ರಹದಿಂದ ಸರಸ್ವತಿಯ ಮೂಲಕ ಆ ಮೂರ್ಖನು ಪಂಡಿತನಾಗಿ ದೇವಿಯ ಸ್ತವನವನ್ನು ದಂಡಕವಾಗಿ ರಚಿಸಿದನು. ತನ್ನನ್ನು ಕಾಳಿದಾಸನೆಂದು ಕರೆಯಿಸಿಕೊಂಡನು. ಸೀದಾ ವಿಕ್ರಮಾದಿತ್ಯನ ಆಸ್ಥಾನಕ್ಕೆ ಹೋದನು.

ವಿಕ್ರಮಾದಿತ್ಯನ ಆಸ್ಥಾನದಲ್ಲಿ ನವರತ್ನಗಳೆಂದು ಕರೆಯಲ್ಪಡುವ ಪಂಡಿತ ವೃಂದದಲ್ಲಿ ಕಾಳಿದಾಸನು ಮೊದಲಿಗನೆನಿಸಿದ್ದಾನೆ. ಉಳಿದವರು ಧನ್ವಂತರಿ, ಕ್ಷಪಣಕ, ಅಮರಸಿಂಹ, ಶಂವಿ, ಬೇತಾಳಭಟ್ಟ, ಘಟಕರ್ಪಕ, ವರಾಹಮಿಶ್ರ, ವರರುಚಿ.





ಒಂದು ಸಾರಿ ವಿಕ್ರಮಾದಿತ್ಯನಿಗೆ ಯಾವ ಕಾರಣದಿಂದಲೋ ಕಾಳಿದಾಸನ ಮೇಲೆ ಕೋಪ ಬಂದು ಅವನನ್ನು ರಾಮಗಿರಿ ಪ್ರಾಂತಕ್ಕೆ ಬಹಿಷ್ಕರಿಸಿದನೆಂದು ಐತಿಹ್ಯವಿದೆ. ಇಲ್ಲಿಯೇ ಕಾಳಿದಾಸನು ಸುಪ್ರಸಿದ್ಧವಾದ 'ಮೇಘಸಂದೇಶ' ಕಾವ್ಯವನ್ನು ಬರೆದನು. ಆ ಮೇಲೆ ರಾಜನು ಅವನ ಸ್ನೇಹವನ್ನು ಮರೆಯಲಾಗದೆ ಕರೆಯಿಸಿಕೊಂಡು, ದೊಡ್ಡದಾಗಿ ಸನ್ಮಾನಿಸಿದನು.



# ಖಾರವೇಲ

ಕಳಿಂಗ ರಾಜ್ಯದ ಮುಖ್ಯ ನಗರದಲ್ಲಿ ಹಿಂದಿನ ಕಾಲದ ವೀರಜಿನನ ದೊಡ್ಡ ವಿಗ್ರಹವಿದ್ದಿತು. ಅದು ಪ್ರಜೆಗಳಿಗೆ ತುಂಬಾ ಪವಿತ್ರವಾದುದು. ನಂದವಂಶದವನಾದ ಮಗಧರಾಜನು ಕಳಿಂಗ ರಾಜ್ಯದ ಮೇಲೆ ದಾಳಿಮಾಡಿ ಮಹಾವೀರನ ವಿಗ್ರಹವನ್ನು ಸಾಗಿಸಿಕೊಂಡು ಹೋದನು.

ಆದಾಗಿ ಸ್ವಲ್ಪ ಕಾಲದಮೇಲೆ ಅಶೋಕನು ಕಳಿಂಗದ ಮೇಲೆ ದಂಡೆತ್ತಿದನು. ಕಳಿಂಗ ಪ್ರಜೆಗಳು ಅಶೋಕನ ಸೈನ್ಯವನ್ನು ಇದಿರಿಸಿ ಎಷ್ಟೋ ಮಂದಿ ವೀರಮರಣ ಹೊಂದಿದರು. ಆ ಯುದ್ಧದಲ್ಲಿ ನಡೆದ ರಕ್ತಪಾತವನ್ನು ನೋಡಿ ಅಶೋಕನಿಗೆ ಹೃದಯ ಪರಿವರ್ತನೆಯಾಯಿತು. ಆದರೆ ಕಳಿಂಗ ಪ್ರಜೆಗಳ ಜೀವಿತವು ಆ ಯುದ್ಧದಿಂದ ಛಿನ್ನಾಭಿನ್ನವಾಗಿ ಹೋಯಿತು.





ಮೌರ್ಯ ಸಾಮ್ರಾಜ್ಯದ ಐದನೇ ರಾಷ್ಟ್ರವಾಗಿ ಕಳಿಂಗವು ಇರಬೇಕಾಯಿತು. ಮುಂದೆ ಅಶೋಕನ ಮರಣದ ಅನಂತರ ಸ್ವತಂತ್ರವಾಗಿ ಚೇತರಿಸಿಕೊಂಡಿತು. ಹಾಗಿರುವಾಗ ಮಹಾ ಚಂಡಮಾರುತದಿಂದ ಕಳಿಂಗದ ಗ್ರಾಮಗಳೂ ಪಟ್ಟಣಗಳೂ ರಾಜಧಾನಿಯೂ ಸಹ ದೊಡ್ಡ ಅನಾಹುತಕ್ಕೊಳಗಾಯಿತು.



ರಾಜ್ಯವು ಇಂತಹ ಇಕ್ಕಟ್ಟಿನಲ್ಲಿರುವ ಸಮಯದಲ್ಲಿ ಖಾರವೇಲನೆಂಬ ಯುವಕನು ಕಳಿಂಗದ ಸಿಂಹಾಸನವೇರಿದನು. ಅವನು ತನ್ನ ಶಕ್ತಿ ಸಾಮರ್ಥ್ಯಗಳಿಂದ ದಿವಾರಾತ್ರಿ ಕಷ್ಟಪಟ್ಟು ಈಗಿನ ಭುವನೇಶ್ವರದ ಸಮೀಪದಲ್ಲಿ ಹೊಸ ರಾಜಧಾನಿಯನ್ನು ನಿರ್ಮಿಸಿದನು. ವ್ಯವಸಾಯ ವಾಣಿಜ್ಯಗಳಿಗೆ ಪ್ರೋತ್ಸಾಹ ಕೊಟ್ಟನು.

ಪ್ರಜೆಗಳಲ್ಲಿ ಆತ್ಮವಿಶ್ವಾಸ, ಸ್ವಾಭಿಮಾನಗಳು ಪುನರುದ್ಧಾರವಾಗುವಂತೆ ಖಾರವೇಲನು ಲಲಿತ ಕಲೆಗಳಿಗೂ ಪ್ರೋತ್ಸಾಹ ಕೊಟ್ಟನು. ಸಂಗೀತ ನಾಟ್ಯ ಮೊದಲಾದುವು ಪ್ರಜೆಗಳಿಗೆ ತುಂಬಾ ಸಂತೋಷವನ್ನುಂಟು ಮಾಡಿದುವು. ಎಷ್ಟೋ ವರ್ಷಗಳಿಂದ ಈತಿ ಬಾಧೆಗಳಿಗೀಡಾಗಿ ನೊಂದ ಪ್ರಜೆಗಳು, ಮತ್ತೆ ಸುಖಸಂತೋಷಗಳನ್ನು ಅನುಭವಿಸ ತೊಡಗಿದರು.





ಖಾರವೇಲನು ಇಷ್ಟರಿಂದ ತೃಪ್ತನಾಗಲಿಲ್ಲ. ಪ್ರಜೆಗಳಿಗೆ ಪೂರ್ತಿ ಸಂತೃಪ್ತಿಯುಂಟಾಗಬೇಕಾದರೆ ಇನ್ನೊಂದು ಘನಕಾರ್ಯ ಸಾಧಿಸಬೇಕೆಂದುಕೊಂಡನು. ಆದಕ್ಕಾಗಿ ಮೊದಲು ಬಲವಾದ ದೊಡ್ಡ ಸೈನ್ಯವನ್ನು ತಯಾರಿಸಲು ತೊಡಗಿದನು. ತನ್ನ ಸೈನಿಕ ಶಕ್ತಿಯ ಮೇಲೆ ಗಟ್ಟಿ ನಂಬುಗೆ ಬಂದ ಮೇಲೆ ಕಾರ್ಯ ರಂಗಕ್ಕೆ ಧುಮುಕಿದನು.

ಖಾರವೇಲನ ಗುರಿ ಮಗಧರಾಜ್ಯವಾಗಿತ್ತು. ಮಹಾವೀರಜಿನನ ವಿಗ್ರಹವನ್ನು ತನ್ನ ರಾಜಧಾನೀ ನಗರಕ್ಕೆ ತರುವುದರ ಮೂಲಕ ಹಿಂದೆ ನಡೆದ ಅವಮಾನವನ್ನು ತೊಳೆದು ಕೊಂಡರೇನೇ ಪೂರ್ಣ ತೃಪ್ತಿ. ಅಂತಲೇ ಕಳಿಂಗ ಸೈನ್ಯವು ಮಗಧದ ರಾಜಧಾನಿಯಾದ ರಾಜ ಗೃಹದ ಕಡೆಗೆ ದಾಳಿ ಹೊರಟಿತು.





ಅದೇ ಸಮಯದಲ್ಲಿ ಡಿಮಿಟ್ರಿಯಸ್ ಎಂಬ ಗ್ರೀಕು ರಾಜನು ತನ್ನ ಸೈನ್ಯದೊಂದಿಗೆ ಮಗಧದ ಮೇಲೆ ದಂಡೆತ್ತಿ ಬರುತ್ತಿದ್ದನು. ಹೀಗೆ ತನ್ನ ರಾಜಧಾನಿಯ ಮೇಲೆ ಎರಡು ಕಡೆಗಳಿಂದ ಶತ್ರುಗಳು ದಾಳಿ ಬರುವ ಸಂಗತಿ ತಿಳಿದು ಮಗಧ ರಾಜನು ಭಯಪಟ್ಟನು.

ಖಾರವೇಲನು ತನ್ನ ಸೈನ್ಯಗಳೊಡನೆ ಮಗಧ ರಾಜ್ಯದ ಎಲ್ಲೆಯಲ್ಲಿ ಬೀಡು ಬಿಟ್ಟಿದ್ದನು. ಆಗ ಡಿಮಿಟ್ರಿಯಸ್‌ನ ದೂತನೊಬ್ಬನು ಖಾರವೇಲನ ಬಳಿಗೆ ಬಂದು, ತಮ್ಮ ರಾಜನು ಅವನಿಗೆ ಜಯ ವನ್ನು ಬಯಸುವನೆಂದು ಹೇಳಿ, ರಾಜಗೃಹದ ಮೇಲೆ ತಾವಿಬ್ಬರೂ ಒಂದೇ ಸಾರಿ, ಒಂದೊಂದು ಕಡೆಯಿಂದ ದಾಳಿ ಮಾಡುವುದು ಒಳ್ಳೆಯದು ಎಂದು ಸೂಚಿಸಿದನು.





ಡ್ರಿಮಿಟಿಯಸ್‌ನ ವ್ಯೂಹವು ವಿಜಯಕ್ಕೆ ಸಮೀಪದ ದಾರಿಯೆಂದು ಖಾರವೇಲನಿಗೆ ತಿಳಿಯಿತು. ಆದರೆ ವಿದೇಶೀಯನಿಗೆ ಸ್ವದೇಶದಲ್ಲಿ ರಾಜ್ಯ ಭಾಗವನ್ನು ಜಯಿಸುವ ಅವಕಾಶ ಮಾಡಿ ಕೊಡುವುದು ಒಳ್ಳೆಯದಲ್ಲವೆಂಬ ನಿಶ್ಚಯಕ್ಕೇ ಬಂದನು. ಕೂಡಲೇ ಅವನು ಆ ಗ್ರೀಕರ ಮೇಲೆಯೇ ದಾಳಿ ಮಾಡಿ, ಅವರನ್ನು ಹೊಡೆದು ದೂರ ಓಡಿಸಿ ಬಿಟ್ಟನು.

ಅದೇ ವೇಗದಲ್ಲಿ ಖಾರವೇಲನು ಅನೇಕ ರಾಜ್ಯಗಳನ್ನು ಜಯಿಸಿ ಭಾರತದೇಶದ ಅನೇಕ ಪ್ರಾಂತಗಳಿಗೆ ಚಕ್ರವರ್ತಿಯಾದನು. ಅವನು ಮಗಧದ ಮೇಲೆ ದಂಡೆತ್ತಬೇಕೆಂದು ನೋಡುವಾಗ, ಮಗಧರಾಜನು, ಹಿಂದೆ ಕಳಿಂಗದಿಂದ ಎತ್ತಿಕೊಂಡು ಬಂದಿದ್ದ ಮಹಾವೀರಜಿನನ ವಿಗ್ರಹವನ್ನು ಸ್ನೇಹಪೂರ್ವಕವಾಗಿ ಖಾರವೇಲನಿಗೆ ಒಪ್ಪಿಸಿಕೊಟ್ಟನು. ಈ ವಿಧವಾಗಿ ಮಗಧ ಕಳಿಂಗ ಸೇನೆಗಳ ನಡುವೆ ಯುದ್ಧವು ನಿವಾರಿಸಲ್ಪಟ್ಟಿತು.





ಖಾರವೇಲನು ತನ್ನ ಪರಿಪಾಲನೆಯ ಕಾಲದಲ್ಲಿ ಜೈನಮತದ ಅಭಿವೃದ್ಧಿಗೆ ಎಷ್ಟೋ ಕೆಲಸ ಮಾಡಿದನು. ಜೈನ ಪಂಡಿತರ ಪರಿಷತ್ತನ್ನು ಏರ್ಪಡಿಸಿದನು. ಜೈನ ಸನ್ಯಾಸಿಗಳ ನಿವಾಸಕ್ಕಾಗಿ ಭುವನೇಶ್ವರದ ಸಮೀಪವಿರುವ ಉದಯಗಿರಿ, ಖಂಡಗಿರಿಗಳಲ್ಲಿ ಗುಹಾಲಯಗಳನ್ನು ನಿರ್ಮಿಸಿ ಕೊಡಿಸಿದನು.



# ಕನಿಷ್ಕನ ಕಥೆ

ಎರಡು ಸಾವಿರ ವರ್ಷಗಳ ಹಿಂದೆ ಭಾರತದೇಶದ ಪಶ್ಚಿಮೋತ್ತರ ಸರಿಹದ್ದು ಪ್ರಾಂತಗಳ ಮೇಲೆ ಸಂಚಾರ ಜಾತಿಯವರು ಆಗಾಗ ದಾಳಿ ಮಾಡಿ ಕೊಂಡಿದ್ದರು. ಈ ಜಾತಿಯವರು ಎಲ್ಲಿಯೂ ನೆಲೆಯಾಗಿ ನಿಲ್ಲುವ ಗುಣದವರಲ್ಲದುದರಿಂದ, ಆ ಪ್ರಾಂತಗಳನ್ನು ಪಾಲಿಸುವ ಯಾವ ರಾಜ ರಿಂದಲೂ ಅವರನ್ನು ನಿರೋಧಿಸಲು ಸಾಧ್ಯ ವಾಗಲಿಲ್ಲ.

ಕಾಲಕ್ರಮದಲ್ಲಿ ಆ ಸಂಚಾರಜಾತಿಯವರ ಗುಣವು ಬದಲಾಗಿ, ಅವರು ಒಂದು ಕಡೆಯಲ್ಲಿ ಸ್ಥಿರವಾಗಿ ನಿಂತು, ಬೇಸಾಯ ವರ್ತಕತನ ಮೊದಲಾದ ಕೆಲಸಗಳಿಗೆ ತೊಡಗಿದರು.





ಕೆಲವು ವರ್ಷಗಳಲ್ಲಿ ಅವರಲ್ಲಿ ಪ್ರಮುಖರು ಕೆಲವರು ಬಲಿಷ್ಠರಾದರು. ಅವರಲ್ಲಿ ಖಡ್‌ಪೈ ಸೀಜನೆಂಬುವನು ಪುರುಷಪೂರ್ ಎಂಬ ನಗರ ವನ್ನು ನಿರ್ಮಿಸಿದ್ದಲ್ಲದೆ. ಒಂದು ರಾಜ ವಂಶಕ್ಕೆ ಮೂಲ ಪುರುಷನಾದನು. ಆ ವಂಶದ ಮೂರನೆಯವನಾದ ಕನಿಷ್ಕನು ಪುರುಷಪೂರನ್ನು ಶತ್ರುದುರ್ಭೇದ್ಯವಾದ ನಗರ ವನ್ನಾಗಿ ಮಾಡಿ ಅನೇಕ ರಾಜ್ಯಗಳನ್ನು ಕೂಡಾ ಜಯಿಸಿದನು.



ಕ್ರಿ. ಶ. ೭೮ ನೇ ವರ್ಷದಲ್ಲಿ ಕನಿಷ್ಕನು ಒಂದು ನೂತನ ಪಂಚಾಂಗವನ್ನು ನಿರ್ಮಿಸಿದನು. ಅದನ್ನೇ ನಾವು ನಮ್ಮ ಶಕವರ್ಷ ವೆನ್ನುತ್ತೇವೆ. ಒಂದು ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಹಟದಲ್ಲಿ ಕನಿಷ್ಕನು ದೊಡ್ಡ ಸೈನ್ಯದೊಂದಿಗೆ ಚೈನೀಸ್‌ಟರ್ಕಿಸ್ಥಾನ್, ಯಾರ್ಖಂಡ್, ಕಾಷ್ಗರ್ ನಗರಗಳ ಮೇಲೆ ದಾಳಿ ಮಾಡಿ ನೆರೆಹೊರೆಗಳ ಅನೇಕ ರಾಜರನ್ನು ಜಯಿಸಿ ತನ್ನ ಸಾಮಂತರನ್ನಾಗಿ ಮಾಡಿಕೊಂಡನು.

ಅಷ್ಟಾದ ಮೇಲೆ ಕನಿಷ್ಕನು ಸಾಧುಗುಣದ ಪರಿಪಾಲಕನಾಗಿ ಬದಲಾವಣೆಗೊಂಡನು. ಅವನು ದೊಡ್ಡದೊಂದು ಪಂಡಿತಪರಿಷತ್ತನ್ನು ಕಾಶ್ಮೀರದ ಕುಂಡಲ ವಿಹಾರವೆಂಬಲ್ಲಿ ಸಮಾವೇಶಗೊಳಿಸಿದನು. ಆ ಸಮಾವೇಶದ ನಿರ್ಣಯಗಳನ್ನು ತಾಮ್ರರೇಕುಗಳ ಮೇಲೆ ಕೊರೆಯಿಸಿ ಮುಂದಿನವರ ತಿಳುವಳಿಕೆಗೆ ಬರುವಂತೆ ಭದ್ರಪಡಿಸಿ ಇಡಿಸಿದನು.





ಕನಿಷ್ಕನ ಆಸ್ಥಾನದಲ್ಲಿ ದೊಡ್ಡ ಪಂಡಿತರೂ ಕವಿಗಳೂ ಇದ್ದರು. ಕವಿ ಅಶ್ವಘೋಷನೂ, ತತ್ವಜ್ಞಾನಿಯಾದ ನಾಗಾರ್ಜುನನೂ, ವೈದ್ಯಾಚಾರ್ಯನಾದ ಚರಕನೂ ಅವನ ಆಸ್ಥಾನದವರೇ. ಅವನ ಕಾಲದಲ್ಲಿ ಲಲಿತಕಲೆಗಳು ತುಂಬಾ ಅಭಿವೃದ್ಧಿಗೇರಿದುವು. ಮುಖ್ಯವಾಗಿ ಪರಿಪಕ್ವವಾದುದು ಗಾಂಧಾರ ಶಿಲ್ಪಕಲೆ.

ಮಹಾಕವಿಯಾದ ಅಶ್ವಘೋಷನು ಏಕಾಂತವಾಗಿ ತನ್ನ ಮಾನಸಿಕೋದ್ವೇಗವನ್ನು ಸೂಸವ ಕವಿತ್ವವನ್ನು ಪಠಿಸುತ್ತಿರಲು ಅಶ್ವಗಳು ಕಣ್ಣೀರು ಗರೆದುವಂತೆ. ಆದುದರಿಂದಲೇ ಅವನಿಗೆ ಅಶ್ವಘೋಷನೆಂದು ಸಾರ್ಥಕನಾಮ ಬಂದಿದೆ. ಅವನು ಬುದ್ಧಚರಿತ್ರೆ ಎಂಬ ಗ್ರಂಥವನ್ನು ಬರೆದನು.





ಮಹಾತತ್ವಜ್ಞಾನಿಯಾದ ನಾಗಾರ್ಜುನನಿಗೆ ಆರ್ಯದೇವನೆಂಬ ಪ್ರತಿಭಾವಂತನಾದ ಶಿಷ್ಯನಿದ್ದನು. ಅವರಿಬ್ಬರೂ ಮೊದಲನೇಸಾರಿ ಕಲೆತುಕೊಂಡಾಗ, ನಾಗಾರ್ಜುನನ ಹಸ್ತದಲ್ಲಿ ಚಿಕ್ಕ ನೀರಿನ ಪಾತ್ರವಿದ್ದಿತು. ಆರ್ಯದೇವನು ತನ್ನ ಕೈಯಲ್ಲಿದ್ದ ಸೂಜಿಯನ್ನು ಅದರಲ್ಲಿ ಜಾರಿಸಿದನು. ಆ ವಿಧವಾಗಿ ಆರ್ಯದೇವನು ತಾನು ಜ್ಞಾನದ ಆಳವನ್ನು ನೋಡಲು ಇಚ್ಛಿಸುತ್ತೇನೆಂಬುದನ್ನು ಸೂಚಿಸಿದನು.

ಪುರಾಣಯುಗದಲ್ಲಿ ಆತ್ರೇಯನೆಂಬ ಋಷಿ, ತನ್ನ ಶಿಷ್ಯನಾದ ಅಗ್ನಿವೇಶನಿಗೆ ವ್ಯಾಧಿಗಳ ಕಾರಣಗಳನ್ನೂ, ಅವುಗಳ ನಿವಾರಣೆಯ ದಾರಿಗಳನ್ನೂ ಬೋಧಿಸಿದನು. ಆ ಗುರು ಶಿಷ್ಯರ ಸಂಭಾಷಣೆಯೇ "ಅಗ್ನಿವೇಶಸಂಹಿತೆ". ಆ ಗ್ರಂಥದ ಹೆಚ್ಚಿನ ಭಾಗವು ಕಾಲಗರ್ಭದಲ್ಲಿ ಕಲೆತು ಹೋಯಿತು.





ಕನಿಷ್ಕನ ಆಶ್ರಯದಲ್ಲಿ ಚರಕನು ವೈದ್ಯಶಾಸ್ತ್ರವನ್ನು ಕುರಿತು ಸಂಶೋಧನೆ ನಡೆಸಿದನು. ಆ ಸಂಶೋಧನೆಯ ಫಲಿತವೇ "ಚರಕಸಂಹಿತೆ". ಔಷಧಿಗಳ ಮೂಲತತ್ವಗಳನ್ನು ತಿಳಿದುಕೊಳ್ಳಲು ಅವನು ಹಿಮಾಲಯಗಳಲ್ಲಿ ಬಹಳ ಕಾಲ ವಾಸಮಾಡಿದ್ದನು.

ಕನಿಷ್ಕನ ಪರಿಪಾಲನೆಯ ಕಾಲದಲ್ಲಿ ಕುಷಾನರು ಉಳಿದ ಭಾರತಜಾತಿಯವರೊಂದಿಗೆ ಜಾತಿಸಮೈಕ್ಯತೆ ಹೊಂದಿದರು. ಈ ಕಾರಣದಿಂದಲೇ ಆಮೇಲೆ ಬಹಳ ಕಾಲದವರೆಗೆ ಪಶ್ಚಿಮೋತ್ತರ ದಿಕ್ಕಿನಿಂದ ಬೇರೆ ಯಾವ ಅನಾಗರಿಕ ಜಾತಿಯವರೂ ಭಾರತದೇಶದ ಮೇಲೆ ದಾಳಿ ಬರಲಾಗಲಿಲ್ಲ.





ಪುರುಷಪೂರ್‌ನಲ್ಲಿ ಕನಿಷ್ಕನು ಒಂದು ದೊಡ್ಡ ಸ್ತೂಪವನ್ನು ಕಟ್ಟಿಸಿ ಅದರಲ್ಲಿ ಬುದ್ಧನ ಅಸ್ಥಿಕೆಗಳನ್ನು ಭದ್ರಪಡಿಸಿದನು. ಆ ಕಾಲದ ಪರದೇಶಯಾತ್ರಿಕರು ಹೇಳಿದ ಸಾಕ್ಷ್ಯಾಧಾರಗಳಿಂದ ಆ ಸ್ತೂಪದ ಎತ್ತರ ಅರುವತ್ತು ಅಡಿಗಳು. ಈಗ ಆ ಪುರುಷಪೂರ್ ಪೆಶಾವರ್ ಎನಿಸಿ ಪಾಕಿಸ್ತಾನದಲ್ಲಿ ಮುಖ್ಯ ನಗರವಾಗಿದೆ.



# ಸಾಹಸ ಯಾತ್ರೆ

ಕೌಂಡಿನ್ಯನೆಂಬ ಬ್ರಾಹ್ಮಣ ಯುವಕನಿಗೆ ತಲೆಮಾರುಗಳಿಂದ ಬಂದ ವೃತ್ತಿ ಪೌರೋಹಿತ್ಯವಾಗಿತ್ತು. ಅವನಿಗೆ ಪೌರೋಹಿತ್ಯದ ಅಂಗವಾದ ಪುರಾಣ ಪಠನಾದಿಗಳ ಮೇಲೆ ಸ್ವಲ್ಪವೂ ಆಸಕ್ತಿ ಇರಲಿಲ್ಲ. ತಂದೆ ಅತ್ಯಂತ ಶ್ರದ್ಧೆಯಿಂದ ಪುರಾಣ ಶ್ಲೋಕಗಳನ್ನು ಪಠಿಸಿಕೊಂಡಿದ್ದರೆ, ಮಗನು ಮೆತ್ತಗೆ ಮನೆಯಿಂದ ಹೊರಟು ಹೋಗಿ ಬಿಡುವನು.

ಕೌಂಡಿನ್ಯನು ಸಮುದ್ರ ತೀರದಲ್ಲಿ ಕುಳಿತು, ಅಪಾರವಾದ ಆ ಸಮುದ್ರದಾಚೆಗೆ ಏನಿರಬಹುದೆಂದು ಆಶ್ಚರ್ಯಪಡುವನು. ಆ ಪ್ರಶ್ನೆಗೆ ಉತ್ತರ ಪಡೆಯಬೇಕಾದರೆ ಸಾಹಸವಾದ ವೀರೋಚಿತವಾದುದೇನಾದರೂ ಮಾಡಬೇಕೆಂದು ತಪಿಸಿಕೊಳ್ಳುವನು.





ಒಂದು ದಿನ ರಾತ್ರಿ ಅವನು ಗಾಢನಿದ್ರೆಯಲ್ಲಿರುವಾಗ ಸ್ವಪ್ನದಲ್ಲೊಂದು ಮಹಾರಣ್ಯವು ಕಂಡಿತು. ಅಲ್ಲೊಬ್ಬ ದಿವ್ಯ ಪುರುಷ, ಮಹಾ ಭಾರತದ ವೀರನಂಥವನು, ಬೆಟ್ಟದ ಗುಹೆಯಲ್ಲಿ ಒಂದು ಧನುಸ್ಸನ್ನಿಡುವುದನ್ನು ನೋಡಿದನು. ಆ ಕೂಡಲೇ ಕೌಂಡಿನ್ಯನಿಗೆ ಎಚ್ಚರವಾಯಿತು.



ಸೂರ್ಯೋದಯವಾದ. ಕೂಡಲೇ ಕೌಂಡಿನ್ಯನು ಅರಣ್ಯಕ್ಕೆ ಹೋಗಿ, ಸ್ವಪ್ನದಲ್ಲಿ ನೋಡಿದ ಬೆಟ್ಟದ ಗುಹೆಯನ್ನು ಗುರುತಿಸಿದನು. ನಿಃಶಬ್ದವಾಗಿ ಗುಹೆಯೊಳಗೆ ಪ್ರವೇಶಿಸಿದಾಗ, ಸ್ವಪ್ನದಲ್ಲಿ ಕಂಡಂತೆ ಅಲ್ಲಿರುವ ಧನುಸ್ಸನ್ನು ನೋಡಿ, ಆಶ್ಚರ್ಯಪಡುತ್ತ ಉತ್ಸಾಹಿತನಾದನು.

ಆ ಧನುಸ್ಸನ್ನು ಎತ್ತಿಕೊಂಡು ಬಂದು ಸ್ನೇಹಿತರ ಇದಿರಿನಲ್ಲಿ ತನ್ನ ಬಿಲ್ಲು ವಿದ್ಯೆಯ ಕೌಶಲವನ್ನು ಪ್ರದರ್ಶಿಸಿ, ಎಲ್ಲರನ್ನೂ ಆಶ್ಚರ್ಯ ಚಕಿತರನ್ನಾಗಿ ಮಾಡಿದನು. ಮಹಿಮೆಯುಳ್ಳ ಆ ಧನುಸ್ಸು ತನ್ನ ಕೈಯಲ್ಲಿರುವಾಗ, ತಾನು ಸಾಧಿಸಲಾಗದ ಕಾರ್ಯವಿರಲಾರದೆಂದು ಗಟ್ಟಿ ನಂಬುಗೆ ಅವನಿಗಾಯಿತು.





ಕೌಂಡಿನ್ಯನು ತನ್ನ ಮಿತ್ರರು ಕೆಲವರನ್ನು ಕರೆದುಕೊಂಡು, ಸಮುದ್ರ ತೀರದಲ್ಲಿ ಉಪಯೋಗವಿಲ್ಲದಂತೆ ಬಿದ್ದಿದ್ದ ಒಂದು ನಾವೆಯನ್ನು ಸರಿಗೊಳಿಸಿ, ಮಿತ್ರರೊಂದಿಗೆ ಅದರಲ್ಲಿ ಕುಳಿತು ಸಮುದ್ರದಲ್ಲಿ ಹೊರಟನು. ಎಲ್ಲಿಗೆಂಬ ಆಲೋಚನೆ ಯಾವುದೂ ಅವನಿಗಿರಲಿಲ್ಲ. ದಿನಗಳು ಗತಿಸುತ್ತಿದ್ದುವು.

ಕೆಲವು ದಿನಗಳ ಮೇಲೆ ಅವರಿಗೆ ತೆಂಗಿನ ಮರಗಳಿಂದ ತುಂಬಿದ ಒಂದು ಸಮುದ್ರ ತೀರವೂ, ಆ ಕಡೆಗೇ ಪ್ರಯಾಣಿಸುವ ಅಲಂಕೃತವಾದೊಂದು ನಾವೆಯೂ ಕಾಣಿಸಿದುವು. ಕೌಂಡಿನ್ಯನು ಬಿಲ್ಲಿಗೆ ಬಾಣ ಹೂಡಿ, ಆ ನಾವೆಯ ಮೇಲೆ ಹಾರುತ್ತಿದ್ದ ಜಾಂಡಾದ ಕಡೆಗೆ ಬಾಣ ಬಿಟ್ಟನು. ಜಾಂಡಾ ತುಂಡಾಗಿ ಕೆಳಗೆಬಿತ್ತು.





ಮರುಕ್ಷಣವೇ ನಾವೆಯಲ್ಲಿ ಗಲಿಬಿಲಿಯುಂಟಾಯಿತು. ಅನೇಕಮಂದಿ ಯುವತಿಯರು ನಾವೆಯಲ್ಲಿ ಎದ್ದು ನಿಂತರು. ಅವರಲ್ಲಿ ರಾಜಕುಮಾರಿಯಂತೆ ವಿಶೇಷ ಅಲಂಕಾರಗಳಿಂದ ಅತ್ಯಂದ ಸುಂದರಿಯಾದ ಯುವತಿಯೊಬ್ಬಳು ಕೌಂಡಿನ್ಯನ ಕಡೆಗೆ ಕೈಯಾಡಿಸುತ್ತಾ, ತನ್ನ ನಾವೆಯನ್ನು ಅನುಸರಿಸಿ ಬರುವಂತೆ ಸಂಜ್ಞೆ ತೋರಿಸಿದಳು.

ಕಾಂಬೋಜ ರಾಜ್ಯದ ತೀರ ಪ್ರಾಂತವದು. ತಂದೆಯ ಮರಣಾನಂತರ ಆ ರಾಜ್ಯಕ್ಕೆ ಆ ರಾಜಕುಮಾರಿಯೇ ಪರಿಪಾಲಕಳಾಗಿದ್ದಳು. ಕೌಂಡಿನ್ಯನನ್ನು ನೋಡಿದ ಕೂಡಲೇ ಅವನೇ ತನಗೆ ತಕ್ಕಗಂಡನೆಂದು ಅವಳು ನಿಶ್ಚಯಿಸಿಕೊಂಡಳು. ಕೌಂಡಿನ್ಯನು ಅವಳನ್ನು ವಿವಾಹವಾಗಿ ಕಾಂಬೋಜ ರಾಜ್ಯಕ್ಕೆ ರಾಜನಾದನು.





ಆ ಕಾಲದ ಕಾಂಬೋಜವು ತರುವಾಯ ಕಂಬೋಡಿಯಾ ಎಂದು ಬದಲಾಗಿ ಈಗ ಕಂಪೂಚಿಯಾ ಎನಿಸಿ ವ್ಯವಹರಿಸಲ್ಪಡುತ್ತಿದೆ. ಕೌಂಡಿನ್ಯನು ರಾಜನಾದಂದಿನಿಂದ ಆ ದೇಶದಲ್ಲಿ ಭಾರತೀಯ ಸಂಸ್ಕೃತಿ ಬೇರೂರಿಕೊಂಡಿತು. ಭಾರತ ಕಾಂಬೋಜ ದೇಶಗಳ ನಡುವೆ ವಾಣಿಜ್ಯವು ವಿಸ್ತಾರವಾಗಿ ನಡೆಯ ತೊಡಗಿತು.

ಕಾಂಬೋಜದಲ್ಲಿ ಲಭ್ಯವಾದ ಒಂದು ಶಾಸನದ ಮೂಲಕವಾಗಿ, ಕೌಂಡಿನ್ಯ ವಂಶೀಯರಾದ ರಾಜರಿಗೆ ವರ್ಮ ಎಂಬ ನಾಮವು ಬಿರುದಾಂಕಿತವಾಗಿತ್ತೆಂದು ತಿಳಿಯುತ್ತದೆ. ಅವರ ಪರಿಪಾಲನೆಯ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಿಸಲ್ಪಟ್ಟವು.





ಅಂತಹ ದೇವಾಲಯಗಳಲ್ಲಿ ಅಂಗ್‌ಕಾರನಾಥ್ ಎಂಬುದು ಪ್ರಸಿದ್ಧವಾದುದು. ಅದು ಪೂರ್ವದಲ್ಲಿ ಯಶೋದರಾ ಪುರವೆನಿಸಿದ್ದು, ಈಗ ಅಂಗ್‌ಕಾರ್‌ಥೋಮ್ ಎನಿಸುವ ನಗರದಲ್ಲಿ ನಿರ್ಮಿಸಲ್ಪಟ್ಟಿದೆ. ಆ ದೇವಾಲಯದ ಶಿಲ್ಪ ಕಲೆಗಳಿಗೆ ಮತ್ತೆಲ್ಲಿಯೂ ಸಾಟಿ ಇಲ್ಲೆಂಬುದು ನಿಜಕ್ಕೂ ಅತಿಶಯೋಕ್ತಿಯಲ್ಲ.



# ಹರ್ಷವರ್ಧನ

ಸಾವಿರದನಾನ್ನೂರು ವರ್ಷಗಳ ಹಿಂದೆ ಪ್ರಭಾಕರವರ್ಧನನೆಂಬ ರಾಜನು ಚಿಕ್ಕದಾದರೂ, ಸುಸಂಪನ್ನವಾದ ಸ್ಥಾನೇಶ್ವರ ರಾಜ್ಯವನ್ನು ಪಾಲಿಸಿಕೊಂಡಿದ್ದನು. ಅವನಿಗೆ ರಾಜ್ಯವರ್ಧನ, ಹರ್ಷವರ್ಧನ ಎಂಬ ಇಬ್ಬರು ಕುಮಾರರೂ, ರಾಜಶ್ರೀ ಎಂಬ ಮಗಳೂ ಇದ್ದರು. ಕನ್ಯಾಕುಬ್ಜದ ರಾಜನಾದ ಗ್ರಹವರ್ಮನೊಂದಿಗೆ ರಾಜಶ್ರೀಯ ವಿವಾಹ ನಡೆಯಿತು.

ಗ್ರಹವರ್ಮನು ತನ್ನ ನವವಧುವಿನೊಂದಿಗೆ ಕನ್ಯಾಕುಬ್ಜಕ್ಕೆ ಹಿಂದಿರುಗಿ ಬಂದ ಕೆಲವೇ ದಿನಗಳಲ್ಲಿ ಮಾಳ್ವಾದ ರಾಜನು ಕನ್ಯಾಕುಬ್ಜವನ್ನು ಮುತ್ತಿದನು. ಆಗ ನಡೆದ ಯುದ್ಧದಲ್ಲಿ ಗ್ರಹವರ್ಮನು ವೀರಮರಣ ಪಡೆದನು.





ವಿಜಯಿಯಾದ ಮಾಳ್ವದರಾಜ, ರಾಜಶ್ರೀಯನ್ನು ಬಂದಿನಿಯನ್ನಾಗಿ ಹಿಡಿದು ತನ್ನ ನಗರಕ್ಕೆ ತೆಗೆದುಕೊಂಡು ಹೋದನು. ಈ ದುಃಖ ವಾರ್ತೆಯನ್ನು ಕೇಳಿ ಪ್ರಭಾಕರವರ್ಧನ ರಾಜನೂ, ಕುಮಾರರೂ ಅತ್ಯಂತ ವಿಷಾದವನ್ನನುಭವಿಸಿದರು.

ಹಿರಿಯನೂ ಸ್ಥಾನೇಶ್ವರದ ಯುವರಾಜನೂ ಆದ ರಾಜ್ಯ ವರ್ಧನನು ಸೈನ್ಯದೊಂದಿಗೆ ಮಾಲ್ವಾ ರಾಜ್ಯದ ಮೇಲೆ ದಾಳಿಮಾಡಿ, ಯುದ್ಧದಲ್ಲಿ ಶತ್ರು ರಾಜನನ್ನು ಸೋಲಿಸಿದನು. ರಾಜಶ್ರೀಯನ್ನು ಬಂಧನದಿಂದ ಬಿಡಿಸಿದನು. ಅಣ್ಣ ತಂಗಿಯರು ಒಬ್ಬರನ್ನೊಬ್ಬರು ನೋಡಿ ಕಣ್ಣೀರು ಸುರಿಸಿಕೊಂಡರು. ರಾಜ್ಯವರ್ಧನನು ತಂಗಿಯನ್ನು ಕರೆದುಕೊಂಡು ಸ್ಥಾನೇಶ್ವರಕ್ಕೆ ಹಿಂದಿರುಗಿದನು.





ಗೋಂಡವನ ಪ್ರಾಂತವನ್ನು ಪಾಲಿಸುವ ಶಶಾಂಕ ರಾಜನಿಗೆ ಕನ್ಯಾಕುಬ್ಜವನ್ನು ಮಾತ್ರವಲ್ಲದೆ ಮಾಲ್ವಾ ರಾಜ್ಯವನ್ನು ಕೂಡಾ ಜಯಿಸಬೇಕೆಂಬ ಆಶೆಯಿತ್ತು. ಅವನು ಕಳ್ಳತನವಾಗಿ ಸೈನ್ಯದೊಂದಿಗೆ ಬಂದು, ದಾರಿಯಲ್ಲೇ ರಾಜ್ಯವರ್ಧನನ ಗುಂಪಿನಮೇಲೆ ಬಿದ್ದನು. ಆ ಯುದ್ಧದಲ್ಲಿ ರಾಜ್ಯವರ್ಧನನು ಸತ್ತುಬೀಳಲು, ರಾಜಶ್ರೀ ತಪ್ಪಿಸಿಕೊಂಡು ಓಡಿಹೋದಳು.

ಈ ದುಸ್ಸಂಘಟನೆಗಳ ನಡುವೆ ರಾಜನಾದ ಪ್ರಭಾಕರ ವರ್ಧನನು ತೀರಿಹೋದನು. ಮಂತ್ರಿಗಳೂ ಸಾಮಂತರೂ ದುಃಖದಿಂದ ವೈರಾಗ್ಯ ತಾಳಿದ ಹರ್ಷವರ್ಧನನಿಗೆ ಒತ್ತಾಯಪಡಿಸಿ ರಾಜ್ಯಾಭಿಷೇಕ ಮಾಡಿದರು. ಹದಿನಾರನೆಯ ವಯಸ್ಸಿನಲ್ಲಿ ಹರ್ಷವರ್ಧನನು ಸ್ಥಾನೇಶ್ವರದ ರಾಜನಾದನು.







ಹರ್ಷವರ್ಧನನು ರಾಜನಾದ ಕೂಡಲೇ ತನ್ನ ಸಹೋದರಿ ರಾಜಶ್ರೀಯ ಅನ್ವೇಷಣೆಗೆ ಪ್ರಾರಂಭಿಸಿದನು. ಅವನು ಒಂದಾನೊಂದು ಅರಣ್ಯದಲ್ಲಿ ಪ್ರವೇಶಿಸಿ, ಅಲ್ಲಿ ಕ್ರೂರ ಮೃಗಗಳೆಲ್ಲಾ ಸಾಧುಭಾವದೊಂದಿಗಿರುವ ಅತಿಶಯವನ್ನು ನೋಡಿ ಅತ್ಯಾಶ್ಚರ್ಯಪಟ್ಟನು.

ಅಲ್ಲೆಲ್ಲೋ ಇರುವ ಯಾವ ಮಹಾ ಪುರುಷನೋ ಇದಕ್ಕೆ ಕಾರಣವಿರಬೇಕೆಂದು ಅವನಿಗೆ ಅನುಮಾನವಾಯಿತು. ಅವನು ಮತ್ತಿಷ್ಟು ಮುಂದೆ ಹೋಗಲು, ಕೆಲಮಂದಿ ಸನ್ಯಾಸಿಗಳು ಬಂದು, ಹರ್ಷವರ್ಧನನನ್ನು ತಮ್ಮ ಗುರುವಿನ ಬಳಿಗೆ ಕರೆದೊಯ್ದರು. ಆ ಸಮಯದಲ್ಲಿ ಒಬ್ಬ ಸನ್ಯಾಸಿ ಅಲ್ಲಿಗೆ ಬಂದು, ಅರಣ್ಯದ ಇನ್ನೊಂದು ಕಡೆಯಲ್ಲಿ ಒಬ್ಬಳು ಸ್ತ್ರೀ ಅಗ್ನಿಪ್ರವೇಶಕ್ಕೆ ತಯಾರಾಗುವ ಸಮಾಚಾರ ಹೇಳಿದನು.





ಹರ್ಷವರ್ಧನನೂ ಗುರುವೂ ಬೇಗಬೇಗನೇ ಆ ಸ್ಥಳಕ್ಕೆ ಓಡಿದರು ಆ ಸ್ತ್ರೀ ಬೇರೆ ಯಾರೂ ಅಲ್ಲ, ಹರ್ಷವರ್ಧನನ ಸೋದರಿ ರಾಜಶ್ರೀಯೇ! ಅವಳು ಆತ್ಮತ್ಯಾಗ ಮಾಡಲು ಒಣಕಟ್ಟಿಗೆಗಳನ್ನು ಸೇರಿಸಿ ಬೆಂಕಿಹಚ್ಚಿದ್ದಳು. ಬೆಂಕಿ ಜೋರಾಗುವಾಗ ಹಾರಲು ಸಿದ್ಧಳಾಗಿದ್ದಳು. ಅಷ್ಟರಲ್ಲಿ ಗುರುವೂ ಹರ್ಷವರ್ಧನನೂ ಅವಳನ್ನು ಅಗ್ನಿಪ್ರವೇಶದಿಂದ ತಡೆದುಬಿಟ್ಟರು.

ಹರ್ಷವರ್ಧನನು ತನ್ನ ಸಹೋದರಿಯನ್ನು ಸ್ಥಾನೇಶ್ವರಕ್ಕೆ ಕರೆದುಕೊಂಡು ಬಂದು, ತನಗೆ ಸಂರಕ್ಷಳಾಗಿರಬೇಕೆಂದು ಕೇಳಿಕೊಂಡು ಅವಳ ಒಪ್ಪಿಗೆ ಪಡೆದನು. ಮುಂದೆ ಒಂದು ದಿನ ರಾಜ್ಯ ಪಾಲನೆಯ ಬಾಧ್ಯತೆಗಳನ್ನು ತಕ್ಕವರಿಗೆ ಬಿಟ್ಟುಕೊಟ್ಟು, ಇಬ್ಬರೂ ವನವಾಸದಲ್ಲಿ ಧ್ಯಾನ ಮಾಡುತ್ತ ಕಾಲಕಳೆಯುವುದೆಂದು ನಿರ್ಧರಿಸಿಕೊಂಡರು.





ಆಮೇಲೆ ಕೆಲವು ದಿನಗಳಲ್ಲಿ ಹರ್ಷವರ್ಧನನು ತನ್ನ ಅಣ್ಣನನ್ನು ಕೊಂದ ರಾಜ ಶಶಾಂಕನನ್ನು ಯುದ್ಧದಲ್ಲಿ ಸೋಲಿಸಿದನು. ಅದು ಮಾತ್ರವಲ್ಲದೆ ಮತ್ತೆಷ್ಟೋ ರಾಜರನ್ನು ಜಯಿಸಿ, ಒಂದು ಸಾಮ್ರಾಜ್ಯಕ್ಕೇ ಚಕ್ರವರ್ತಿಯಾದನು. ರಾಜ್ಯದೊಳಗಿನ ಎಲ್ಲಾ ಮತಗಳ ಮೇಲೆಯೂ ಸರಿಸಮಾನವಾದ ಆದರವನ್ನು ತೋರಿಸಿದನು ಹರ್ಷವರ್ಧನ.

ಅವನು ತನ್ನ ಸಂಪತ್ತನ್ನು ಆಗಾಗ ಪಂಡಿತರಿಗೂ ಬಡವರಿಗೂ ಹಂಚುತ್ತಿದ್ದನು. ಅಂತಹ ಸಂದರ್ಭದಲ್ಲಿ ಒಂದು ಸಾರಿ ತನಗಿರುವುದನ್ನೆಲ್ಲಾ ಪ್ರಜೆಗಳಿಗೆ ದಾನಮಾಡಿ, ತನ್ನ ಸಹೋದರಿಯಾದ ರಾಜಶ್ರೀಯಿಂದ, ತಾನು ಉಟ್ಟುಕೊಳ್ಳುವ ಬಟ್ಟೆಗಳನ್ನು ಭಿಕ್ಷೆಯಾಗಿ ಸ್ವೀಕರಿಸಿದನು.






# ಎರಡು ನಗರಗಳ ನಾಶ

ಪ್ರಸೇನಜಿತ್ತು ಆಳಿಕೊಂಡಿದ್ದಾಗ ಕೋಸಲವು ಬಲವಾದ ರಾಜ್ಯವಾಗಿತ್ತು. ಅದರ ರಾಜಧಾನಿ ಶ್ರಾವಸ್ತಿ. ಕಪಿಲವಸ್ತುವಿನ ರಾಜರಾದ ಶಾಕ್ಯರಿಗೆ, ತಾವು ಪ್ರಸೇನಜಿತ್ತುವಿಗಿಂತ ದೊಡ್ಡ ವಂಶದವರೆಂಬ ಹೆಮ್ಮೆಯಿರುವ ಸಂಗತಿ, ಚಾರನಮೂಲಕ ಪ್ರಸೇನಜಿತ್ತುವಿಗೆ ಗೊತ್ತಾಯಿತು.

ತನ್ನ ಸಾಮಂತರಾದ ಶಾಕ್ಯರಿಗೆ ತನ್ನ ವಂಶದ ಮೇಲೆ ಅಲ್ಪ ಭಾವನೆಯಿರುವುದನ್ನು ಪ್ರಸೇನಜಿತ್ತುವಿನಿಂದ ಸಹಿಸಲಾಗಲಿಲ್ಲ. . ಅವನು ತಿರುಗಾಡುವ ನೆವನದಲ್ಲಿ ಕಪಿಲವಸ್ತುವಿಗೆ ಹೋದನು. ಶಾಕ್ಯರು ಅವನಿಗೆ ಭಾರೀ ಸ್ವಾಗತ ವಿತ್ತರು. ಪ್ರಸೇನಜಿತ್ತು ತಾನು ಒಬ್ಬಳು ಶಾಕ್ಯ ರಾಜಕುಮಾರಿಯನ್ನು ಮದುವೆಯಾಗ ಬೇಕೆಂದಿರುವುದಾಗಿ ಹೇಳಿದನು. ಈ ಮದುವೆ ಯಿಂದ ತನ್ನ ಅಂತಸ್ತು ಹೆಚ್ಚುವುದೆಂದುಕೊಂಡನು.







ಆದರೆ ಶಾಕ್ಯರು ಇಕ್ಕಟ್ಟಿಗೆಬಿದ್ದರು. ಬಲಿಷ್ಠನಾದ ಪ್ರಸೇನಜಿತ್ತುವಿನ ಆಶೆಯನ್ನು ತಿರಸ್ಕರಿಸಿದರೆ ಅಪಾಯವಾಗುವುದೆಂದು ತಿಳಿದು, ತಮ್ಮೊಳಗೆ ಗುಟ್ಟು ಮಾತಾಡಿಕೊಂಡು, ಒಬ್ಬಳು ಕನ್ಯೆ ಯೊಂದಿಗೆ ಪ್ರಸೇನಜಿತ್ತುವಿಗೆ ವಿವಾಹ ನಡೆಸಿದರು.

ಪ್ರಸೇನಜಿತ್ತು ಸಂತೋಷದಿಂದ ಶ್ರಾವಸ್ತಿಗೆ ಹಿಂದಿರುಗಿದನು. ಆ ರಾತ್ರಿ ಅವನು ಮದುವೆಯ ಬಹುಮಾನ ವಸ್ತುಗಳನ್ನು ಪರಿಶೀಲಿಸುವಾಗ ಒಂದು ಪತ್ರವನ್ನು ನೋಡಿದನು. ಮದುಮಗಳ ಮೇಲೆ ಕೋಪವಿದ್ದ ಶಾಕ್ಯಬಾಲಿಕೆಯೊಬ್ಬಳು ಆ ಪತ್ರ ಬರೆದಿದ್ದಳು. ಒಬ್ಬ ಶಾಕ್ಯನಾಯಕನ ದಾಸಿಯ ಪುತ್ರಿಯನ್ನು ಪ್ರಸೇನಜಿತ್ತು ವಿವಾಹ ವಾಗಿದ್ದನೆಂದು ಆ ಪತ್ರದಿಂದ ಗೊತ್ತಾಯಿತು.





ಪ್ರಸೇನಜಿತ್ತು ಕೋಪಾವೇಶದಿಂದ ಭವನದ ಮೇಲಂತಸ್ತಿಗೆ ಹೋಗಿ, ಸೈನಿಕರನ್ನು ಕೂಡಿಸು ವಂತಹ ದೊಡ್ಡ ಗಂಟೆಯನ್ನು ಮೊಳಗಿಸಿದನು ಆ ಕೂಡಲೇ ಸಾವಿರಾರು ಸೈನಿಕರು ಪ್ರಾಂಗಣ ದಲ್ಲಿ ಕೂಡಿ ರಾಜಾಜ್ಞೆಯನ್ನು ಕಾದು ನಿಂತರು.

ಕಪಿಲವಸ್ತುವಿನ ಮೇಲೆ ದಾಳಿ ಹೊರಡುವ ಮೊದಲು ತನ್ನ ವಧುವನ್ನು ಒಂದುಸಾರಿ ನೋಡಿ ಹೋಗೋಣವೆಂದು ಪ್ರಸೇನಜಿತ್ತು ತನ್ನ ಕೋಣೆಗೆ ಬಂದನು. ಮುಗ್ಧಳಾದ ಆ ಹುಡುಗಿ ದುಃಖಿಸುವುದನ್ನು ನೋಡಿದ ಕೂಡಲೇ ಅವನ ಮನಸ್ಸು ಬದಲಾಯಿಸಿತು. ಕೂಡಲೇ ಅವನು ಸೈನಿಕರನ್ನು ಹಿಂದೆ ಕಳುಹಿಸಿ ಅವಳು ತನ್ನ ಪಟ್ಟದರಾಣಿ ಎಂದು ಪ್ರಕಟಿಸಿದನು.






ಕಾಲಕ್ರಮದಲ್ಲಿ ರಾಣಿ ಗರ್ಭಿಣಿಯಾಗಿ ಒಬ್ಬ ಮಗನನ್ನು ಹಡೆದಳು. . ಅವನಿಗೆ ವಿರೋಧಕ ನೆಂದು ಹೆಸರು. ಅವನು ಬೆಳೆದು ದೊಡ್ಡವನಾಗಿ ಕ್ಷತ್ರಿಯೋಚಿತ ವಿದ್ಯೆಗಳಲ್ಲಿ ಬಲು ಗಟ್ಟಿಗ ನಾದನು. ಒಂದು ಸಾರಿ ಅವನು ತನ್ನ ತಾತನನ್ನು ನೋಡಲು ಕಪಿಲವಸ್ತುವಿಗೆ ಹೊರಟನು. ಅಲ್ಲಿ ಭೋಜನ ವೇಳೆಯಲ್ಲಿ ಶಾಕ್ಯರಾರೂ ತನ್ನ ಪಂಕ್ತಿ ಯಲ್ಲಿ ಕುಳಿತುಕೊಳ್ಳದಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು.

ಶಾಕ್ಯರ ಈ ವಿಚಿತ್ರವರ್ತನೆಗೆ ಕಾರಣವೇನು ? ಶ್ರಾವಸ್ತಿಗೆ ಹಿಂದಿರುಗಿದ ಕೂಡಲೇ ವಿರೋಧಕನು ಈ ಸಂಗತಿಯನ್ನು ಹೇಳಿ ತಾಯಿಯೊಡನೆ ಕಾರಣವೇನೆಂದು ಕೇಳಿದನು. ಅವಳು ಏನೂ ಮುಚ್ಚಿಡದೆ ನಡೆದ ಸಂಗತಿಯನ್ನು ಹೇಳಿದಳು. ವಿರೋಧಕನು ಕೋಪದಿಂದ ಅತ್ಯುಗ್ರನಾದನು.







ಅವನು ತಂದೆಯ ಬಳಿಗೆ ಹೋಗಿ, "ಶಾಕ್ಯರು ಮಾಡಿದ ಇಷ್ಟು ದೊಡ್ಡ ಅವಮಾನವನ್ನು ನೀವು ಹೇಗೆ ಸಹಿಸಿ ಸುಮ್ಮನಿದ್ದಿರಿ ?" ಎಂದು ಕೇಳಿದನು. ತನ್ನ ವೃದ್ಧಾಪ್ಯದಶೆಯಲ್ಲಿ ಮಗನು ತನ್ನ ಮೇಲೆ ತಿರುಗಿ ಬೀಳುವನೆಂದುಕೊಂಡು ಪ್ರಸೇನಜಿತ್ತು, ಮಗಧರಾಣಿಯಾಗಿರುವ ತನ್ನ ಮಗಳ ಮನೆಗೆ ಹೋಗಿ, ಚಿಂತೆ ಹಿಡಿದು ರೋಗಿ ಯಾಗಿ ಅಲ್ಲಿಯೇ ತೀರಿಹೋದನು. ವಿರೋಧಕನೇ ರಾಜನಾದನು.

ವಿರೋಧಕನು ಕಪಿಲವಸ್ತುವಿನಮೇಲೆ ಯುದ್ಧಕ್ಕೆ ಹೊರಡಲು ಆವಸರಪಡಿಸಿದನು. ಸೇನಾಧಿಪತಿಗಳು ಅದಕ್ಕೆ ಇದು ಸಮಯವಲ್ಲವೆಂದರು. ಅವನ ತಂದೆಯನ್ನು ಅವಮಾನ ಪಡಿಸಿದ ಶಾಕ್ಯರಾರೂ ಈಗ ಬದುಕಿಲ್ಲವೆಂದು ಮಂತ್ರಿಗಳೂ ಹೇಳಿದರು. ಆದರೂ ವಿರೋಧಕನು ಕಪಿಲವಸ್ತುವಿನಮೇಲೆ ಯುದ್ಧಕ್ಕೆ ಹೊರಟನು.







ಶಾಕ್ಯರು ಯುದ್ಧಕ್ಕೆ ಸಿದ್ಧರಾಗಿರಲಿಲ್ಲ. ಆ ಕಾರಣದಿಂದ ವಿರೋಧಕನ ಸೈನ್ಯವನ್ನು ಇದಿರಿಸಿ ಯುದ್ಧ ಮಾಡಲಾರದೆ ಹೋದರು. ವಿರೋಧಕನು ಕಪಿಲವಸ್ತು ರಾಜಭವನಗಳ ಅಮೂಲ್ಯ ವಸ್ತುಗಳನ್ನೂ ನಗರವನ್ನೂ ಅಗ್ನಿಗೆ ಆಹುತಿ ಮಾಡಿದನು. ಅಸಂಖ್ಯಾಕರಾದ ಶಾಕ್ಯರು ಕೊಲ್ಲಲ್ಪಟ್ಟರು. ಆ ಮೇಲೆ ವಿರೋಧಕನು ತನ್ನ ರಾಜಧಾನಿ ಶ್ರಾವಸ್ತಿಗೆ ಹಿಂದಿರುಗಿದನು.

ಅವನು ಶ್ರಾವಸ್ತಿಗೆ ಬಂದಾಗ ರಾಜಭವನಗಳು ನೆಲಮಟ್ಟವಾಗಿದ್ದುವು. ಮಗಧರಾಜನು ತನ್ನ ಮಾವಯ್ಯನಾದ ಪ್ರಸೇನಜಿತ್ತುವನ್ನು ವಿರೋಧಕನು ಕಷ್ಟಗಳ ಪಾಲುಮಾಡಿದನೆಂಬ ಕೋಪದಲ್ಲಿ ಶ್ರಾವಸ್ತಿಯ ಮೇಲೆ ದಾಳಿಮಾಡಿ ನಾಶಗೊಳಿಸಿದನು. ಆ ಮೇಲೆ ಶ್ರಾವಸ್ತಿ ಮಗಧ ರಾಜ್ಯದೊಂದಿಗೆ ಸೇರಿ ಹೋಯಿತು.





# ಗುಣಾಢ್ಯ

ಹಿಂದಿನ ಕಾಲದಲ್ಲಿ ಪ್ರತಿಷ್ಠಾನವೆಂಬ ನಗರವು ಸಾತವಾಹನ ರಾಜರಿಗೆ ರಾಜಧಾನಿಯಾಗಿತ್ತು. ರಾಜಾಸ್ಥಾನದ ಪಂಡಿತರಲ್ಲಿ ಗುಣಾಢ್ಯ ಮತ್ತು ಶರ್ವವರ್ಮ ಎಂಬವರಿದ್ದರು. ಒಂದ ಸಾರಿ ಮಾತಿನ ಸಂದರ್ಭದಲ್ಲಿ ಶರ್ವವರ್ಮನು ಆರು ತಿಂಗಳಿನಲ್ಲಿ ರಾಜನಿಗೆ ಸಂಸ್ಕೃತ ಕಲಿಸುವೆನೆಂದು ಹೇಳಿದನು.

ಈ ವಿಷಯವಾಗಿ ಪಂಡಿತರಿಬ್ಬರೂ ವಾದಕ್ಕೆ ಬಿದ್ದು ಪಂಥ ಕಟ್ಟಿಕೊಂಡರು. 'ರಾಜನಿಗೆ ಆರು ತಿಂಗಳಲ್ಲೇ ನೀನು ಸಂಸ್ಕೃತ ಕಲಿಸಿದರೆ ನಾನು ಸಂಸ್ಕೃತ ರಚನೆಯನ್ನೇ ಬಿಟ್ಟು ಬಿಡುತ್ತೇನೆ' ಎಂದನು ಗುಣಾಢ್ಯ. ಆದರೆ ರಾಜನು ಮನಸ್ಸು ಗೊಟ್ಟು ಓದಿ ಬೇಗನೇ ಸಂಸ್ಕೃತ ಕಲಿತುದರಿಂದ ಗುಣಾಢ್ಯನು ಸೋತನು.





ಗುಣಾಢ್ಯನು ನಗರವನ್ನು ಬಿಟ್ಟು ದೇಶಾಟನೆಗೆ ಪ್ರಾರಂಭಿಸಿದನು. ಅವನು ಕನ್ಯಾಕುಮಾರಿಯಿಂದ ಹಿಮಾಲಯದವರೆಗೂ ಪರ್ಯಟಿಸಿ ಪಂಡಿತ ಪಾಮರರಿಂದ ಅನೇಕ ಕಥೆಗಳನ್ನು ಶೇಖರಿಸಿ ಕೊಂಡನು. ಆ ಮೇಲೆ ಅವುಗಳನ್ನೆಲ್ಲಾ ಪೈಶಾಚಿಕ ಭಾಷೆಯಲ್ಲಿ ಬರೆದನು.




ಅನೇಕ ವರ್ಷಗಳ ಮೇಲೆ ಗುಣಾಢ್ಯನು ಪ್ರತಿಷ್ಠಾನ ನಗರಕ್ಕೆ ಹಿಂದಿರುಗಿ ಬಂದನು. ಪಂಡಿತರೂ ಮಿತ್ರರೂ ಅವನನ್ನು ಗೌರವದಿಂದ ಸ್ವಾಗತಿಸಿದರು. ಅವನೊಂದಿಗಿದ್ದ 'ಬೃಹತ್ಕಥೆ' ಎಂಬ ಉದ್ಗ್ರಂಥವು, ಎಷ್ಟು ಬರೆದರೂ ಮುಗಿಯದಂತಹ, ಪ್ರಪಂಚದಲ್ಲೇ ಮೊತ್ತ ಮೊದಲನೇ ಕಥಾ ಸಂಕಲನವೆನಿಸಿತ್ತು.

ಗುಣಾಢ್ಯನು ತನ್ನ ಬೃಹತ್ಕಥೆಯನ್ನು ರಾಜನ ಮುಂದೆ ಓದ ತೊಡಗಿದನು. ಆದರೆ ರಾಜನು ಅದರ ಮೇಲೆ ಲಕ್ಷ್ಯಗೊಡದೆ ಮಂತ್ರಿಗಳೊಂದಿಗೆ ಏನೋ ಮಾತಾಡಿಕೊಂಡಿದ್ದನು. ಗುಣಾಢ್ಯನಿಗೆ ರಾಜನ ಪ್ರವರ್ತನೆ ಅವಮಾನಕರವೆನಿಸಿತು.







ಅವನು ತನ್ನ ತಾಲಪತ್ರ ಗ್ರಂಥವನ್ನು ಸುತ್ತಿಕಟ್ಟಿಕೊಂಡು ಸಭೆಯಿಂದ ಹೊರಟು ಹೋದನು. ರಾಜನು ಅದನ್ನು ಸಹಾ ಲಕ್ಷಿಸಲಿಲ್ಲ. ಸಭಾಸದರು ಕೂಡ ಗುಣಾಢ್ಯನನ್ನು ತಡೆಯಲು ಪ್ರಯತ್ನಿಸದೆ ಸುಮ್ಮನಿದ್ದರು.



ಗುಣಾಢ್ಯನಿಗೆ ಅತೀವ ವೇದನೆಯಾಯಿತು. ಅವನು ನಗರದ ಸಮೀಪದ ಒಂದು ಗುಡ್ಡದ ಮೇಲಕ್ಕೆ ಹೋಗಿ, ಅಗ್ನಿಕುಂಡವನ್ನು ಉರಿಸಿ ಒಂದೊಂದೇ ತಾಳ ಪತ್ರವನ್ನು ಓದಿ ಅಗ್ನಿಗೆ ಹಾಕ ತೊಡಗಿದನು. ಈ ವಿಧವಾಗಿ ಅವನ ಶ್ರಮವೂ, ಮಾಡಿದ ಉತ್ಕೃಷ್ಟ ರಚನೆಯೂ ಬೆಂಕಿಯ ಬಾಯಿಗೆ ಬೀಳುತಿದ್ದಿತು.

ಸುತ್ತುಮುತ್ತಲಿದ್ದ ಪಶು ಪಕ್ಷ್ಯಾದಿಗಳು ಅವನ ಪಠನಾ ಹೋಮದಿಂದ ಆಕರ್ಷಿತವಾಗಿ ಅಲ್ಲಿ ಸೇರಿ ಮೈಮರೆತುವು. ವೃಕ್ಷಗಳು ಕೂಡ ದುಃಖ ಭಾರದಿಂದ ತಲೆವಾಗಿದುವಂತೆ ! ಆದರೆ ಗುಣಾಢ್ಯನು ಆದಾವುದನ್ನೂ ಗಮನಿಸದೆ ತನ್ನ ರಚನೆಯನ್ನು ಓದುತ್ತಾ ಅಗ್ನಿಗೆ ಆಹುತಿ ಮಾಡುತ್ತಲೇ ಇದ್ದನು.





ಆ ಸಮಯದಲ್ಲಿ ರಾಜಾಸ್ಥಾನದ ಉದ್ಯೋಗಿಯೊಬ್ಬನು, ಆ ದಾರಿಯಾಗಿ ಸಾಗುತ್ತ ಗುಣಾಢ್ಯನನ್ನು ನೋಡಿದನು. ಕೂಡಲೇ ಅವನು ಓಡುತ್ತಾ ರಾಜನ ಬಳಿಗೆ ಹೋಗಿ ಗುಣಾಢ್ಯನು ಮಾಡುವ ಕೆಲಸವನ್ನು ಕುರಿತು ಹೇಳಿದನು. ಆಗ ರಾಜನಿಗೆ ತನ್ನ ತಪ್ಪು ತಿಳಿದು ತುಂಬಾ ವೇದನೆಯಾಯಿತು.



ಕೂಡಲೇ ರಾಜನು ಕುದುರೆಯ ಮೇಲೇರಿ ಗುಣಾಢ್ಯನಿರುವಲ್ಲಿಗೆ ಹೊರಟನು. ಮಂತ್ರಿ ಮೊದಲಾದವರೂ ಅವನನ್ನು ಅನುಸರಿಸಿದರು.

ರಾಜನು ಗುಣಾಢ್ಯನ ಬಳಿಗೆ ಬಂದು, "ಬೇಡ ! ಮಹಾ ಪಂಡಿತರಾದ ನೀವು ನನ್ನನ್ನು ಕ್ಷಮಿಸಿ ಬಿಡಿ. ತಮ್ಮ ಅಮೂಲ್ಯ ರಚನೆಯನ್ನು ಬೆಂಕಿಗೆ ಹಾಕಬೇಡಿ !" ಎಂದನು. ಆದರೆ ಅಷ್ಟು ಹೊತ್ತಿಗೆ ಆ ಗ್ರಂಥದ ಐದನೇ ಭಾಗ ಮಾತ್ರವೇ ಉಳಿದಿತ್ತು. ರಾಜನು ಆ ತಾಲ ಪತ್ರಗಳನ್ನು ತೆಗೆದುಕೊಂಡನು.





ಆ ಮೇಲೆ ಗುಣಾಢ್ಯನಿಗೆ ಎಣೆಯಿಲ್ಲದಷ್ಟು ರಾಜ ಸನ್ಮಾನಗಳು ನಡೆದುವು. ಅವನ ಪೂರ್ತಿ ರಚನೆ ಮಾತ್ರ ಲಭ್ಯವಾಗದೆ ಹೋಯಿತು. ಪೈಶಾಚಿಕ ಭಾಷೆ ಕೂಡಾ ಮರೆಯಲ್ಲಿ ಬಿದ್ದಿತು. ಆದರೆ ಅಗ್ನಿಯ ಪಾಲಾಗದೆ ಉಳಿದ ಬೃಹತ್ಕಥೆಯ ಅಂಶವನ್ನು ಕೆಲವು ಶತಮಾನಗಳ ಮೇಲೆ ಸೋಮದೇವನೆಂಬ ಪಂಡಿತನು "ಕಥಾ ಸರಿತ್ಸಾಗರ" ಎಂಬ ಹೆಸರಿನಿಂದ ಸಂಸ್ಕೃತದಲ್ಲಿ ಅನುವಾದಿಸಿದನು.



# ಯುವಾನ್ ಚ್ವಾಂಗನ ಯಾತ್ರೆಗಳು—೧

ಕ್ರಿ. ಶ. ಏಳನೇ ಶತಮಾನ ಕಾಲದಲ್ಲಿ ಚೈನಾ ದೇಶದಲ್ಲಿ, ಹದಿನಾಲ್ಕು ಮಂದಿ ಯುವಭಿಕ್ಷುಗಳ ಪೋಷಣೆಯನ್ನು ಪ್ರಭುತ್ವವೇ ವಹಿಸುವುದೆಂದು ಪ್ರಕಟಿಸಲ್ಪಟ್ಟಿತು. ಹಾಗೆ ಆರಿಸಲ್ಪಟ್ಟ ಹದಿನಾಲ್ಕು ಮಂದಿಗಳಲ್ಲಿ ಯುವಾನ್ ಚ್ವಾಂಗ್ ಎಂಬವನೊಬ್ಬನು. ಆಗ ಅವನಿಗೆ ಹನ್ನೆರಡು ವರ್ಷ ಪ್ರಾಯ.

ಬೆಳೆಯುವ ವಯಸ್ಸಿನ ಜತೆಯಲ್ಲಿ ಯುವಾನ್ ಚ್ವಾಂಗನಿಗೆ ಜ್ಞಾನತೃಷ್ಣೆಯೂ ಅಧಿಕವಾಗಿತ್ತು. ಬೌದ್ಧ ಧರ್ಮವನ್ನು ಕುರಿತು ತನ್ನ ದೇಶದ ಭಿಕ್ಷುಗಳು ಉಪದೇಶಿಸುವ ರೀತಿ ಅವನಿಗೆ ಹಿಡಿಸಲಿಲ್ಲ. ಯುವಾನ್ ಭಾರತದೇಶವನ್ನು ಸಂದರ್ಶಿಸಲು ಚಕ್ರವರ್ತಿಯ ಅನುಮತಿ ಕೇಳಿದನು. ಅನುಮತಿ ದೊರೆಯದೆ ಹೋಯಿತು. ಆದರೂ ಅವನು ಹೊರಟು ಕಾವಲಿಗರ ಕೈಗೆ ಸಿಕ್ಕಿಬಿದ್ದನು.





ಕಾವಲಿಗರೊಂದಿಗೆ ಯುವಾನ್ ತನ್ನ ಭಾರತ ದೇಶದ ಯಾತ್ರೆಯನ್ನು ಕುರಿತು ಮರೆಮಾಜದೆ ಹೇಳಿದನು. ಅವರು ಯುವಾನನ ಪ್ರಾಮಾಣಿಕತೆಗೆ ಮೆಚ್ಚಿ ಹೋಗಲು ಬಿಟ್ಟರು. ಒಬ್ಬ ಮುದುಕನು ಅವನಿಗೊಂದು ಮುದಿ ಕುದುರೆಯನ್ನು ಬಹುಮಾನವಾಗಿ ಕೊಟ್ಟನು. ಒಬ್ಬ ಬೌದ್ಧಮಠಸ್ಥನು ಅವನಿಗೆ ಮಾರ್ಗದರ್ಶಿಯಾಗಿರಲು ಒಪ್ಪಿ, ಕಷ್ಟಸಾಧ್ಯವಾದ ಬೆಟ್ಟದ ಕಣಿವೆಗಳನ್ನು ನೋಡಿ ಹೆದರಿ ಹಿಂದಿರುಗಿ ಹೋದನು.



ಭಯಂಕರವಾದ ಮರಳಿನ ಬೆಂಗಾಡಿನಲ್ಲಿ ಯುವಾನನಿಗೆ ಪ್ರಾಣಿಗಳ, ಮಾನವರ ಅಸ್ಥಿ ಪಂಜರಗಳೇ ಮಾರ್ಗದರ್ಶಕವಾದುವು. ಒಂದು ದಿನ ಯುವಾನ್ ಬಾಯಾರಿಕೆಯಿಂದ ಮೂರ್ಛೆ ಬೀಳುವ ಸ್ಥಿತಿ ಬಂದಾಗ ಮುದಿ ಕುದುರೆ ಅವನನ್ನು ಒಂದು ನೀರಿನ ಮಡುವಿನ ಹತ್ತಿರ ಒಯ್ದು ಸೇರಿಸಿತು.

ಯುವಾನ್ ದಾಹ ತಣಿಸಿಕೊಂಡು ಮತ್ತೆ ಪ್ರಯಾಣ ಹೊರಟು. ತುರ್ಫಾನ್ ಎಂಬ ಜನ ನಿವಾಸದ ಪ್ರಾಂತವನ್ನು ತಲಪಿದನು. ಆ ಪ್ರಾಂತವನ್ನಾಳುವ ರಾಜನು ಯುವಾನನನ್ನು ಅತ್ಯಾದರದಿಂದ ಸತ್ಕರಿಸಿ, ಅವನ ಪಾಂಡಿತ್ಯ ಪ್ರತಿಭೆಗಳಿಗೆ ಪರವಶನಾಗಿ ತನ್ನ ಗುರುವಾಗಿ ಮಾಡಿಕೊಂಡನು. ಆದರೆ ಕೆಲವು ದಿನಗಳಮೇಲೆ ಯುವಾನ್ ತನ್ನ ಪ್ರಯಾಣವನ್ನು ಮುಂದು ವರಿಸಲು ಎದ್ದಾಗ ರಾಜನು ಅನುಮತಿ ಕೊಡದೆ ಅದಕ್ಕೆ ಅಡ್ಡ ಬಂದನು.





ಬೇರೆ ಉಪಾಯಗಾಣದೆ ಯುವಾನ್ ನಿರಶನ ವ್ರತವನ್ನು ಕೈಕೊಂಡನು. ತಾನು ಅನುಮತಿ ಕೊಡದಿದ್ದರೆ ತನ್ನ ಗುರುವಿನ ಮರಣಕ್ಕೆ ಕಾರಣ ನಾಗುವೆನೆಂದು ಹೆದರಿ ಆ ರಾಜನು, ಯುವಾನನ ಪ್ರಯಾಣಕ್ಕೆ ಅನುಮತಿ ಕೊಟ್ಟು, ಅವನನ್ನು ರಕ್ಷಿಸಲು ಕೆಲಮಂದಿ ಭಟರನ್ನೂ ಕಳುಹಿಸಿದನು. ಭಟರು ಅವನನ್ನು ಭಾರತದ ಮೇರೆಗೆ ತಲಪಿಸಿ ಹಿಂದಿರುಗಿ ಹೋದರು.



ಈ ವಿಧವಾಗಿ ಯುವಾನ್ ಚ್ವಾಂಗ್ ಭಾರತ ದೇಶವನ್ನು ಸೇರಿದನು. ನಗರಹರ ಪ್ರಾಂತದ ಒಂದು ಬೆಟ್ಟದ ಗುಹೆಯಲ್ಲಿ ಬುದ್ಧನ ಛಾಯೆಯನ್ನು ಶಾಶ್ವತವಾಗಿ ಭದ್ರಪಡಿಸಲಾಗಿದೆ ಯೆಂದು ಪ್ರಶಸ್ತಿ ಇದ್ದಿತು. ಯುವಾನ್ ಆ ಗುಹೆಯನ್ನು ಸೇರಿ ಧ್ಯಾನಮಗ್ನನಾಗಿ, ತೇಜೋಮಯನಾದ ಬುದ್ಧನ ಸಾಕ್ಷಾತ್ಕಾರ ಪಡೆದನು.

ತರುವಾಯ ಅವನು ಪ್ರಯಾಗಕ್ಷೇತ್ರಕ್ಕೆ ದೋಣಿಯಲ್ಲಿ ಪ್ರಯಾಣ ಮಾಡುವಾಗ ದಾರಿದೋಚುವ ಕಳ್ಳರು ಅವನನ್ನು ಹಿಡಿದು, ಅವನ ಸುಲಕ್ಷಣ ಯುಕ್ತವಾದ ಶರೀರವನ್ನು ನೋಡಿ, ತಮ್ಮ ದೇವತೆಗೆ ಬಲಿಕೊಡಲು ತಕ್ಕವನೆಂದು ಭಾವಿಸಿ ಎಳೆದುಕೊಂಡು ಹೋದರು. ಅವನೊಂದಿಗಿದ್ದವರು ನಿಸ್ಸಹಾಯರಾಗಿ ಸುಮ್ಮನೆ ನೋಡುತ್ತಿದ್ದರು.





ಕಳ್ಳರು ಯುವಾನ್ ಚ್ವಾಂಗನನ್ನು ಬಲಿಕೊಡಲು ತಮ್ಮ ದೇವತೆಯ ವಿಗ್ರಹದ ಮುಂದೆ ಒಯ್ದು ನಿಲ್ಲಿಸಿದರು. ಬರುವ ಜನ್ಮದಲ್ಲಾದರೂ ತಾನು ತಲೆ ಹಾಕಿದ ಕಾರ್ಯವು ನೆರವೇರುವಂತೆ ಮಾಡಲು ಅವನು ಬುದ್ಧ ಭಗವಾನನನ್ನು ಪ್ರಾರ್ಥಿಸಿದನು. ಆ ಮೇಲೆ ಅವನು ಕಳ್ಳರೊಂದಿಗೆ ತಾನು ಬಲಿಗೆ ಸಿದ್ಧನಿರುವುದಾಗಿ ಹೇಳಿದನು.



ಆ ಕ್ಷಣದಲ್ಲಿಯೇ ಭಾರೀ ತುಫಾನು ಪ್ರಾರಂಭ ವಾಯಿತು. ಸುತ್ತಮುತ್ತಲಿದ್ದ ಮರಗಳು ಫಟಫಟನೆ ತಾಯಿಬೇರು ಸಹಿತವಾಗಿ ಬಿದ್ದುವು. ಆ ಸಮಯದಲ್ಲಿ ಯುವಾನನೊಂದಿಗಿದ್ದ ಪ್ರಯಾಣಿಕನೊಬ್ಬನು ಕಳ್ಳರೊಂದಿಗೆ "ಈ ಮಹನೀಯನನ್ನು ಬಲಿಕೊಟ್ಟರೆ ನಿಮ್ಮ ಸರ್ವಸ್ವವೂ ನಾಶವಾಗುತ್ತದೆ" ಎಂದನು.

ಕಳ್ಳರು ಯುವಾನ್ ಚ್ವಾಂಗನನ್ನು ಬಿಟ್ಟು ಅವನ ಪಾದಗಳಿಗೆ ಅಡ್ಡ ಬಿದ್ದರು. ಯುವಾನ್ ಕಳ್ಳರನ್ನು ನೋಡಿ, "ನಿಮ್ಮ ಪಾಪಕೃತ್ಯಗಳಿಗೆ ಯಾವುದೋ ಒಂದು ದಿನ ಭಯಂಕರವಾದ ಶಿಕ್ಷೆ ಪಡೆಯುವಿರಿ. ನೀವು ಇತರರನ್ನೂ ಹಿಂಸಿಸುವಂಥವುಗಳಿಗೆ ಒಂದುದಿನ ನೀವೇ ಗುರಿಯಾಗುವಿರಿ" ಎಂದನು.





ಯುವಾನ್ ಚ್ವಾಂಗನ ಮಾತುಗಳನ್ನು ಕೇಳಿ ಕಳ್ಳರು ತಮ್ಮ ಆಯುಧಗಳನ್ನು ಗಂಗೆಗೆ .ಬಿಸುಟರು. ಇನ್ನುಮೇಲೆ ತಾವೆಲ್ಲಾ ಸಾಧು ಜೀವನ ನಡೆಸುವೆವೆಂದು ಯುವಾನನಿಗೆ ಮಾತು ಕೊಟ್ಟರು. ಯುವಾನ್ ಅವರನ್ನು ಆಶೀರ್ವದಿಸಿ, ಪ್ರಯಾಣ ಮುಂದುವರಿಸಿದನು.

(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)



# ಯುವಾನ್ ಚ್ವಾಂಗನ ಯಾತ್ರೆಗಳು—೨

ಗಂಗಾ ಯಮುನಾ ನದಿಗಳ ಸಂಗಮ ಸ್ಥಾನವಾದ ಪ್ರಯಾಗ ನಗರವು ಯುವಾನ್ ಚ್ವಾಂಗನನ್ನು ಮಂತ್ರಮುಗ್ಧಗೊಳಿಸಿತು. ಆ ಸಂಗಮ ತೀರ್ಥನದೀ ಜಲದಲ್ಲಿ ಸ್ನಾನ ಮಾಡುವ ಸಾವಿರಾರು ಯಾತ್ರಿಕರನ್ನು ಮಾತ್ರವಲ್ಲದೆ, ಕೋತಿಗಳ ಗುಂಪು, ಜಿಂಕೆಗಳ ಗುಂಪು ಕೂಡಾ ಅಲ್ಲಿ ಸ್ನಾನ ಮಾಡುವುದನ್ನು ನೋಡಿದನು.

ಅಲ್ಲಿಂದ ಯುವಾನ್‌ಚ್ವಾಂಗ್ ಪ್ರಸಿದ್ಧ ಬೌದ್ಧ ವಿಶ್ವವಿದ್ಯಾನಿಲಯದ ಕೇಂದ್ರವೆನಿಸಿದ ನಲಂದಾಕ್ಕೆ ಹೋದನು. ಅಲ್ಲಿ ಇನ್ನೂರುಮಂದಿ ಪಂಡಿತರು ಆತನನ್ನು ಹೂವಾಲೆಗಳಿಂದ ಸತ್ಕರಿಸಿ ಪ್ರಧಾನ ದ್ವಾರದ ಮೂಲಕ ವಿದ್ಯಾಲಯದೊಳಗೆ ಕರೆದೊಯ್ದರು.





ನೂರ ಆರು ವರ್ಷ ಪ್ರಾಯದ ಹಣ್ಣು ಮುದುಕನಾದ ಶೀಲಭದ್ರನು ಅಲ್ಲಿಯ ಪ್ರಧಾನಾಚಾರ್ಯನಾಗಿದ್ದನು. ಆತನು ತನ್ನ ಅನಾರೋಗ್ಯವನ್ನೂ ವಾರ್ಧಕ್ಯವನ್ನೂ ಲೆಕ್ಕಿಸದೆ ಸ್ವಯಂ ಬಂದು ಚ್ವಾಂ ನ್ನು ಕರೆದೊಯ್ಯುತ್ತ ವಿದ್ಯಾಲಯದ ವಿವಿಧ ಶಾಖೆಗಳನ್ನು ತೋರಿಸಿದನು. ಚ್ವಾಂಗನ ಬರುವಿಕೆಯನ್ನು ಕುರಿತು ತಾನು ಸ್ವಪ್ನದ ಮೂಲಕ ಹೇಗೆ ತಿಳಿದುಕೊಂಡೆನೆಂಬುದನ್ನೂ ಚ್ವಾಂಗನಿಗೆ ವಿವರಿಸಿದನು.



ಈ ವಿದ್ಯಾಲಯವು ಅನೇಕ ಭವನಗಳಿಂದ ಸ್ತೂಪಗಳಿಂದ ಕಣ್ಣಿಗೆ ಔತಣವಾಗುವಂತಿದ್ದಿತು. ಅದರ ಸುತ್ತಲೂ ಅಲ್ಲಲ್ಲಿ ತಾವರೆ ಹೂವುಗಳಿಂದ ಕಳಕಳಿಸುವ ಸರೋವರಗಳಿದ್ದುವು. ಎಂಬತ್ತು ಅಡಿ ಎತ್ತರದ ತಾಮ್ರದ ಬುದ್ಧನ ವಿಗ್ರಹವಿದ್ದಿತು. ಈ ವಿದ್ಯಾಲಯದಲ್ಲಿ ಶಿಕ್ಷಣ ಪಡೆಯಲು ಟಿಬೇಟ್‌ನಿಂದಲೂ, ಶ್ರೀಲಂಕ, ಜಾವಾದ್ವೀಪಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಒಂಬತ್ತು ಅಂತಸ್ತುಗಳಿರುವ ಆ ಭವನದಲ್ಲಿ ದೊಡ್ಡ ಗ್ರಂಥಾಲಯ ಕೂಡಾ ಇದ್ದಿತು.

ಒಂದು ದಿನ ರಾತ್ರಿ ಯುವಾನ್‌ಚ್ವಾಂಗ್ ಒಂದು ವಿಚಿತ್ರ ಸ್ವಪ್ನ ನೋಡಿದನು. ವಿದ್ಯಾಲಯದ ಭವನಗಳೆಲ್ಲಾ ಸರ್ವನಾಶವಾಗಿ ಉಳಿದಿದ್ದ ಒಂದೇ ಒಂದು ಶಿಥಿಲ ಭವನದ ಕೊಠಡಿಯೊಳಗೆ ಪಶುಗಳು ಮೇಯುವುದನ್ನು ಆ ಸ್ವಪ್ನದಲ್ಲಿ ನೋಡಿದನು.





ಅಷ್ಟೇ ಅಲ್ಲದೆ ಸ್ವಪ್ನದಲ್ಲಿ ಆವನಿಗೊಬ್ಬ ದಿವ್ಯ ಪುರುಷನು ಕಾಣಿಸಿ, ದೂರದಲ್ಲಿ ಉರಿಯುವ ಬೆಂಕಿಯನ್ನು ತೋರಿಸಿ, ಸಾಧ್ಯವಾದಷ್ಟು ಬೇಗ ಹಿಂದಿರುಗಿ ಹೋಗೆಂದು ಚ್ವಾಂಗನಿಗೆ ಆದೇಶ ಮಾಡಿದನು. ಚ್ವಾಂಗ್ ನಲಂದಾದಿಂದ ಹೊರಟು ಹೋದಮೇಲೆ ನಿಜಕ್ಕೂ ನಲಂದಾವು ಭಾರೀ ಬೆಂಕಿಯ ಅನಾಹುತಗಳಿಗೆ ಗುರಿಯಾಯಿತು.



ಒಂದಾನೊಂದು ಗುಡ್ಡದ ಮೇಲೆ ಗಂಧದ ಕೊರಡುಗಳಿಂದ ತಯಾರಿಸಿದ ಬುದ್ಧನ ವಿಗ್ರಹವಿದ್ದಿತು. ಯಾರಾದರೂ ಆ ವಿಗ್ರಹದ ಮೇಲೆ ಹೂಮಾಲೆಯನ್ನು ಬೀಸಿ ಒಗೆದಾಗ, ಅದು ವಿಗ್ರಹದ ಕೈಗಳಲ್ಲಿ ಸಿಕ್ಕಿ ನೇತಾಡಿದರೆ, ಬಿಸುಟವನ ಕೋರಿಕೆಗಳು ಫಲಿಸುತ್ತವೆ ಎನ್ನುತ್ತಿದ್ದರು. ಚ್ವಾಂಗ್ ತಾನು ನಿಜವಾದ ಭಕ್ತನಾಗಿ ಬದುಕಲು ಎಣಿಸಿದ್ದೇನೆಂದು ಅಂದುಕೊಂಡು ಆ ವಿಗ್ರಹದ ಮೇಲೆ ಮೂರು ಮಾಲೆಗಳನ್ನು ಬೀಸಿ ಒಗೆದನು. ಒಂದು ಮಾಲೆ ಆ ವಿಗ್ರಹದ ಕೊರಳಲ್ಲಿಯೂ ಉಳಿದೆರಡು ವಿಗ್ರಹದ ಕೈಗಳಲ್ಲಿಯೂ ನೇತಾಡಿದುವು.

ಆ ಕಾಲದಲ್ಲಿ ಚಕ್ರವರ್ತಿಗಳಾದ ಪುಲಕೇಶಿ ಮತ್ತು ಹರ್ಷವರ್ಧನರ ನಡುವೆ ಆಗಾಗ ಯುದ್ಧಗಳು ನಡೆಯುತ್ತಿದ್ದುವು. ಪುಲಕೇಶಿಯ ಪಕ್ಷದವರು ಆನೆಗಳಿಗೆ ಮದ ಹಿಡಿಸಿ ಅವುಗಳನ್ನು ಶತ್ರುಗಳ ಮೇಲೆ ಕೆರಳಿಸಿ ಬಿಟ್ಟು ಹೇಗೆ ಗೊಂದಲ ಮಾಡಿಸುವರೆಂಬ ವಿವರಗಳನ್ನು ಚ್ವಾಂಗ್ ಬರೆದಿಟ್ಟಿದ್ದಾನೆ.





ಹರ್ಷವರ್ಧನನು ಚ್ವಾಂಗನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿದನು. ಅವನೂ ಅವನ ತಂಗಿ ರಾಜಶ್ರೀಯೂ ಚ್ವಾಂಗನ ಆಗಮನ ಸಂದರ್ಭದಲ್ಲಿ ದೊಡ್ಡ ಉತ್ಸವದ ಏರ್ಪಾಡು ಮಾಡಿದರು. ಹರ್ಷವರ್ಧನನ ಜ್ಞಾನ ತೃಷ್ಣೆಯನ್ನು ನೋಡಿ ಚ್ವಾಂಗನು ಸಂತೋಷಪಟ್ಟಿರುವನು.



ಹರ್ಷವರ್ಧನನು ತನ್ನ ರಾಜಧಾನಿ ಕನ್ಯಾಕುಬ್ಜದಲ್ಲಿ ಸಾಮಂತರಿಂದ, ಕವಿಗಳಿಂದ, ಪಂಡಿತರಿಂದ್ಧ ಪುರಪ್ರಮುಖರಿಂದ ಕೂಡಿದ ಮಹಾಸಭೆಯನ್ನು ಕರೆದನು. ಯುವಾನ್‌ಚ್ವಾಂಗ್ ಸಭೆಯವರೆಲ್ಲಾ ಮೆಚ್ಚುವ ಹಾಗೆ ಮಹಾಯಾನ ಬೌದ್ಧವನ್ನು ಕುರಿತು ಉಪನ್ಯಾಸ ಮಾಡಿದನು.

ಮಹಾಸಭೆಯ ಕೊನೆಯ ದಿನದಲ್ಲಿ ಯಾವನೋ ಒಬ್ಬನು ಹರ್ಷವರ್ಧನನನ್ನು ಕತ್ತಿಯಿಂದ ತಿವಿಯಲು ನೋಡಿದನು. ಹರ್ಷವರ್ಧನನು ತಪ್ಪಿಸಿಕೊಂಡು, ಆ ದುಷ್ಟನು ಬೀಳುವ ಹಾಗೆ ಹೊಡೆದನು. ಆಮೇಲೆ ವಿಚಾರಿಸಲು ಹರ್ಷವರ್ಧನನು ಅವನನ್ನು ಕ್ಷಮಿಸಿ ಬಿಟ್ಟುಬಿಟ್ಟನು.





ತಕ್ಷಶಿಲೆ, ಕಾಶ್ಮೀರ ಪ್ರಾಂತವಾಗಿ ಯುವಾನ್ ಚ್ವಾಂಗ್ ಚೈನಾದೇಶಕ್ಕೆ ಹಿಂದಿರುಗಿದನು. ಭಾರತದೇಶಕ್ಕೆ ಒಂಟಿಯಾಗಿ ಬಂದ ಚ್ವಾಂಗ್, ಸ್ವದೇಶಕ್ಕೆ ಹಿಂದಿರುಗುವಾಗ ನೂರುಮಂದಿ ಅಂಗರಕ್ಷಕರೊಂದಿಗೆ, ಇಪ್ಪತ್ತು ಕುದುರೆಗಳ ಮೇಲೆ ಬೌದ್ಧಮತ ಗ್ರಂಥಗಳು, ಪ್ರತಿಮೆಗಳು, ಚಿತ್ರಗಳೊಂದಿಗೆ ಪ್ರಯಾಣ ಮಾಡಿದನು. ಚೈನಾ ಚಕ್ರವರ್ತಿ ತಾಯ್ ಚುಂಗ್ ಅವನನ್ನು ಘನವಾಗಿ ಸನ್ಮಾನಿಸಿದನು.



# ಶಿಲಾದಿತ್ಯ

ಒಂದು ಮಹಾ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ಶಿಲಾದಿತ್ಯನು, 2 ನೆಯ ಶತಮಾನದಲ್ಲಿ ಕಾಶ್ಮೀರವನ್ನು ಪಾಲಿಸಿಕೊಂಡಿದ್ದನು. ಯುದ್ಧಪ್ರಿಯನಾದ ಅವನು ಗೋಬೀ ಮರುಭೂಮಿಯ ಆಚೆಗಿರುವ ಒಂದು ಚಿಕ್ಕ ರಾಜ್ಯವನ್ನು ಜಯಿಸಬೇಕೆಂದು ಸೈನ್ಯದೊಂದಿಗೆ ಹೊರಟನು.

ದಾರಿಯಲ್ಲಿ ಒಂದು ಕಡೆ ಹೊಸಬನೊಬ್ಬನು ಓಡುತ್ತಾ ಬಂದು ಶಿಲಾದಿತ್ಯನು ಏರಿಕೊಂಡಿದ್ದ ಕುದುರೆಯ ಮುಂದೆ ಸಾಷ್ಟಾಂಗವಾಗಿ ಬಿದ್ದನು. ರಾಜನು ಕುದುರೆಯನ್ನು ನಿಲ್ಲಿಸಿ ವಿಚಾರಿಸಲು, ಆ ಹೊಸಬನು, ಶಿಲಾದಿತ್ಯನು ದಾಳಿಮಾಡಲಿರುವ ರಾಜ್ಯದ ಮಂತ್ರಿಯೆಂದು ಗೊತ್ತಾಯಿತು. ಚಾರರೂ ಅವನನ್ನು ಗುರುತಿಸಿದರು.





ಅವನು ತಾನು ಬಂದ ಕಾರಣವನ್ನು ಹೇಳಿದನು. ಆ ಮಂತ್ರಿ ತನ್ನ ರಾಜನಿಗೆ ಮಹಾ ಬಲಿಷ್ಠನಾದ ಶಿಲಾದಿತ್ಯನಿಗೆ ಶರಣಾಗಿಬಿಡುವುದೇ ಒಳ್ಳೆಯದೆಂದು ಸಲಹೆ ಮಾಡಿದನಂತೆ. ಆದರೆ ರಾಜನು ಶಿಲಾದಿತ್ಯನನ್ನು ದೂಷಿಸಿ ಅವನನ್ನು ಕೊರಡೆಗಳಿಂದ ಹೊಡೆಯಿಸಿದನಂತೆ. ಅವನ ಶರೀರದಲ್ಲಿ ಗಾಯಗಳೂ ಇದ್ದುವು.



ಹೀಗೆ ಶರಣಾದ ಮಂತ್ರಿಗೆ ಆ ರಾಜನು ಮಾಡಿದ ಅವಮಾನಕ್ಕೆ ತಕ್ಕ ಪ್ರತೀಕಾರ ಮಾಡಿತೀರುವೆನೆಂದು ಶಿಲಾದಿತ್ಯನು ಭರವಸೆಕೊಟ್ಟನು. ಆಗ ಮಂತ್ರಿ "ಮಹಾಪ್ರಭೂ, ನೀವು ಸೈನ್ಯದೊಂದಿಗೆ ಮಾಮೂಲು ದಾರಿಯಲ್ಲಿ ಸಾಗಿದರೆ ನಮ್ಮ ರಾಜ್ಯ ಸೇರಲು ಮೂರು ತಿಂಗಳುಬೇಕು. ಮರುಭೂಮಿಯಲ್ಲೊಂದು ಸಮೀಪದ ದಾರಿ ನನಗೆ ಗೊತ್ತು. ಹಾಗೆ ಹೋದರೆ ನಮ್ಮ ರಾಜ್ಯವನ್ನು ಎರಡುವಾರಗಳೊಳಗೆ ಸೇರಬಹುದು" ಎಂದನು.

ಶಿಲಾದಿತ್ಯನು ಈ ಹತ್ತಿರದ ಹಾದಿಯಲ್ಲಿ ಪ್ರಯಾಣ ಮಾಡಲು ನಿಶ್ಚಯಿಸಿದನು. ಮರುಭೂಮಿಯಲ್ಲಿ ನೀರು ಸಿಗಲಾರದು. ಆ ಮಂತ್ರಿ ಸಲಹೆ ಮಾಡಿದಂತೆ ಸೇನೆಗೆ ಎರಡು ವಾರಗಳವರೆಗೆ ಸಾಕಾಗುವಷ್ಟು ನೀರನ್ನು ಸಂಗ್ರಹಿಸಿಕೊಂಡನು. ಆ ಮಂತ್ರಿ ಮುಂದಾಗಿ ದಾರಿ ತೋರಿಸಿದಂತೆ ಸೈನ್ಯವು ಮರುಭೂಮಿಯಲ್ಲಿ ಪ್ರವೇಶಿಸಿತು.





ಮರುಳುಗಾಡಿನಲ್ಲಿ ಪ್ರಯಾಣ ಮಾಡುವುದು ಅತ್ಯಂತ ಬಾಧಾಕರವಾಗಿತ್ತು. ಎಲ್ಲಿಯೂ ಸಣ್ಣ ನೆರಳು ನೀಡುವ ಮರವೂ ಇಲ್ಲ. ಅಂತೂ ಆಯಾಸದಿಂದ ಹದಿನೈದು ದಿನಗಳು ಕ್ರಮಿಸಿದುವು. ಆ ಸಮಯಕ್ಕೆ ತಂದುಕೊಂಡಿದ್ದ ನೀರು ಪೂರಾ ಮುಗಿಯಿತು. ಕೆಲವು ಕುದುರೆಗಳೂ ಆನೆಗಳೂ ಸತ್ತು ಬಿದ್ದುವು.



ಮಂತ್ರಿ ಮಾತ್ರ ಸೇರಬೇಕಾದ ಪ್ರದೇಶ ಇನ್ನೇನು ಬಂತು, ಸಮೀಪವೇ ಇದೆ ಎಂದು ಧೈರ್ಯ ಹೇಳುತ್ತಲೇ ಇದ್ದನು. ಆದರೆ ಎಲ್ಲಿಯೂ ಜನನಿವಾಸದ ಸೂಚನೆಯೇ ಕಾಣಲಿಲ್ಲ. ಕ್ರಮವಾಗಿ ಬಿಸಿಲಿನ ತಾಪದಿಂದ ಸೈನಿಕರೂ ಸಾಯತೊಡಗಿದರು. ದಳಪತಿಗಳು ರಾಜನೊಂದಿಗೆ ಈ ಮರುಭೂಮಿಯ ಪ್ರಯಾಣವು ಎಲ್ಲರ ಸಾವಿಗೂ ಕಾರಣವಾಗುತ್ತದೆಂದು ಹೇಳಿದರು.

ಮಂತ್ರಿಯ ಮಾತಿಗೆ ಬೇಸತ್ತು ಹೋದ ಶಿಲಾದಿತ್ಯನು "ನಾವಿನ್ನು ಯಾವಾಗ ನಿಮ್ಮ ರಾಜ್ಯ ತಲುಪುತ್ತೇವೆ ? ನಿಜ ಹೇಳು" ಎಂದು ಜೋರಿನಿಂದ ಕೇಳಿದನು. ಆಗ ಮಂತ್ರಿ "ಇನ್ನು ಬೇಗದಲ್ಲೇ ಸೈನ್ಯದೊಂದಿಗೆ ನೀವು ಮೃತ್ಯುಲೋಕಕ್ಕೇ ಹೋಗುವಿರಿ. ಬೇಕಾದರೆ ನನಗೆ ಮರಣದಂಡನೆ ವಿಧಿಸಿರಿ. ಇನ್ನು ಮೇಲೆ ಈ ಮರುಭೂಮಿಯಲ್ಲಿ ಮುಂದೆ ಹೋದರೂ ಹಿಂದೆ ಹೋದರೂ ನಮಗೆಲ್ಲಾ ಸಾವು ಮಾತ್ರ ತಪ್ಪದು" ಎಂದನು.





ಅವನು ರಾಜನೊಂದಿಗೆ ತಾನು ಬೇಕೆಂತಲೇ ನೀರು ಸಿಗದ ಮರಳು ಗಾಡಿನಲ್ಲಿ ಸಾಗಿಸಿಕೊಂಡು ಬಂದೆನೆಂಬುದನ್ನು ಒಪ್ಪಿಕೊಂಡನು. ತಮ್ಮ ಚಿಕ್ಕ ರಾಜ್ಯವನ್ನು ಕಾಪಾಡಲಿಕ್ಕಾಗಿ ಅವನು ಆತ್ಮಾರ್ಪಣೆ ಮಾಡಿಕೊಳ್ಳಲು ಸಿದ್ಧನಾದನಂತೆ. ಶಿಲಾದಿತ್ಯನನ್ನು ನಂಬಿಸಲು ತನ್ನ ಮಿತ್ರರಿಂದ ಕೊರಡೇ ಛಡಿಗಳನ್ನು ತಿಂದನಂತೆ. ಇದನ್ನೆಲ್ಲ ಹೇಳಿ "ಮಹಾರಾಜರೇ ! ನನ್ನ ತಲೆಕಡಿಸಿ ಬಿಡಿ" ಎಂದು ಮುಂಡುಗಾಲೂರಿ ತಲೆ ಬಾಗಿದನು ಆ ಮಂತ್ರಿ.



ಶಿಲಾದಿತ್ಯನು ಕೈ ಕಾಲುಗೆಡದೆ ನೀರನ್ನು ಹುಡುಕುವಂತೆ ಸೈನಿಕರಿಗೆ ಆಜ್ಞೆ ಮಾಡಿದನು. ಅವನೊಂದಿಗೆ ಒಬ್ಬ ಜಲನೇತ್ರನೂ ಇದ್ದನು. ಅವನು ತೋರಿಸಿದ ಪ್ರದೇಶದಲ್ಲಿ ಸೈನಿಕರು ಅಗೆಯ ತೊಡಗಿದರು. ಎಷ್ಟು ಅಗೆದರೂ ನೀರು ಬರಲಿಲ್ಲ.

ನಿರಾಶನಾಗದ ರಾಜನ ಆಜ್ಞೆಯಂತೆ ಸೈನಿಕರು ಮತ್ತೂ ಮತ್ತೂ ಆಳಕ್ಕೆ ಅಗೆದರು. ಹಠಾತ್ತಾಗಿ ನೀರಿನ ಬುಗ್ಗೆ ಹೊರ ಚಿಮ್ಮಿತು. ಸೈನಿಕರಿಗಾದ ಆನಂದೋತ್ಸಾಹ ಅಷ್ಟಿಷ್ಟಲ್ಲ. ಶಿಲಾದಿತ್ಯನು ಹಿಂದಿರುಗುವ ಪ್ರಯಾಣಕ್ಕೆ ಬೇಕಾದಷ್ಟು ನೀರನ್ನು ದೊಡ್ಡ ದೊಡ್ಡ ಪಾತ್ರಗಳಲ್ಲಿ ಸಂಗ್ರಹ ಮಾಡಿಸಿದನು.





ತರುವಾಯ ಅವನು ಆ ಮಂತ್ರಿಯೊಂದಿಗೆ, "ಈ ಮರುಭೂಮಿಯಲ್ಲಿ ದಾಹದಿಂದ ಒಣಗಿ ನಾವು ಸಾಯುವಾಗ ನೀನೂ ನಮ್ಮೊಂದಿಗೆ ಸಾಯುವವನಾದುದರಿಂದ ನಾನು ನಿನ್ನನ್ನು ಕೊಲ್ಲಲಿಲ್ಲ. ಆದರೆ ಈಗ ಪ್ರಕೃತಿ ನನ್ನ ಮೇಲೆ ದಯೆದೋರಿತು. ಆ ಕಾರಣದಿಂದ ನಾನೂ ನಿನ್ನ ಮೇಲೆ ದಯೆ ತೋರಿಸುತ್ತೇನೆ. ನಿನ್ನ ದೇಶ ಭಕ್ತಿ ಮೆಚ್ಚುವಂಥಾದ್ದು!" ಎಂದನು.



# ಭರ್ತೃಹರಿಯ ಕಥೆ

ಕ್ರಿ. ಶ. ಏಳನೆಯ ಶತಮಾನದಲ್ಲಿ ಭರ್ತೃಹರಿ ಎಂಬ ರಾಜನು ಉಜ್ಜಯಿನಿಯ ರಾಜಧಾನಿಯಲ್ಲಿ ದೇಶವನ್ನಾಳಿಕೊಂಡಿದ್ದನು. ಅವನು ಒಳ್ಳೆಯ ವಿಲಾಸ ಜೀವಿಯಾಗಿದ್ದರೂ ಪರಿಪಾಲನೆಯ ವಿಷಯದಲ್ಲಿ ತುಂಬಾ ಭೂತದಯೆಯುಳ್ಳವನು.

ನಗರದಾಚೆಗಿರುವ ಅರಣ್ಯದಲ್ಲಿ ಒಬ್ಬ ಮುನಿ ವಾಸವಾಗಿದ್ದನು. ಒಂದು ದಿನ ಆ ಮುನಿಗೆ ವಿಚಿತ್ರ ಫಲವೊಂದು ಕಂಡಿತು. ಆಲೋಚಿಸುವಾಗ ಆ ಫಲವು ತನ್ನ ಧ್ಯಾನ ಶಕ್ತಿಯ ಫಲಿತವೆಂದು ಅವನಿಗೆ ತಿಳಿಯಿತು.





ಆ ವಿಚಿತ್ರ ಫಲವು ಅದ್ಭುತ ಶಕ್ತಿಯುಳ್ಳದ್ದು. ಅದನ್ನು ತಿಂದವನು ನೂರು ವರ್ಷಗಳವರೆಗೆ ಯೌವನವಂತನಾಗಿರುತ್ತಾನೆ. ಈ ಫಲವನ್ನು ತಿನ್ನಲು ರಾಜಾ ಭರ್ತೃಹರಿಯೇ ಅರ್ಹನೆಂದು ಭಾವಿಸಿ, ಮುನಿ ಆ ಫಲವನ್ನು ಭರ್ತೃಹರಿಗೆ ಬಹುಮಾನ ಕೊಟ್ಟನು.



ಭರ್ತೃಹರಿಗೆ ತನ್ನ ಚಿಕ್ಕರಾಣಿಯ ಮೇಲೆ ಪ್ರಾಣ ಸಮಾನ ಪ್ರೀತಿಯಾದುದರಿಂದ, ಆ ಹಣ್ಣನ್ನು ಕೊಂಡೊಯ್ದು ಅವಳಿಗೇ ತಿನ್ನಲು ಕೊಟ್ಟನು.

ಮರುದಿನ ಭರ್ತೃಹರಿ ಬೇಟೆಯಾಡಲು ಅರಣ್ಯಕ್ಕೆ ಹೋದನು. ಬೇಟೆಯಿಂದ ಹಿಂದಿರುಗುವಾಗ, ಮುಸುಕು ಧರಿಸಿದ ಸ್ತ್ರೀಯೊಬ್ಬಳು ಅವನ ಇದಿರಿಗೆ ಬಂದು, ತನ್ನೊಂದಿಗೆ ನಿರ್ಜನ ಪ್ರದೇಶಕ್ಕೆ ಬರಬೇಕೆಂದು ಕೇಳಿಕೊಂಡಳು.





ಹಾಗೆ ಹೋದ ರಾಜನಿಗೆ ಅವಳು ಅದ್ಭುತ ಸುಂದರಿಯಾದ ನರ್ತಕಿ ಎಂದು ಗುರುತು ಹತ್ತಿತು. ಅವಳು ಅವನಿಗೆ ಒಂದು ಹಣ್ಣನ್ನು ಕೊಟ್ಟು, "ಈ ಹಣ್ಣು ತನ್ನ ಅಮೋಘ ಶಕ್ತಿಯಿಂದ ನಿಮ್ಮನ್ನು ನೂರು ವರ್ಷ ಯೌವನದಲ್ಲಿರಿಸುತ್ತದೆ. ಇದನ್ನು ತಿನ್ನುವ ಅರ್ಹತೆ ನನಗಲ್ಲ, ನಿಮಗೇ" ಎಂದು ಹೇಳಿ ವೇಗವಾಗಿ ಅಲ್ಲಿಂದ ಹೊರಟು ಹೋದಳು.

ರಾಜನು ಮುನಿಯ ಹತ್ತಿರ ಹೋಗಿ, ಅದ್ಭುತ ಶಕ್ತಿಯ ಇನ್ನೊಂದು ಹಣ್ಣನ್ನು ಯಾರಿಗಾದರೂ ಕೊಟ್ಟಿರಾ ಎಂದು ಕೇಳಿದನು. ಅಂತಹ ಇನ್ನೊಂದು ಹಣ್ಣು ಇಲ್ಲವೇ ಇಲ್ಲವೆಂದು ಮುನಿ ರಾಜನೊಂದಿಗೆ ಹೇಳಿದನು.





ಆ ಮಾತು ಕೇಳಿ ಭರ್ತೃಹರಿಗೆ ಅಪರಿಮಿತ ಆಶ್ಚರ್ಯವಾಯಿತು. ಅವನು ಅಲ್ಲಿದ್ದ ಒಂದು ಗುಡ್ಡದಕಲ್ಲಿನ ಮೇಲೆ ಕುಳಿತುಕೊಂಡು, ಆ ವಿಚಿತ್ರ ಫಲವು ನರ್ತಕಿಗೆ ಹೇಗೆ ಸಿಕ್ಕಿತು ? ಅದರ ಹಿಂದಿನ ನಿಗೂಢ ರಹಸ್ಯವೇನಿದ್ದೀತು ? ಎಂದು ಆಲೋಚಿಸ ತೊಡಗಿದನು.

ತರುವಾಯ ಅವನು ನಗರವನ್ನು ಸೇರಿ ವಿಚಾರಣೆ ಪ್ರಾರಂಭಿಸಿದನು. ಆಗ ಹೊರಬಿದ್ದ ಸಮಾಚಾರವೇನಂದರೆ, ಅವನ ಚಿಕ್ಕರಾಣಿಗೆ ಒಬ್ಬ ರಾಜೋದ್ಯೋಗಿಯ ಮೇಲೆ ಅಪಾರ ಪ್ರೇಮ. ಅವಳು ಗಂಡನು ಕೊಟ್ಟ ಆ ಫಲವನ್ನು ಅವನಿಗೆ ಕೊಟ್ಟಿದ್ದಾಳೆ.





ಆದರೆ ಆ ರಾಜೋದ್ಯೋಗಿ ಅದನ್ನು ತಾನು ತಿನ್ನದೆ, ಆ ದಿನ ಸಾಯಂಕಾಲ ಅದನ್ನು ಆ ನರ್ತಕಿಗೆ ಕೊಟ್ಟಿದ್ದಾನೆ. ಅವನಿಗೆ ಅವಳ ಮೇಲೆ ತುಂಬಾ ಪ್ರೀತಿ.

ವಜ್ರಾಘಾತದಂತಹ ಈ ರಹಸ್ಯವನ್ನು ತಿಳಿದು ಕೊಂಡು ಭರ್ತೃಹರಿ ಕೆಲವು ದಿನ ಚಿಂತೆಯಲ್ಲೇ ಮುಳುಗಿದನು. ಒಂದು ದಿನ ನಡುರಾತ್ರಿಯಲ್ಲಿ ಸಿಂಹಾಸನವನ್ನೂ, ಸುಂದರ ರಾಜಧಾನಿಯನ್ನೂ ಬಿಟ್ಟು ಅರಣ್ಯಕ್ಕೆ ಹೋಗಿ ಮುನಿಯ ಹಾಗೆ ಶೇಷಾಯುಷ್ಯವನ್ನು ಕಳೆದನು ಭರ್ತೃಹರಿ.





ಹೀಗೆ ಸನ್ಯಾಸಿಯಾದ ರಾಜನು ಅನೇಕ ಗ್ರಂಥ ಗಳನ್ನು ಬರೆದನು. ಅವುಗಳಲ್ಲಿ ವೈರಾಗ್ಯ ಶತಕವೆಂಬ ನೂರು ಪದ್ಯಗಳಿರುವ ಗ್ರಂಥವೂ ಒಂದು. ಇದು ಜೀವನದಲ್ಲಿ ಇದಿರಾಗುವ ಪ್ರಲೋಭನ, ಭ್ರಾಂತಿ, ಭೇಷಜಗಳನ್ನೆಲ್ಲ ಎತ್ತಿ ತೋರಿಸಲು ಸಹಾಯಕವಾಗಿ ಅತ್ಯಂತ ಪ್ರಸಿದ್ಧವೆನಿಸಿದೆ.



# ಪ್ರತೀಕಾರ

ಆರನೇ ಶತಮಾನದಲ್ಲಿ ಮಹಮ್ಮದ್ ಪ್ರವಕ್ತರು ಸ್ಥಾಪಿಸಿದ ಇಸ್ಲಾಂ ಎಂಬ ನೂತನ ಮತವು ವಲಸೆ ಜಾತಿಯ ಬಿದೋಯಿನ್ನರನ್ನು ಐಕ್ಯಗೊಳಿಸಿತು. ಅವರ ನಂತರ ಇಸ್ಲಾಂ ಅಧಿನೇತರಾದವರು ಖಲೀಫರೆನಿಸಿ ಅನೇಕ ದೇಶಗಳನ್ನು ಜಯಿಸಿದರು. ಭಾಗ್ಯ ತುಂಬಿದ ಹಿಂದೂಸ್ಥಾನವನ್ನು ಕೂಡಾ ಜಯಿಸುವ ಇಚ್ಛೆ ಅವರಿಗಿತ್ತು.

ಇದಕ್ಕೆ ಬೇಗದಲ್ಲೇ ಅವರಿಗೊಂದು ಅವಕಾಶ ಲಭಿಸಿತು. ಲಂಕೆಯಿಂದ ಹೊರಟು ಸಿಂಧು ಸಮುದ್ರತೀರ ಪ್ರಾಂತದಲ್ಲಿ ಪ್ರಯಾಣಿಸುವ ನೌಕೆಗಳನ್ನು ಕಳ್ಳರು ಕೊಳ್ಳೆ ಹೊಡೆದರು. ಲಂಕೆಯ ರಾಜನು ಇರಾಕಿನಲ್ಲಿರುವ ಖಲೀಫರ ಪ್ರತಿನಿಧಿಯಾದ ಅಲ್ ಹಜಾಜನಿಗಾಗಿ ಕೊಟ್ಟ ಕೆಲವು ಬೆಲೆಬಾಳುವ ಕಾಣಿಕೆಗಳು ನೌಕೆಯಲ್ಲಿದ್ದುವು.





ಆಗ ಸಿಂಧುವನ್ನು ಪಾಲಿಸುವ ರಾಜನ ಹೆಸರು ದಾಹಿರ್. ಅವನಿಂದ ಖಲೀಫರು ನಷ್ಟಪರಿಹಾರ ಕೇಳಿದರು. ದಾಹಿರ್ ಅದನ್ನು ತಿರಸ್ಕರಿಸುತ್ತ ಸಮುದ್ರ ಚೋರರ ದಾಳಿಗೆ ತಾನು ಬಾಧ್ಯನಲ್ಲವೆಂದೂ, ನೌಕೆಗಳು ತಕ್ಕ ರಕ್ಷಣೆಯಲ್ಲಿ ಪ್ರಯಾಣಿಸಬೇಕಿತ್ತೆಂದೂ ಹೇಳಿದನು.



ಈ ಉತ್ತರವನ್ನು ಕೇಳಿದ ಕೂಡಲೇ ಅಲ್ ಹಜಾಜ್ ಸಿಂಧೂವನ್ನು ಜಯಿಸಲು ದೊಡ್ಡ ಸೈನ್ಯ ಕಳುಹಿಸಿದನು. ದೈಬಾಲ್ ಎಂಬಲ್ಲಿ ಭಯಂಕರ ಯುದ್ಧ ನಡೆಯಿತು. ಯುದ್ಧ ಸನ್ನದ್ಧನಾಗಿಲ್ಲದಿದ್ದರೂ ರಾಜಾ ದಾಹೀರನು ವೀರೋಚಿತವಾಗಿ ಹೋರಾಡಿ ಶತ್ರುಗಳನ್ನು ಓಡಿಸಿಬಿಟ್ಟನು. ಅನೇಕ ಸೇನಾನಿಗಳು ಸತ್ತರು.

ಸೋಲಿನ ಸಮಾಚಾರ ಕೇಳಿ ಅಲ್ ಹಜಾಜ್ ಅತ್ಯುಗ್ರನಾಗಿ, ಖಲೀಫರ ಸಹಾಯದಿಂದ ಮತ್ತಷ್ಟು ದೊಡ್ಡ ಸೈನ್ಯವನ್ನು ಸೇರಿಸಿ, ಸೇನಾ ನಾಯಕನಾಗಿ ತನ್ನ ಅಳಿಯ ಮಹಮ್ಮದ್ ಖಾಸೀಂನನ್ನು ನಿಯಮಿಸಿದನು. ಧೀರನೂ, ಯುದ್ಧ ಚತುರನೂ ಆದ ಇವನು ದೈಬಾಲಿನ ಮೇಲೆ ಮತ್ತೆ ದಾಳಿ ಇಟ್ಟನು.





ಧನಾಶೆಯವನಾದ ಕಾಕಾ ಕೋಟಾಲ್ ಎಂಬ ಸಾಮಂತನನ್ನು ಖಾಸೀಂ ತನ್ನ ಪಕ್ಷಕ್ಕೆ ಒಳಪಡಿಸಿಕೊಂಡನು. ದಾಹೀರ್ ರಾಜನಿಗೆ ಸೋಲು ಖಂಡಿತವೆಂದು ಜೋಯಿಸರು ಹೇಳಿರುವುದಾಗಿ ಕಾಕಾ ಕೋಟಾಲನು ಪ್ರಚಾರ ಪ್ರಾರಂಭಿಸಿದನು. ಆದರಿಂದ ದಾಹೀರನ ಸೈನಿಕರು ನಿರುತ್ಸಾಹಿಗಳಾದರು. ಕೆಲವು ಸೇನಾನಿಗಳು ಶತ್ರು ಪಕ್ಷಕ್ಕೆ ಸೇರಿದರು.

ರಾಜಾ ದಾಹೀರನು ಇಂತಹ ವಿಷಮ ಪರಿಸ್ಥಿತಿಗಳ ನಡುವೆ, ಶತ್ರುಗಳೊಂದಿಗೆ ವೀರೋಚಿತವಾಗಿ ಹೋರಾಡುತ್ತಾ, ಗಾಯಗೊಂಡನು. ವಿಶ್ವಾಸಿಗಳಾದ ಕೆಲಮಂದಿ ಸೈನಿಕರು ಅವನನ್ನು ಒಂದು ರಹಸ್ಯ ದ್ವಾರದ ಮೂಲಕ ಕೋಟೆಯೊಳಗೆ ಒಯ್ದರು. ಆದರೆ ಅಲ್ಲಿ ದಾಹೀರ್ ಸತ್ತನು. ಅವನ ಪತ್ನಿ ರಾಣೀಬಾಯಿ ಇದು ದುಃಖಕ್ಕೆ ಸಮಯವಲ್ಲವೆಂದುಕೊಂಡು ಶಕ್ತಿಯನ್ನು ಕೈಗೆತ್ತಿಕೊಂಡಳು.





ಅವಳು ಕೋಟೆಯ ಬುರುಜಿನ ಮೇಲೆ ನಿಂತು ಸೈನಿಕರನ್ನು ಉತ್ಸಾಹಪಡಿಸಿದಳು. ಆ ವಿಧವಾಗಿ ಶತ್ರುಗಳನ್ನು ಸ್ವಲ್ಪ ಹೊತ್ತು ತಡೆಯಲು ಸಾಧ್ಯವಾದರೂ, ಅಧಿಕ ಸಂಖ್ಯೆಯಲ್ಲಿದ್ದ ಶತ್ರುಗಳು ಕೋಟೆಯೊಳಗೆ ನುಗ್ಗಿದರು. ರಾಣೀಬಾಯಿ ಸೈನಿಕರನ್ನು ಹುರಿದುಂಬಿಸುತ್ತಾ, ಕೋಟೆಯ ಗೋಡೆಯ ಮೇಲಿನಿಂದ ಶತ್ರುಗಳ ಮೇಲೆ ಎಣ್ಣೆಯಲ್ಲಿ ಅದ್ದಿಸಿದ ಬೆಂಕಿ ದೊಂದಿಗಳನ್ನೂ, ಬಂಡೆ ಕಲ್ಲುಗಳನ್ನೂ ಹಾಕಿಸಿದಳು.

ಆದರೂ ಶತ್ರುಗಳು ಕೋಟೆಯೊಳಗಿನ ಒಂದೊಂದೇ ಭವನವನ್ನು ಆಕ್ರಮಿಸಿದರು. ಸೋಲು ತಪ್ಪದೆಂದುಕೊಂಡು ರಾಣೀಬಾಯಿ, ಅಂತಃಪುರ ಸ್ತ್ರೀಯರೊಂದಿಗೆ ಒಂದು ಕೋಣೆಯೊಳಗೆ ಪ್ರವೇಶಿಸಿದಳು. ಕೋಟೆಯನ್ನು ವಶಪಡಿಸಿಕೊಂಡ ಶತ್ರುಗಳು ಆ ಕೋಣೆಯೊಳಗೆ ಸುಟ್ಟು ಹೋದ ಸ್ತ್ರೀಯರ ಶವಗಳನ್ನಷ್ಟೇ ನೋಡಿದರು.





ಜಯಶಾಲಿಯಾದ ಮಹಮ್ಮದ್ ಖಾಸೀಂ ಸತ್ತುಳಿದ ದಾಹೀರ್ ರಾಜನ ಪೌರರು ಮೂವತ್ತು ಸಾವಿರ ಮಂದಿಯನ್ನು ಹಿಡಿದು ಗುಲಾಮರಾಗಿ ಇರಾಕ್ ದೇಶಕ್ಕೆ ಒಯ್ದನು. ಅವರಲ್ಲಿ ಚಿಕ್ಕವರಾದ ದಾಹೀರನ ಕುಮಾರಿಯರು ಇಬ್ಬರಿದ್ದರು. ಖಾಸೀಂ ಅವರನ್ನು ಖಲೀಫರಿಗೆ ಕಾಣಿಕೆಯಾಗಿ ಕಳುಹಿಸಿದನು.

ಆ ಯುವರಾಣಿಯರ ಸೌಂದರ್ಯವನ್ನು ನೋಡಿ ಮುಗ್ಧರಾದ ಖಲೀಫರು ಅವರನ್ನು ವಿವಾಹವಾಗಲು ನೋಡಿದರು. ಆದರೆ ಆ ಕುಮಾರಿಯರು ಅವರೊಂದಿಗೆ ಖಾಸೀಂ ತಮ್ಮನ್ನು ಈ ಮೊದಲೇ ವಿವಾಹ ಮಾಡಿಕೊಂಡಿರುವನೆಂದು ಹೇಳಿ ಬಿಟ್ಟರು. ಇದನ್ನು ಕೇಳಿ ಖಲೀಫರು ಅತ್ಯಂತ ಕೋಪದಿಂದ ಖಾಸೀಂನನ್ನು ಚರ್ಮದ ಚೀಲದಲ್ಲಿ ಬಿಗಿಸಿ ಕಟ್ಟಿ ತನ್ನ ಬಳಿಗೆ ತರುವಂತೆ ಭಟರಿಗೆ ಆಜ್ಞಾಪಿಸಿದರು.





ಭಟರು ಖಾಸೀಂನನ್ನು ಚರ್ಮದ ಚೀಲದಲ್ಲಿ ಗಾಳಿ ನುಸುಳದಂತೆ ಅದರ ಬಾಯಿಯನ್ನು ಹೊಲಿದು ಒಯ್ಯುತ್ತಿರಲು ದಾರಿಯಲ್ಲಿಯೇ ಅವನು ಸತ್ತನು. ಇದನ್ನು ಕೇಳಿ ದಾಹೀರನ ಕುಮಾರಿಯರು ಖಲೀಫರೊಂದಿಗೆ ಅವನು ತಮ್ಮನ್ನು ವಿವಾಹ ಮಾಡಿಕೊಳ್ಳಲಿಲ್ಲವೆಂದೂ, ತಮ್ಮ ತಂದೆತಾಯಿಯರನ್ನೂ ರಾಜ್ಯವನ್ನೂ ಧ್ವಂಸ ಮಾಡಿದುದಕ್ಕೆ ಅವನ ಮೇಲೆ ಹಾಗೆ ಹೇಳಿ ಹಗೆ ತೀರಿಸಿಕೊಂಡೆವೆಂದೂ ಹೇಳಿದರು. ಖಲೀಫರು ಇನ್ನಷ್ಟು ಕೋಪದಿಂದ ಅವರಿಬ್ಬರನ್ನೂ ಸಜೀವವಾಗಿ ಭೂಮಿಯಲ್ಲಿ ಹುಗಿಸಿಬಿಟ್ಟರು.



# ಗಜನೀಮಹಮ್ಮದನ ದಾಳಿಗಳು

ಅರಬ್ಬಿಗಳು ಸಿಂಧು ಪ್ರಾಂತವನ್ನು ಸ್ವಲ್ಪಕಾಲ ಮಾತ್ರ ಆಳಿದರೂ, ಅದು ಮತ್ತೊಂದು ವಿಧವಾಗಿ ಅವರಿಗೆ ದೊಡ್ಡ ಲಾಭಕಾರಣವಾಯಿತು. ಅವರು ಧನವನ್ನು ಮಾತ್ರವಲ್ಲ, ಭಾರತೀಯ ತತ್ವಶಾಸ್ತ್ರವನ್ನೂ, ವೈಜ್ಞಾನಿಕ, ಗಣಿತ ಸಾರಸ್ವತಗಳನ್ನೂ ಸಹ ತಮ್ಮೊಂದಿಗೆ ಒಯ್ದರು.

ಮಹೋನ್ನತವಾದ ಭಾರತದೇಶದ ವೈಭವವು ಅರಬ್ಬಿಗಳನ್ನು ಭ್ರಾಂತಗೊಳಿಸಿತು. ಕಲ್ಪಿತ ಕಥೆಗಳು, ನೀತಿ ಕಥೆಗಳು, ಇತಿಹಾಸಗಳು ಅವರಿಗೆ ಆತ್ಮಾನಂದವನ್ನಿತ್ತುವು. ಅವರ ಮೂಲಕ ಈ ಕಥಾ ಸಾಹಿತ್ಯವು ಸ್ವಲ್ಪ ಯೂರೋಪು ದೇಶಗಳನ್ನೂ ಸೇರಿತು.





ಖಲೀಫ ಹಾರೂನ್ ಅಲ್‌ರಷೀದನ ದರಬಾರಿನಲ್ಲಿ ಭಾರತದೇಶದ ಪಂಡಿತರಿಗೂ, ಜ್ಯೋತಿಶ್ಶಾಸ್ತ್ರವೇತ್ತರಿಗೂ, ಐಂದ್ರಜಾಲಿಕರಿಗೂ ತುಂಬಾ ಆದರವಿದ್ದಿತು. ಅರಬ್ ವಿದ್ವಾಂಸರು ಭಾರತದೇಶದ ಗಣಿತ ಶಾಸ್ತ್ರಗಳನ್ನು, ಮುಖ್ಯವಾಗಿ ಖಗೋಳ ಶಾಸ್ತ್ರವನ್ನು ಬಹಳ ಕುತೂಹಲದಿಂದ ಅಧ್ಯಯನ ಮಾಡುತ್ತಿದ್ದರು.



ಕ್ರಮವಾಗಿ ಸಿಂಧು ಪ್ರಾಂತದಲ್ಲಿ ಅರಬ್ಬಿಗಳ ಅಧಿಕಾರವು ಬಲಹೀನವಾಯಿತು. ಆದರೆ ಅವರು ಭಾರತೀಯರ ಧನಸಂಪತ್ತುಗಳ ಸಂಗತಿ ಮಾತ್ರ ಮರೆಯಲಿಲ್ಲ. ಹತ್ತನೆಯ ಶತಮಾನದಲ್ಲಿ ಖಲೀಫನ ಪ್ರತಿನಿಧಿಯಾಗಿ ಗಜನಿಯನ್ನು ಆಳುವ ಮಹಮ್ಮದ್, ತನ್ನನ್ನು ಸುಲ್ತಾನನೆಂದು ಪ್ರಕಟಿಸಿಕೊಂಡು ಭಾರತದೇಶದ ಮೇಲೆ ದಾಳಿ ಬಂದನು.

ಆ ಕಾಲದಲ್ಲಿ ಪಶ್ಚಿಮ ಪಂಜಾಬು ಪ್ರಾಂತವನ್ನು ಜಯಪಾಲನೆಂಬ ರಾಜನು ಪಾಲಿಸಿಕೊಂಡಿದ್ದನು. ಸುಲ್ತಾನ್ ಮಹಮ್ಮದನು ತನ್ನ ಸೈನಿಕರೊಂದಿಗೆ ಇಸ್ಲಾಂ ಮತದ ವ್ಯಾಪ್ತಿಗಾಗಿ ದಂಡಯಾತ್ರೆ ಮಾಡಬೇಕೆಂದು ಹೇಳಿ ಹುರಿದುಂಬಿಸಿ, ಜಯಪಾಲನ ರಾಜ್ಯದ ಮೇಲೆ ದಾಳಿ ಮಾಡಿದನು.





ಜಯಪಾಲನು ಪೆಶಾವರದ ಸಮೀಪದಲ್ಲಿ ಮಹಮ್ಮದನ ಸೈನ್ಯವನ್ನು ಇದಿರಿಸಿ ಸೋತು ಹೋದನು. ಈ ಅವಮಾನವನ್ನು ಸಹಿಸಲಾಗದೆ ಅವನು ಅಗ್ನಿಪ್ರವೇಶ ಮಾಡಿಕೊಂಡನು. ಅವನ ಕುಮಾರನಾದ ಆನಂದಪಾಲನು ಉಜ್ಜಯಿನಿ, ಗ್ವಾಲಿಯರ್, ಕಲಂಜರ್, ಕನೋಜಗಳ ರಾಜರನ್ನು ಒಂದು ಗೂಡಿಸಿ ಶತ್ರುಗಳು ಮತ್ತೆ ದಾಳಿ ಮಾಡಿದರೆ ಇದಿರಿಸಲು ಸನ್ನದ್ಧನಾದನು.

ಅಂದುಕೊಂಡ ಹಾಗೆ ಮಹಮ್ಮದ್ ಮತ್ತೊಂದುಸಾರಿ ದಾಳಿ ಬಂದನು. ಆನಂದಪಾಲನೂ, ಅವನ ಮಿತ್ರರಾಜರೂ ಮಹಮ್ಮದನನ್ನು ಅಟಕಾಯಿಸಿ, ಅತ್ಯಂತ ಸಾಹಸದಿಂದ ಹೋರಾಡ ತೊಡಗಿದರು. ಆಗ ಆನಂದಪಾಲನ ಆನೆಗೆ ಗಾಯವಾಗಿ, ಯುದ್ಧರಂಗದಿಂದ ಓಡಿ ಹೋಯಿತು. ಅದನ್ನು ನೋಡಿ ಮಿತ್ರರಾಜರು ಅವನು ಸೋತು ಹೋದನೆಂದುಕೊಂಡು ಯುದ್ಧರಂಗದಿಂದ ತಿರೋಗಮಿಸಿದರು.





ಈ ವಿಧವಾಗಿ ವಿಜಯ ಸಾಧಿಸಿದ ಮಹಮ್ಮದನು ಅನೇಕ ರಾಜ ಪ್ರಸಾದಗಳನ್ನೂ, ಪಟ್ಟಣಗಳನ್ನೂ, ದೇವಾಲಯಗಳನ್ನೂ ವಿಧ್ವಂಸ ಮಾಡಿದನು. ಅನೇಕ ಪ್ರಜೆಗಳನ್ನೂ ಬಲಿತೆಗೆದುಕೊಂಡನು. ಸ್ವಲ್ಪ ಮಾತ್ರ ವ್ಯವಧಿಯಲ್ಲೇ ಅವನು ಹದಿನೈದುಸಾರಿ ದಾಳಿ ಮಾಡಿ ಮುಲ್ತಾನ್, ಮಥುರಾ, ಕನೋಜ್ ಪಟ್ಟಣಗಳನ್ನು ನಾಶಮಾಡಿ ಅಪಾರವಾಗಿ ಅಮೂಲ್ಯವಾದ ಧನ ಸಂಪತ್ತುಗಳನ್ನು ದೋಚಿಕೊಂಡು ಹೋದನು.

ಅವನ ದುರಾಶೆ ಅವನ ಕ್ರೌರ್ಯಕ್ಕೂ, ಮತದುರಹಂಕಾರಕ್ಕೂ ಸರಿದೂಗುವಂತಿತ್ತು. ಪ್ರಭಾಸದಲ್ಲಿದ್ದ ಸೋಮನಾಥ ದೇವಾಲಯವು ಅಪಾರ ಧನ ಸಂಪತ್ತಿನಿಂದ ತುಂಬಿತ್ತು. ಅದನ್ನು ಕೇಳಿ ಮಹಮ್ಮದ್ ಅಲ್ಲಿಗೂ ದಾಳಿ ಪ್ರಾರಂಭಿಸಿದನು. ಆಗ ಗುಜರಾತನ್ನು ಪಾಲಿಸುವ ಚಾಳುಕ್ಯ ರಾಜರಿಗೆ ಅವನ ಕ್ರೂರವಾದ ದಂಡಯಾತ್ರೆಯನ್ನು ಎದಿರಿಸುವ ಶಕ್ತಿ ಸಾಲದೆ ಹೋಯಿತು.





ಅರ್ಚಕರು ಮಹಮ್ಮದನನ್ನು, ಕಡೇಪಕ್ಷ ಗರ್ಭಗುಡಿಯನ್ನಾದರೂ ನಾಶಮಾಡಬಾರದೆಂದು ಪ್ರಾರ್ಥಿಸಿದರು. ಆದರೆ ಅವನು ಅವರನ್ನು ಕೊಂದು ಗರ್ಭಗುಡಿಯನ್ನು ನೆಲಸಮಮಾಡಿ, ಅಡಗಿಸಿರುವ ಧನವನ್ನು ಹುಡುಕಿಸಿದನು.

ಎಷ್ಟೋ ವರ್ಷಗಳಿಂದ ಭಕ್ತರು ಆ ದೇವಾಲಯಕ್ಕೆ ಸಮರ್ಪಿಸಿದ ಬೆಲೆ ಬಾಳುವ ಕಾಣಿಕೆ ವಸ್ತುಗಳು ಅಲ್ಲಿಯ ಕೋಣೆಗಳಲ್ಲಿ ಅಡಗಿಸಲ್ಪಟ್ಟಿದ್ದುವು. ಅಷ್ಟೊಂದು ರತ್ನಗಳ, ಚಿನ್ನಗಳ ಧನಸಂಪತ್ತು ಕಣ್ಣಿಗೆಬಿದ್ದ ಕೂಡಲೇ ಮಹಮ್ಮದ್ ಬೆಕ್ಕಸ ಬೆರಗಾದನು. ಅವನು ಅದನ್ನೆಲ್ಲಾ ದೋಚಿಕೊಂಡು, ಆಲಯವನ್ನು ನೆಲಮಟ್ಟಮಾಡಲು ಸೈನಿಕರಿಗೆ ಆಜ್ಞೆ ಮಾಡಿದನು.





ಅಲ್ಲಿಂದ ಹಿಂದಿರುಗುವಾಗ ಅವನ ಪ್ರಯಾಣವು ಪ್ರಶಾಂತವಾಗಿರಲಿಲ್ಲ. ಯುದ್ಧ ಪ್ರಿಯರಾದ ಜಾಟರು ಅವನನ್ನು ದೊಂಬಿ ಯುದ್ಧಗಳಿಂದ ಹಿಂಡಿ ಹಿಪ್ಪೆ ಮಾಡಿದರು. ದೋಚಿಕೊಂಡ ಭಾರತದೇಶದ ಧನ ಸಂಪತ್ತಿನಿಂದ ವೈಭವವಾಗಿ ಜೀವಿಸುವ ಅವಕಾಶ ಅವನಿಗೆ ಲಭ್ಯವಾಗಲಿಲ್ಲ. ಬೇಗದಲ್ಲೇ ವ್ಯಾಧಿಗ್ರಸ್ತನಾಗಿ ಮಹಮ್ಮದನು ೧೦೩೦ ರಲ್ಲಿ ಸತ್ತು ಹೋದನು. ಅವನ ಕ್ರೌರ್ಯಗಳ ಗಾಯವು ಭಾರತದೇಶಕ್ಕೆ ಎಂದೂ ಮಾಯದಂತಹುದು.




# ಪೃಥ್ವೀರಾಜ ಮತ್ತು ಸಂಯುಕ್ತೆ–೧

ಹನ್ನೊಂದನೇ ಶತಮಾನದಲ್ಲಿ ಉತ್ತರ ಭಾರತ ದೇಶವನ್ನು ಮುಖ್ಯವಾದ ನಾಲ್ಕು ಹಿಂದೂ ರಾಜ ಕುಟುಂಬಗಳು ಪಾಲಿಸಿಕೊಂಡಿದ್ದುವು. ಢಿಲ್ಲಿ, ಗುಜರಾತ್, ಅಜ್ಮೀರ್, ಕನೋಜ್ ಎಂಬವು ರಾಜಧಾನೀನಗರಗಳಾಗಿ, ಸಾಂಸ್ಕೃತಿಕ, ವ್ಯಾಪಾರ ರಂಗಗಳಲ್ಲಿ ಉಚ್ಚಸ್ಥಿತಿಗೆ ಮುಟ್ಟಿದ್ದುವು.

ಪ್ರತಿಭಾವಂತನಾದ ಪೃಥ್ವೀರಾಜನು ಢಿಲ್ಲಿಯ ಪಾಲಕನಾಗಿದ್ದನು. ಅಜ್ಮೀರ್ ರಾಜನು ಪೃಥ್ವೀರಾಜನ ಮಾತಾಮಹನಾಗಿದ್ದ. ಆತನಿಗೆ ಮಕ್ಕಳಿಲ್ಲದ್ದರಿಂದ, ತನ್ನ ಅನಂತರ ರಾಜ್ಯಕ್ಕೆ ಪೃಥ್ವೀರಾಜನೇ ವಾರಸನಾಗಿರಬೇಕೆಂದು ಏರ್ಪಡಿಸಿ, ಮರಣಶಯ್ಯೆಯಲ್ಲಿ ಅವನನ್ನು ಆಶೀರ್ವದಿಸಿದನು.





ಕನೋಜದ ರಾಜನಾದ ಜಯಚಂದ್ರನು ಪೃಥ್ವೀರಾಜನ ಸೋದರಿಯ ಗಂಡ. ಅವನಿಗೆ ಅಜ್ಮೀರ್ ರಾಜ್ಯವನ್ನು ತನ್ನದಾಗಿ ಮಾಡಿಕೊಳ್ಳಬೇಕೆಂದು ಆಶೆ. ಆದರೆ ಪೃಥ್ವೀರಾಜನು ಮಹಾವೀರನೆಂಬ ಸಂಗತಿ ಗೊತ್ತಿರುವುದರಿಂದ ಏನೂ ಮಾಡದೆ ಸುಮ್ಮನಿದ್ದನು.



ಆನಂದೋತ್ಸಾಹಗಳಿಂದ ಅತಿ ವೈಭವದಲ್ಲಿ ಪೃಥ್ವೀರಾಜನಿಗೆ ಪಟ್ಟಾಭಿಷೇಕವಾಯಿತು. ಈಗ ಅವನು ವಿಸ್ತಾರವಾದ ಢಿಲ್ಲಿಗೂ ಅಜ್ಮೀರಿಗೂ ರಾಜ. ತನ್ನ ಸಾಮರ್ಥ್ಯದಿಂದ ಎಲ್ಲರೂ ಮೆಚ್ಚುವ ಹಾಗೆ ರಾಜ್ಯಭಾರ ಮಾಡ ತೊಡಗಿದನು.

ಅಫ್‌ಘನಿಸ್ತಾನದ ಗೋರೀ ಪ್ರಾಂತವನ್ನು ಆಳಿಕೊಂಡಿದ್ದ ಗೋರೀ ಮಹ್ಮದ್, ಢಿಲ್ಲಿಯನ್ನು ವಶಪಡಿಸಿಕೊಳ್ಳಬೇಕೆಂದು ಪ್ರಬಲ ಇಚ್ಛೆಯುಳ್ಳವನಾಗಿದ್ದನು. ಅವನು ಆರುಸಾರಿ ಢಿಲ್ಲಿಯ ಮೇಲೆ ದಂಡೆತ್ತಿ ಬಂದು, ಪ್ರತಿಸಾರಿಯೂ ಪೃಥ್ವೀರಾಜನ ಕೈಯಲ್ಲಿ ಪೂರ್ತಿ ಸೋತು ಓಡಿದ್ದನು. ಗೋರಿಯನ್ನು ಇದಿರಿಸುವಾಗ ಪೃಥ್ವೀರಾಜನಿಗೆ ಜಯಚಂದ್ರನ ಹೊರತು ಉಳಿದ ರಾಜಪುತ್ರ ರಾಜರೆಲ್ಲಾ ಸಹಾಯ ಮಾಡಿದ್ದರು.





ಒಂದುಸಾರಿ ಗೋರೀಮಹ್ಮದ್ ಪೃಥ್ವೀರಾಜನ ಕೈಗೆ ಬಂದಿಯಾಗಿ ಸಿಕ್ಕಿದಾಗ, ಪೃಥ್ವೀರಾಜನ ಸೇನಾನಾಯಕರು ಕೆಲವರು ಅವನಿಗೆ ಹೆಣ್ಣು ವೇಷ ಹಾಕಿಸಿ ಮೇನೆಯಲ್ಲಿ ಕೂಡಿಸಿ ಹಿಂದೆ ಕಳುಹಿಸಬೇಕೆಂದು ನೋಡಿದರು. ಹೀಗೆ ಗೋರಿ ಮಹ್ಮದನಿಗೆ ತುಂಬಾ ಅವಮಾನವಾಗಿತ್ತು.

ಪೃಥ್ವೀರಾಜನು ಅವನನ್ನು ಬಂಧಮುಕ್ತಮಾಡಿ ಇನ್ನೆಂದೂ ಇಂತಹ ದಾಳಿ ಮಾಡಬೇಡವೆಂದು ಒತ್ತಿ ಎಚ್ಚರಿಕೆಕೊಟ್ಟು ಕಳುಹಿಸಿದನು. ತಾನು ಕೊಲ್ಲಲ್ಪಡಬೇಕಾದ ಶತ್ರುವಾದರೂ ಕರುಣಿಸಿ ಬಿಟ್ಟುದಕ್ಕೆ ಗೋರೀಮಹ್ಮದ್ ಪೃಥ್ವೀರಾಜನಿಗೆ ತನ್ನ ಕೃತಜ್ಞತೆಯನ್ನು ಹೇಳಿಕೊಂಡನು.





ಕನೋಜದ ರಾಜನಾದ ಜಯಚಂದ್ರನಿಗೆ ಸಂಯುಕ್ತೆ ಎಂಬ ಕುಮಾರಿ ಇದ್ದಳು. ಅವಳು ಅಪೂರ್ವ ಸುಂದರಿಯಾಗಿದ್ದುದು ಮಾತ್ರವಲ್ಲದೆ, ಒಳ್ಳೆಯ ವಿದ್ಯಾವಂತಳಾಗಿಯೂ ಇದ್ದಳು. ದೇಶದಲ್ಲಿ ಅವಳನ್ನು ಕುರಿತು ತಿಳಿಯದ ರಾಜಕುಟುಂಬವೇ ಇರಲಿಲ್ಲ.

ಜಯಚಂದ್ರನು ಅವಳಿಗೆ ಸ್ವಯಂವರ ಮಾಡಬೇಕೆಂದು, ಪ್ರಕಟಪಡಿಸಿದನು. ಅದಕ್ಕಾಗಿ ಅವನು ಪೃಥ್ವೀರಾಜನಿಗೆ ಹೊರತು, ವಿವಾಹ ಯೋಗ್ಯರಾದ ಅನೇಕಮಂದಿ ರಾಜಕುಮಾರರಿಗೆ ಆಮಂತ್ರಣ ಕಳುಹಿಸಿದನು. ಪೃಥ್ವೀರಾಜನು ಅನೇಕ ವರ್ಷಗಳ ಹಿಂದೆ ಅಜ್ಮೀರಿನ ರಾಜ ಸೌಧದಲ್ಲಿ ಸಂಯುಕ್ತೆಯನ್ನು ನೋಡಿದ್ದನು. ಅಂದಿನಿಂದ ಅವನು ಅವಳನ್ನು ಮರೆಯಲಿಲ್ಲ.





ಸಂಯುಕ್ತೆಯ ಸ್ವಯಂವರಕ್ಕೆ ಎಲ್ಲ ಏರ್ಪಾಡುಗಳೂ ಪೂರ್ತಿಯಾದ ಸಮಯದಲ್ಲಿ ಆಕಸ್ಮಾತ್ತಾಗಿ ಸರಹದ್ದು ಪ್ರದೇಶದಲ್ಲಿ ಯುದ್ಧದ ಅಪಾಯವು ಸಂಭವಿಸಿತು. ಆಗ ಕೆಲವುಮಂದಿ ರಾಜಕುಮಾರರು ಕೇಳಿಕೊಂಡಂತೆ, ಜಯಚಂದ್ರನು ಕುಮಾರಿಯ ಸ್ವಯಂವರವನ್ನು ತಾತ್ಕಾಲಿಕವಾಗಿ ನಿಲ್ಲಿಸಿದನು. ಆ ಸಂಗತಿಯನ್ನು ನಗರವಾಸಿಗಳಿಗೆ ಡಂಗುರದ ಮೂಲಕವೂ, ಹೊರಗಿನ ಆಹ್ವಾನಿತರಿಗೆ ವಾರ್ತಾವಾಹಕರ ಮೂಲಕವೂ ತಿಳಿಯಪಡಿಸಿದನು.

ತನ್ನನ್ನು ಸ್ವಯಂವರಕ್ಕೆ ಆಹ್ವಾನಿಸದಿದ್ದುದನ್ನು ನೋಡಿ, ಜಯಚಂದ್ರನ ಮೇಲೆ ಪೃಥ್ವೀರಾಜನಿಗೆ ಬಹಳ ಕೋಪಬಂದಿತು. ಅವನು ತನ್ನ ವಿಶ್ವಾಸದ ವೃದ್ಧದಾಸಿಯೊಂದಿಗೆ ಸಂಯುಕ್ತೆಯ ಮೇಲೆ ತನಗಿರುವ ಪ್ರೇಮವನ್ನು ಕುರಿತು ಹೇಳಿದನು.





ಆ ದಾಸಿ, ಸಂಯುಕ್ತೆಗೆ ಪೃಥ್ವೀರಾಜನ ಮೇಲೆ ಆದರ ಭಾವನೆಗಳು ಬರುವ ಹಾಗೆ ಸಹಾಯ ಮಾಡುವೆನೆಂದು ಮಾತುಕೊಟ್ಟಳು. ಆ ಸಮಯಕ್ಕೆ ವರ್ತಕರ ಗುಂಪೊಂದು ಅಜ್ಮೀರಿಗೆ ಪ್ರಯಾಣ ಮಾಡುತ್ತಿದ್ದಿತು. ವೃದ್ಧ ದಾಸಿ ಆ ಪ್ರಯಾಣಿಕರೊಂದಿಗೆ ಸೇರಿ ಹೊರಟಳು.

(ಸಶೇಷ)



# ಪೃಥ್ವೀರಾಜ ಮತ್ತು ಸಂಯುಕ್ತೆ–೨

ವೃದ್ಧದಾಸಿ ಕನೋಜವನ್ನು ಸೇರಿ ಮೊದಲು ಸಂಯುಕ್ತೆಯ ಗೆಳತಿಯರ ಪರಿಚಯ ಮಾಡಿಕೊಂಡಳು. ಅವರು ಅವಳನ್ನು ಸಂಯುಕ್ತೆಯ ಬಳಿಗೆ ಕರೆದುಕೊಂಡು ಹೋದರು. ದಾಸಿಯ ಮಾತುಗಳೂ, ಒಳ್ಳೆಯ ತನವೂ ಸಂಯುಕ್ತೆಯನ್ನು ತುಂಬಾ ಆಕರ್ಷಿಸಿದುವು.

ಆ ದಾಸಿ ಸಂಯುಕ್ತೆಗೆ ಪರಿಚರ್ಯೆ ಮಾಡುವಾಗ ಸಮಯಸಾಧಿಸಿ ಪೃಥ್ವಿರಾಜನ ವೀರಕೃತ್ಯಗಳನ್ನು ಕುರಿತು ಹೇಳತೊಡಗಿದಳು. ಆದರಿಂದ ಕೆಲವು ದಿನಗಳಲ್ಲಿ ಸಂಯುಕ್ತೆಗೆ ಪೃಥ್ವಿರಾಜನ ಮೇಲೆ ಅನುರಾಗವೇರ್ಪಟ್ಟಿತು.






ದಾಸಿ ತನ್ನೊಂದಿಗೆ ಪೃಥ್ವೀರಾಜನ ಒಂದು ಚಿತ್ರಪಟವನ್ನೂ ತಂದು ಅಡಗಿಸಿಟ್ಟಿದ್ದಳು. ಒಂದು ದಿನ ಅದನ್ನು ತೋರಿಸಿದಾಗ, ಹಿಂದೆ ಎಂದೋ ತಾನು ಅವನನ್ನು ಅಜ್ಮೀರ ಭವನದಲ್ಲಿ ನೋಡಿದ ನೆನಪು ಸಂಯುಕ್ತೆಗಾಯಿತು. ಇನ್ನು ಅವನ ಹೊರತು ಬೇರೆಯಾರನ್ನೂ ಮದುವೆಯಾಗಲಾರೆನೆಂದು ನಿಶ್ಚಯಿಸಿಕೊಂಡಳು.



ರಾಜಾ ಜಯಚಂದ್ರನು ವಾರ್ತಾವಾಹಕರ ಮೂಲಕ, ವಿವಾಹಕ್ಕೆ ಯೋಗ್ಯರಾದ ರಾಜಕುಮಾರರಿಗೆ ಸಂಯುಕ್ತೆಯ ಸ್ವಯಂವರಕ್ಕೆ ಬರಬೇಕೆಂದು ಆಮಂತ್ರಣ ಕಳುಹಿಸಿದನು. ಕನೋಜನಗರದ ಪೌರರು ಸ್ವಯಂವರದ ದಿನವನ್ನು ಅತ್ಯುತ್ಸಾಹದಿಂದ ಇದಿರು ನೋಡತೊಡಗಿದರು.

ಸ್ವಯಂವರಕ್ಕೆ ಅನೇಕಮಂದಿ ರಾಜಕುಮಾರರು ಬಂದರು. ಸಂಯುಕ್ತೆ ಗೆಳತಿಯರ ಮೂಲಕವಾಗಿ, ಮಂತ್ರಿಯನ್ನು ವಿಚಾರಿಸಿ ಪೃಥ್ವೀರಾಜನಿಗೆ ಆಹ್ವಾನ ಕಳುಹಿಸಲಿಲ್ಲವೆಂಬುದನ್ನು ತಿಳಿದುಕೊಂಡಳು.





ಸಂಯುಕ್ತೆಯ ಗೆಳತಿಯರು ಜಯಚಂದ್ರನ ಬಳಿಗೆ ಬಂದು, ಪೃಥ್ವೀರಾಜನನ್ನು ಕೂಡಾ ಆಹ್ವಾನಿಸಬೇಕೆಂದು ಸಂಯುಕ್ತೆಯ ಬಯಕೆಯನ್ನು ತಿಳಿಸಿದರು. ಅದಕ್ಕೆ ಜಯಚಂದ್ರನು ಗೇಲಿಯಾಗಿ, "ಅವನು ಕೂಡಾ ಯಾವುದೋ ರೂಪದಲ್ಲಿ ಸ್ವಯಂವರಕ್ಕೆ ಬರುವಂತೆ ಮಾಡುತ್ತೇನೆ" ಎಂದನು. ತನ್ನ ತಂದೆಗೆ ಪೃಥ್ವೀರಾಜನ ಮೇಲಿರುವ ಕೋಪವನ್ನು ತಿಳಿದ ಸಂಯುಕ್ತೆ, ಚಿಂತಾಕ್ರಾಂತಳಾದಳು.

ಗೆಳತಿಯರೊಂದಿಗೆ ಸ್ವಯಂವರ ಮಂಟಪ ದೊಳಗೆ ಬರುತ್ತ ಸಂಯುಕ್ತೆ ದ್ವಾರದ ಹತ್ತಿರ ಇದ್ದ ಪೃಥ್ವೀರಾಜನ ಪ್ರತಿಮೆಯನ್ನು ನೋಡಿದಳು. ಅದು ದ್ವಾರಪಾಲಕನ ದುಸ್ತಿನಲ್ಲಿ ಕಾಣುತ್ತಿದ್ದಿತು. ಸಂಯುಕ್ತೆ ಕ್ಷಣಮಾತ್ರ ಬೆರಗಾಗಿ, ಮರುಕ್ಷಣದಲ್ಲಿ ಯಾವುದೋ ಒಂದು ದೃಢ ನಿಶ್ಚಯಕ್ಕೆ ಬಂದಳು.





ವಲಯಾಕಾರದಲ್ಲಿರುವ ಸ್ವಯಂವರ ಮಂಟಪ ದಲ್ಲಿ ಆಸೀನರಾಗಿದ್ದ ರಾಜಕುಮಾರರು ಮಂದ ಹಾಸ ಬೀರಿಕೊಂಡಿದ್ದರು. ಅವರು ಯಾರೆಂದು ಪ್ರಧಾನ ಸಖಿ ಸಂಯುಕ್ತೆಗೆ ಹೇಳುತ್ತಿದ್ದಳು. ಹೀಗೆ ಸಂಯುಕ್ತೆ ವರಮಾಲೆಯೊಂದಿಗೆ ವಲಯ ದಲ್ಲಿ ಒಂದು ಸುತ್ತು ಬಂದಳು. ಯಾರಿಗೂ ಮಾಲೆ ಹಾಕಲಿಲ್ಲ.

ಸ್ವಯಂವರ ಮಂಟಪದಿಂದ ಸಂಯುಕ್ತೆ ಹೊರಗೆ ಹೋಗುವುದನ್ನು ನೋಡಿ ಎಲ್ಲರೂ ಆಶ್ಚರ್ಯ ಪಡತೊಡಗಿದರು. ಯಾರಿಗೂ ಕಾರಣ ಅರ್ಥ ವಾಗಲಿಲ್ಲ. ಅಷ್ಟರಲ್ಲಿ ಸಂಯುಕ್ತೆ ದ್ವಾರದಲ್ಲಿದ್ದ ಪೃಥ್ವೀರಾಜನ ಪ್ರತಿಮೆಯ ಕೊರಳಿಗೆ ವರಮಾಲೆ ಹಾಕಿ ನಮಸ್ಕರಿಸಿದಳು.





ಮರುಕ್ಷಣದಲ್ಲಿ ಯಾರೂ ಊಹಿಸದ ಸಂಘಟನೆ ನಡೆಯಿತು. ಅಲ್ಲಿದ್ದ ಪ್ರೇಕ್ಷಕರ ಹಿಂಗಡೆಯಿಂದ ಕುದುರೇ ಸವಾರನೊಬ್ಬ ಮಿಂಚಿನ ವೇಗದಲ್ಲಿ ಕುದುರೆಯಿಂದಿಳಿದು, ಸಂಯುಕ್ತೆಯ ಮುಂದೆ ಬಂದು ಅವಳೊಂದಿಗೆ ಏನೋ ಹೇಳಿದನು. ಸಂಯುಕ್ತೆ ಮುಗುಳು ನಕ್ಕು ತಲೆಯಾಡಿಸಿದಳು.

ಎಲ್ಲರೂ ಮೆಟ್ಟಿ ಬಿದ್ದದ್ದು ನೋಡುವುದ ರೊಳಗೆ, ಸಂಯುಕ್ತೆ ಕುದುರೆಯ ಮೇಲೇರಿ ಕುಳಿತಳು. ಅವಳ ಹಿಂದೆಯೇ ಒಂದೇ ಹಾರಿಕೆಗೆ ಸವಾರನೂ ಏರಿ ಕುಳಿತನು. ಅವನು ಮಾರುವೇಷದಲ್ಲಿದ್ದ ಪೃಥ್ವೀರಾಜನೇ ! ಜನರು ಎಚ್ಚೇಳುವುದರೊಳಗೆ ಪೃಥ್ವೀರಾಜನು ಸಂಯುಕ್ತೆಯೊಂದಿಗೆ ಆ ಪ್ರದೇಶ ದಿಂದ ಹೊರಟುಹೋದನು.





ಜಯಚಂದ್ರನು ಹಿಡಿಸಲಾಗದಷ್ಟು ಕೋಪದಿಂದ "ಅವರಿಬ್ಬರನ್ನೂ ಬಂಧಿಸಿರಿ !" ಎಂದು ಕೂಗಿದನು. ರಾಜಾಜ್ಞೆಯಿಂದ ಅನೇಕ ಮಂದಿ ಅಶ್ವಿಕರು ಓಡಿಹೋಗುವ ಪೃಥ್ವೀರಾಜನನ್ನು ಬೆಂಬತ್ತಿದರು. ಭಾರೀ ಕೋಲಾಹಲವೆದ್ದಿತು. ಸಂಯುಕ್ತೆ ಭಯದಿಂದ ಕಂಪಿಸಿದಳು.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ)



## ಪೃಥ್ವೀರಾಜ ಮತ್ತು ಸಂಯುಕ್ತೆ–೩

ಪೃಥ್ವೀರಾಜನ ಮಿತ್ರನೂ, ಆಸ್ಥಾನ ಕವಿಯೂ ಆದ ಚಾಂದನು ತನ್ನ ಯಜಮಾನನನ್ನು ಕೂಡಿಕೊಂಡನು. ಅವರಿಬ್ಬರೂ ಮಾರುವೇಷದಲ್ಲಿ ಕನೋಜಕ್ಕೆ ಬಂದರು. ಜಯಚಂದ್ರನ ಅಶ್ವಿಕರು ಅವರನ್ನು ಹಿಡಿಯುವ ಪ್ರಯತ್ನದಲ್ಲಿ ವಿಫಲರಾಗಿಹೋದರು.

ಕನೋಜರಾಜ್ಯದ ಸರಿಹದ್ದಿನಲ್ಲಿ ಪೃಥ್ವೀರಾಜನ ಮಿಂಚಿನ ವೇಗದ ಸೈನಿಕರು ಅಡಗಿಕೊಂಡಿದ್ದರು. ಪೃಥ್ವೀರಾಜನೂ ಸಂಯುಕ್ತೆಯೊಂದಿಗೆ ಸರಿಹದ್ದು ದಾಟಿದ ಕೂಡಲೇ, ಅವರು ಹೊರಬಿದ್ದು ಜಯಚಂದ್ರನ ಅಶ್ವಿಕರನ್ನು ಇದಿರಿಸಿ ಹೊಡೆದು ಸೋಲಿಸಿ ಓಡಿಸಿದರು.





ಈ ಸಂಘಟನೆಯಿಂದ ತನ್ನ ಆತ್ಮಗೌರವವು ಹೋಯಿತೆಂದು ಜಯಚಂದ್ರನು ಭಾವಿಸಿ ಒಳಳವಾಗಿ ಕುಂದಿದನು. ಹಗಲೂ ರಾತ್ರಿ ಪೃಥ್ವೀರಾಜನ ಮೇಲೆ ಹೇಗೆ ಹಗೆ ತೀರಿಸುವುದೆಂದೇ ಅವನ ಯೋಚನೆಯಾಯಿತು. ಅವನು ಎಷ್ಟೇ ಕೇಳಿಕೊಂಡರೂ ಬೇರೆ ರಾಜಪುತ್ರರು ಪೃಥ್ವೀರಾಜನ ಮೇಲೆ ಯುದ್ಧಕ್ಕೆ ಒಪ್ಪಲಿಲ್ಲ.



ಈ ಪರಿಸ್ಥಿತಿಯಲ್ಲಿ, ಜಯಚಂದ್ರನಿಗೆ ವಿನಾಶ ಕಾರಿಯಾದ ದುರ್ಬುದ್ಧಿ ಹುಟ್ಟಿತು. ಡಿಲ್ಲಿಯ ಮೇಲೆ ದಾಳಿಮಾಡುವೆಯಾದರೆ ಅದಕ್ಕೆ ತಾನು ಸಹಾಯ ಮಾಡುವೆನೆಂದು, ಅವನು ಗೋರೀ ಮಹಮ್ಮದನಿಗೆ ತಿಳಿಯಪಡಿಸಿದನು. ಮಹಮ್ಮ ದನಿಗಾದ ಸಂತೋಷ ಹೇಳಿ ತೀರದು. ಜಯ ಚಂದ್ರನ ಸಹಾಯದಿಂದ ಡಿಲ್ಲಿಯನ್ನು ಜಯಿ ಸುವ ಆಶೆಯೂ ತವಕವೂ ಅವನಲ್ಲಿ ಉಕ್ಕಿತು.

ಡಿಲ್ಲಿಯಲ್ಲಿ ಪೃಥ್ವೀರಾಜನು ಸಂಯುಕ್ತೆಗಾಗಿ ನೂತನ ಭವನವನ್ನು ಕಟ್ಟಿಸಿದನು. ಅವರಿಬ್ಬರಿಗೂ ಸುಖವಾಗಿ ಕಾಲ ಕಳೆಯುತ್ತಿದ್ದಿತು. ಯುದ್ಧದ ಭಯವೇನೂ ಇಲ್ಲದುದರಿಂದ ಪೃಥ್ವೀರಾಜನು ಪ್ರಜೆಗಳಿಗೆ ಹಿತಕರವಾದ ಒಳ್ಳೊಳ್ಳೆಯ ಕಾರ್ಯ ಕ್ರಮಗಳನ್ನು ಪ್ರಾರಂಭಿಸಿದನು.





ಅವನು ಸ್ವಲ್ಪವೂ ಊಹಿಸಿರದಂತೆ ಗೋರೀ ಮಹಮ್ಮದ್ ಮತ್ತು ಜಯಚಂದ್ರನ ಸೈನ್ಯಗಳು ಡಿಲ್ಲಿಯ ಮೇಲೆ ದಾಳಿಮಾಡಲು ಹೊರಟುವು. ಆ ಸೈನಿಕರು ದಾರಿಯಲ್ಲಿದ್ದ ಗ್ರಾಮಗಳನ್ನು ಸುಟ್ಟರು. ಸರಿಹದ್ದಿನಲ್ಲಿದ್ದ ರಕ್ಷಣೆಯ ಸೈನಿಕರೂ ಪ್ರಜೆಗಳೂ .ಆಶ್ಚರ್ಯಪಟ್ಟರು.

ಗಡಿರಕ್ಷಕ ಸೈನಿಕರು ದಿಲ್ಲಿಗೆ ಓಡಿಬಂದು, ಶತ್ರುಗಳ ಆಗಮನವನ್ನು ಕುರಿತು ಪೃಥ್ವೀರಾಜನೊಂದಿಗೆ ಹೇಳಿದರು. ಅವನು ಆಕೂಡಲೇ ತನ್ನ ಸೈನ್ಯವನ್ನು ಸೇರಿಸಿ ಯುದ್ಧಸನ್ನದ್ಧವಾಗುವಂತೆ ಮಾಡಿದನು.





ಸಂಯುಕ್ತೆ ಸ್ವತಃ ಪೃಥ್ವಿರಾಜನ ತಲೆಯಮೇಲೆ ಶಿರಸ್ತ್ರಾಣವಿಟ್ಟು ಅಲಂಕರಿಸಿದಳು. ಅವನು ಅವಳಿಗೆ ವಿದಾಯ ಹೇಳಿ ಶತ್ರುಗಳನ್ನು ಇದಿರಿಸಲು ಹೊರಟನು. ಆಗ ಶತ್ರುಗಳು ನಗರದ ಪಕ್ಕಕ್ಕೇ ಬಂದಿದ್ದರು.

ಅಷ್ಟು ಬೇಗದಲ್ಲಿ ಶತ್ರುಗಳು ನಗರವನ್ನು ಸಮೀಪಿಸುವರೆಂದು ಯಾರೂ ಊಹಿಸಿರಲಿಲ್ಲ. ಪೃಥ್ವೀರಾಜನು ಸೈನಿಕರನ್ನು ಉತ್ಸಾಹಪಡಿಸಿ ಶತ್ರುವನ್ನು ಇದಿರಿಸಿದನು.





ಪೃಥ್ವೀರಾಜನ ಸೈನಿಕರು ತುಂಬಾ ಧೈರ್ಯ ಸಾಹಸಗಳಿಂದ ಹೋರಾಡಿದರೂ, ಜಯಚಂದ್ರ ಮತ್ತು ಗೋರೀ ಮಹಮ್ಮದರ ಐಕಮತ್ಯದ ಸೈನಿಕ ಸಂಖ್ಯೆ ಅವರಿಗಿಂತ ಎಷ್ಟೋ ಪಾಲು ಹೆಚ್ಚು. ಪೃಥ್ವೀರಾಜನು ಯುದ್ಧದಲ್ಲಿ ಗಾಯಗೊಂಡು ಬಿದ್ದು ಸತ್ತನು.

ಈ ದುರ್ವಾರ್ತೆ ಸ್ವಲ್ಪ ಹೊತ್ತಿನೊಳಗೆ ಸಂಯುಕ್ತೆಗೆ ಸೇರಿತು. ಅವಳು ಆತ್ಮ ತ್ಯಾಗ ಮಾಡಿಕೊಳ್ಳಲು ಅಗ್ನಿಕುಂಡವನ್ನು ಸಿದ್ಧಮಾಡಿಸಿದಳು. ಬಳಿಕ ಪೃಥ್ವೀರಾಜನ ಚಿತ್ರಪಟಕ್ಕೆ ಹೂ ಮಾಲೆಗಳನ್ನು ಹಾಕಿ, ಅಗ್ನಿಪ್ರವೇಶ ಮಾಡಿದಳು.





ಪೃಥ್ವೀರಾಜನ ಮರಣದಿಂದ ಢಿಲ್ಲಿಯಲ್ಲಿ ಹಿಂದೂ ಪರಿಪಾಲನೆ ಅಂತರಿಸಿ ಹೋಯಿತು. ತಾನು ಸಾಧಿಸಿದ ವಿಜಯಕ್ಕೆ ಸಂತೋಷಪಡಲು ಜಯಚಂದ್ರನಿಗೆ ಹೆಚ್ಚು ಸಮಯದಕ್ಕಲಿಲ್ಲ. ಮಾರನೆಯ ವರ್ಷದಲ್ಲೇ ದುರಾಶಾಪರನಾದ ಗೋರೀ ಮಹಮ್ಮದ್ ಕನೋಜದ ಮೇಲೆ ದಾಳಿ ಮಾಡಿದನು. ಅವನ ಸೇನಾನಾಯಕನಾದ ಕುತ್ಬುದ್ದೀನ್ ನಿರ್ದಾಕ್ಷಿಣ್ಯವಾಗಿ ಜಯಚಂದ್ರನನ್ನು ಕೊಂದುಬಿಟ್ಟನು.

# ಸುಲ್ತಾನಾ ರಜಿಯಾ



ಟರ್ಕೀದೇಶದ ಒಂದು ಬೆಟ್ಟದ ಕಣಿವೆಯಲ್ಲಿ ಕೆಲವು ಯುವಕರು ಆಟ ಆಡಿಕೊಂಡಿದ್ದರು. ಅವರಲ್ಲಿ ಒಬ್ಬನು ಉಳಿದವರಿಗಿಂತ ಬಹಳ ಚಿಕ್ಕವನು. ಆ ಸಮಯದಲ್ಲಿ ವರ್ತಕರ ವಲಸೆಯ ತುಕಡಿಯೊಂದು ಆ ಪ್ರದೇಶಕ್ಕೆ ಬಂತು. ದೊಡ್ಡ ಹುಡುಗರು ಆ ಚಿಕ್ಕ ಹುಡುಗನನ್ನು ಹಿಡಿದು ಎಳೆದೊಯ್ದು ಆ ವರ್ತಕರಲ್ಲಿ ಒಬ್ಬನಿಗೆ ಮಾರಿಬಿಟ್ಟರು.

ಸ್ವಲ್ಪ ಕಾಲ ಕಳೆದ ಮೇಲೆ ಆ ಗುಲಾಮ ಹುಡುಗನ ಕಷ್ಟಗಳಿಗೆ ಕನಿಕರಗೊಂಡವನೊಬ್ಬ ತಾನೇ ಅವನನ್ನು ಕೊಂಡುಕೊಂಡನು. ಈ ಕೊಂಡುಕೊಂಡವನು, ಘೋರೀ ಮಹಮ್ಮದನ ಪ್ರಧಾನ ಗುಲಾಮ. ಘೋರಿಯ ಮರಣಾ ನಂತರ ಅವನೇ ದಿಲ್ಲಿಯ ಪಾಲಕನಾಗಿ ಪಟ್ಟವೇರಿದನು. ಕುತುಬುದ್ದೀನ್ ಐಬಕ್ ಹೆಸರಿನಿಂದ ಅವನು ಪ್ರಸಿದ್ಧನಾದನು.






ಹೀಗೆ ಎರಡು ಸಾರಿ ಗುಲಾಮನಾಗಿ ಮಾರಲ್ಪಟ್ಟ ಹುಡುಗನ ಹೆಸರು ಇಲ್ಟುಮಷ್. ಅವನನ್ನು ಗುಲಾಮರ ಗುಲಾಮ ಎನ್ನುತ್ತಿದ್ದರು. ಒಂದು ಸಾರಿ ಅವನು ತನ್ನ ಯಜಮಾನನನ್ನು ಕೊಲೆಯ ಗಂಡದಿಂದ ತಪ್ಪಿಸಿದನು. ಈ ಕಾರಣದಿಂದ ಇಲ್ಟುಮಷನ ಮೇಲೆ ಐಬಕನಿಗೆ ತುಂಬಾ ವಾತ್ಸಲ್ಯ ವಾಯಿತು. ಕೆಲವು ವರ್ಷಗಳ ಮೇಲೆ ಇಲ್ಟುಮಷ್, ಕುತುಬುದ್ದೀನ್ ಐಬಕನ ಕುಮಾರಿಯನ್ನು ವಿವಾಹವಾದನು.



ಐಬಕನ ಮರಣಾನಂತರ ರಾಜ್ಯವು ಅರಾಜಕವಾಯಿತು. ಇಲ್ಬಮಷ್ ಸಿಂಹಾಸನವನ್ನು ಆಕ್ರಮಿಸಿಕೊಂಡು, ತನಗೆ ಇದಿರು ತಿರುಗಿದ ಗಜನೀ ಪಾಲಕನಾದ ತಾಜುದ್ದೀನನನ್ನೂ, ಕೆಲಮಂದಿ ಅಮೀರರನ್ನೂ ಸೋಲಿಸಿಬಿಟ್ಟನು. ಈ ವಿಧವಾಗಿ ಅವನು ಬಂಡಾಯವೆದ್ದವರನ್ನು ಅಡಗಿಸಿ, ತನ್ನ ಅಧಿಕಾರವನ್ನು ಸುಸ್ಥಿರ ಗೊಳಿಸಿಕೊಂಡನು.

ಕ್ರಿ. ಶ. ೧೨೩೨ ರ ಕಾಲದಲ್ಲಿ ಇಲ್ಬಮಷ್‌ನು ಕುತುಬ್‌ಮಿನಾರ್ ನಿರ್ಮಾಣವನ್ನು ಪೂರ್ತಿಗೊಳಿಸಿದನು. ಇದು ನೋಡುವವರನ್ನು ಬೆರಗುಗೊಳಿಸುವಂತಹ ಗೋಪುರದಂತೆ ಎತ್ತರವಾದ ಕಟ್ಟಡ. ಮುಸ್ಲಿಂ ಮತಗುರುವಾದ ಖ್ವಾಜಾ ಕುತುಬುದ್ದೀನನ ಸಮಾಧಿಯ ಮೇಲೆ ಇದರ ನಿರ್ಮಾಣ ಜರುಗಿತೆಂದು ಹೇಳುವರು.





ತನ್ನ ಮರಣದ ಸಮಯದಲ್ಲಿ ಇಲ್ಬಮಷ್ ಯಾರೂ ಊಹಿಸದ ವಿಧದಲ್ಲಿ ತನ್ನ ಕುಮಾರರಿಗೆ ಬದಲಾಗಿ ಕುಮಾರಿ ರಜಿಯಾಳೇ ಪರಿಪಾಲಕಳಾಗಿರಬೇಕೆಂದು ಪ್ರಕಟಿಸಿದನು. ಅವನ ಕುಮಾರರು ನಿರುಪಯೋಗಿಗಳು. ರಜಿಯಾ ಕ್ರಮ ಶಿಕ್ಷಣ ಪಡೆದವಳು. ವಿವೇಕವತಿಯೂ ಹೌದು.

ಇಲ್ಟುಮಿಷ್‌ನ ನಿರ್ಣಯವು ಆ ಕಾಲದ ಸಾಮಾಜಿಕ ಪರಿಸ್ಥಿತಿಗಳಿಗೆ ಅನುಗುಣವಾದುದಲ್ಲ. ಅಮೀರರೂ ಇತರ ಮುಖ್ಯಸ್ಥರೂ ಸ್ತ್ರೀಯನ್ನು ಪರಿಪಾಲಕಳೆಂದು ಅಂಗೀಕರಿಸುವ ಸ್ಥಿತಿಯಲ್ಲಿರಲಿಲ್ಲ. ಅಲ್ಟುಮಿಷ್‌ನು ಸತ್ತಕೂಡಲೇ ಅವರು ರಜಿಯಾಳನ್ನು ಪದವಿಯಿಂದ ತೊಲಗಿಸಿಬಿಟ್ಟರು.





ಅವರ ದೃಷ್ಟಿ ರಜಿಯಾಳ ಸವತಿ ತಮ್ಮನಾದ ರುಕ್ನುದ್ದೀನನ ಮೇಲೆ ಬಿದ್ದಿತ್ತು. ಅವನನ್ನು ಡಿಲ್ಲಿಯ ಸುಲ್ತಾನನಾಗಿ ಗದ್ದುಗೆಗೇರಿಸಿದರು. ಇವನು ಅವಿವೇಕಿ. ಸ್ವೇಚ್ಛಾಚಾರಿ. ತಾನು ಸುಲ್ತಾನನಾದೆನೆಂಬ ಉತ್ಸಾಹದಲ್ಲಿ, ಡಿಲ್ಲಿಯ ಬೀದಿಗಳಲ್ಲಿ ಆನೆಯ ಮೇಲೆ ಮೆರವಣಿಗೆ ಹೋಗುತ್ತ, ಪ್ರಜೆಗಳ ಮೇಲೆ ಮುಷ್ಟಿ ಮುಷ್ಟಿಯಾಗಿ ಬೆಳ್ಳಿ, ಬಂಗಾರಗಳ ನಾಣ್ಯಗಳನ್ನು ಉದ್ದಕ್ಕೂ ಚೆಲ್ಲಿದನು.

ರುಕ್ನುದ್ದೀನನ ತಾಯಿಯಾದ ಷಾತುರ್ಕಾನ್ ಇಲ್ಟುಮಿಷ್‌ನ ಹೆಂಡತಿಯರಲ್ಲಿ ಒಬ್ಬಳು. ಅವಳು ಬಹಳ ಕ್ರೂರಳು. ಮಗನು ಆಟಪಾಟಗಳಲ್ಲಿ ಮುಳುಗಿ ತೇಲುವಾಗ, ಅವಳು ಅಧಿಕಾರವನ್ನು ತನ್ನ ಹಸ್ತಗತಮಾಡಿಕೊಂಡು ಇಲ್ಟುಮಿಷ್‌ನ ಹೆಂಡತಿಯರಲ್ಲಿ ಕೆಲವರನ್ನು ಕೊಲ್ಲಿಸಿ, ಉಳಿದವರನ್ನು ಸೆರೆಯಲ್ಲಿಡಿಸಿದಳು.





ಈ ಷಾತುರ್ಕಾನಳು ರಾಜವಂಶದ ಸಮರ್ಥನೂ ಬುದ್ಧಿವಂತನೂ ಆದ ಸವತಿಯ ಒಬ್ಬನೇ ಮಗನನ್ನು ಕಣ್ಣು ಕೀಳಿಸಿ ಆ ಮೇಲೆ ಕೊಲ್ಲಿಸಿದಳು. ರಜಿಯಾಳನ್ನು ಕೊಲ್ಲಿಸಲಿಕ್ಕೂ ಯೋಜನೆ ಹಾಕಿದಳು. ಈ ಸಂಗತಿಯನ್ನು ತಿಳಿದೂ ಕೂಡಾ ಏನು ಮಾಡಲಿಕ್ಕೂ ರಜಿಯಾಳಿಗೆ ಸಾಧ್ಯವಾಗಲಿಲ್ಲ.

ಷಾತುರ್ಕಾನ್, ರುಕ್ಮುದ್ದೀನರ ದುಷ್ಕಾರ್ಯಗಳಿಂದ ಪ್ರಜೆಗಳಲ್ಲಿ ಅತೃಪ್ತಿ ದೊಡ್ಡದಾಗಿ ಕೆರಳಿಕೊಂಡಿತು. ಅವರಿಬ್ಬರನ್ನು ಬಲಪಡಿಸುವ ಸರದಾರರು ಕೂಡಾ ಪ್ರಜೆಗಳ ಆಗ್ರಹಾವೇಶಕ್ಕೆ ಹೆದರಿ ಬದಿಗೆ ತಪ್ಪಿಸಿಕೊಂಡರು. ಷಾತುರ್ಕಾನ್ ಸೆರೆ ಮನೆಯನ್ನು ಸೇರಬೇಕಾಯಿತು. ಅವಳ ಮಗನು ಸಿಂಹಾಸನದಿಂದ ಚ್ಯುತನಾಗಿ, ಕಡೆಗೆ ಕೊಲೆಯಿಂದ ತೀರಿದನು.





ಈ ಅರಾಜಕ ಪರಿಸ್ಥಿತಿಯಲ್ಲಿ ರಜಿಯಾ ಒಬ್ಬಳ ಹೊರತು, ಪ್ರಜೆಗಳನ್ನು ಸಂತೃಪ್ತಿ ಪಡಿಸಬಲ್ಲವರು ಬೇರೆ ಯಾರೂ ಇರಲಿಲ್ಲ. ಅವಳ ತಂದೆಯ ವೀಲುನಾಮೆಯ ಸಂಗತಿ ಪ್ರಜೆಗಳಿಗೆ ಗೊತ್ತಿತ್ತು. ಪ್ರಜೆಗಳು ರಜಿಯಾಳನ್ನೇ ಸಿಂಹಾಸನವೇರಬೇಕೆಂದು ಕೇಳಿಕೊಂಡರು. ಈ ಪರಿಸ್ಥಿತಿಯಲ್ಲಿ ಅಮೀರರೂ, ಇತರ ಮುಖ್ಯಸ್ಥರೂ ಅವಳನ್ನು ಬಲಪಡಿಸಲೇ ಬೇಕಾಯಿತು. ಹೀಗೆ ಅವಳು ಸುಲ್ತಾನಾ ರಜಿಯಾ ಎಂದು ಢಿಲ್ಲಿಯ ಪರಿಪಾಲಕಳಾಗಿ ಸಿಂಹಾಸನವೇರಿದಳು.



## ಮುಹಮ್ಮದ್-ಬಿನ್-ತುಗ್ಲಕ್

ಕ್ರಿ. ಶ. ೧೩೨೦ ರಲ್ಲಿ ಢಿಲ್ಲಿಯ ಅಧಿಕಾರವು ತುಗ್ಲಕ್ ವಂಶ ಸ್ಥಾಪಕನಾದ ಘಿಯಾಜುದ್ದೀನನ ಕೈವಶವಾಯಿತು. ಅವನು ಸಿಂಹಾಸನವನ್ನು ಅಧಿಷ್ಠಿಸುವಾಗ ವೃದ್ಧನಾಗಿದ್ದನು. ಅವನು ಬಂಗಾಳದಿಂದ ಹಿಂದಿರುಗುತ್ತಿದ್ದಾಗ, ಅವನನ್ನು ಸ್ವಾಗತಿಸಲು ಢಿಲ್ಲಿಗೆ ಸಮೀಪದಲ್ಲಿ ಅಲಂಕರಿಸಲ್ಪಟ್ಟ ದ್ವಾರ ತೋರಣದ ಏರ್ಪಾಡಾಗಿತ್ತು.

ಘಿಯಾಜುದ್ದೀನ್ ಢಿಲ್ಲಿಗೆ ಸಮೀಪಿಸುತ್ತಿದ್ದಾಗ, ನಿಜಾಮುದ್ದೀನ್ ಎಂಬ ಪ್ರಸಿದ್ಧ ಫಕೀರನೊಬ್ಬನು "ಸುಲ್ತಾನನಿಗೆ ಢಿಲ್ಲಿ ಇನ್ನೂ ಬಹಳದೂರದಲ್ಲಿದೆ" ಎಂದು ಹೇಳಿದನು. ಆ ಮಾತು ಅಕ್ಷರಶಃ ನಿಜವಾಯಿತು !





ಘಿಯಾಜುದ್ದೀನ್ ದ್ವಾರ ತೋರಣದ ಕೆಳಗೆ ಬಂದ ಕೂಡಲೇ ಅದು ಮುರಿದು ಅವನ ಮೇಲೆ ಬಿತ್ತು. ಅವನು ಅಲ್ಲಿಯೇ ಸತ್ತನು. ಸುಲ್ತಾನನ ಮರಣವು ಆಕಸ್ಮಿಕ ಅಪಘಾತದಿಂದಾದಂತೆ ಕಂಡರೂ ಅದು ಅವನ ಕುಮಾರ ಉಲೂಘ್ ಖಾನ್ ಮಾಡಿದ ದುಸ್ತಂತ್ರವೆಂದು ಹಲವರು ಭಾವಿಸಿದರು.



ಆ ಮೇಲೆ ಉಲೂಘ್‌ಖಾನ್, ಮುಹಮ್ಮದ್-ಬಿನ್-ತುಗ್ಲಕ್ ಎಂಬ ಹೆಸರಿನಿಂದ ಢಿಲ್ಲಿಯ ಸುಲ್ತಾನನಾದನು. ಚಂಚಲ ಗುಣದವನಾದ ಈ ತುಗ್ಲಕ್ ತನ್ನ ರಾಜಧಾನಿಯನ್ನು ಢಿಲ್ಲಿಯಿಂದ ದೇವಗಿರಿಗೆ ಬದಲಾಯಿಸಬೇಕೆಂದು ನಿಶ್ಚಯಿಸಿದನು. ಢಿಲ್ಲಿಗೆ ಏಳ್ನೂರು ಮೈಲು ದೂರದಲ್ಲಿರುವ ದೇವಗಿರಿಗೆ ದೌಲತಾಬಾದ್ ಎಂದು ಹೆಸರಿಟ್ಟು, ಅಲ್ಲಿ ಕೋಟೆ ಕೊತ್ತಳ ಭವನಗಳನ್ನು ನಿರ್ಮಾಣ ಮಾಡಿಸಿದನು.

ಪ್ರಭುತ್ವ ಕಾರ್ಯಾಲಯಗಳನ್ನು ಮಾತ್ರವಲ್ಲದೆ ಢಿಲ್ಲಿಯ ಪೌರರೆಲ್ಲರನ್ನೂ ದೌಲತಾಬಾದಿಗೆ ಕರೆದೊಯ್ಯಲು ಆಜ್ಞೆ ಮಾಡಿದನು. ತಲೆತಲಾಂತರಗಳಿಂದ ವಾಸವಾಗಿದ್ದ ಪ್ರಾಂತವನ್ನೂ, ಆಸ್ತಿಪಾಸ್ತಿಗಳನ್ನೂ ಬಿಡಲು ಢಿಲ್ಲಿಯ ಪ್ರಜೆಗಳು ಒಪ್ಪದೆ ಹೋದರು.





ಸುಲ್ತಾನನ ಆಜ್ಞೆಯನ್ನು ತಿರಸ್ಕರಿಸುವ ಪ್ರಜೆಗಳನ್ನು ಬೆದರಿಸಿ ಬಲಾತ್ಕಾರದಿಂದ ದೌಲತಾಬಾದಿಗೆ ಸಾಗಿಸತೊಡಗಿದರು. ಈ ಕಾರ್ಯದಲ್ಲಿ ಸೈನಿಕರು ಕುರುಡ ಕುಂಟರನ್ನು ಕೂಡಾ ಬಿಡಲಿಲ್ಲ. ಎಳೆದೊಯ್ಯುವ ಸೈನಿಕರ ಹಿಂಸೆಯಿಂದ ಅನೇಕರು ದಾರಿಯಲ್ಲೇ ಸತ್ತರು. ಹೀಗೆ ಪ್ರಾಚೀನ ಕಾಲದಿಂದ ಪ್ರಸಿದ್ಧವಾದ ಢಿಲ್ಲೀನಗರವು ನಿರ್ಮಾನುಷ್ಯವಾಯಿತು.

ದೌಲತಾಬಾದಿನಲ್ಲಾದರೂ ಪ್ರಜೆಗಳ ಜೀವನವು ಸುಗಮವಾಗಲಿಲ್ಲ. ಅಧಿಕಾರಿಗಳಿಗೆ ಕೂಡಾ ದಿಲ್ಲೀ ನಗರವೇ ಒಳ್ಳೆಯದೆನಿಸಿತು. ಅನೇಕ ಅಡೆತಡೆಗಳಿಂದ ಸುಲ್ತಾನನಿಗೂ ನೂತನ ರಾಜಧಾನಿ ಹಿಡಿಸಲಿಲ್ಲ. ಇದ್ದಕ್ಕಿದ್ದ ಹಾಗೆ ಪ್ರಜೆಗಳೆಲ್ಲಾ ಮತ್ತೆ ದಿಲ್ಲಿಗೇ ಹಿಂದಿರಗಬೇಕೆಂದು ಸುಲ್ತಾನನ ಆಜ್ಞೆ ಹೊರಟಿತು. ಎಲ್ಲರಿಗೂ ಹಿಂದಿರುಗಿ ಹೋಗಬೇಕೆಂದಿದ್ದರೂ, ಸುಲ್ತಾನನ ಚಂಚಲ ಸ್ವಭಾವದಿಂದ ರೋಸಿದವರೆಲ್ಲರಿಗೂ ಕೋಪ ಬಂದಿತು.





ಬೇರೆ ಉಪಾಯವಿಲ್ಲದೆ ತಿರುಗು ಪ್ರಯಾಣವು ಪ್ರಾರಂಭವಾದರೂ ಅದು ಸಕ್ರಮವಾಗಿ ಸಾಗಲಿಲ್ಲ. ಅಷ್ಟು ದೂರ ನಡೆಯಲಾಗದೆ ಅನೇಕರು ದಾರಿಯಲ್ಲೇ ಸತ್ತು ಹೋದರು. ಮತ್ತೆ ಕೆಲವರು ದಾರಿಗಳ್ಳರಿಂದ ಪೂರ್ತಿ ದೋಚಲ್ಪಟ್ಟರು. ಉಳಿದುಳಿದವರಷ್ಟೇ ದಿಲ್ಲಿಯನ್ನು ತಲಪಿದರು. ಅಲ್ಲಿ ಮನೆಗಳೆಲ್ಲಾ ಪಾಳುಬಿದ್ದಿದ್ದುವು. ದಿವಾಳಿಯಾದ ಸುಲ್ತಾನ್ ಪ್ರಭುತ್ವವು ಪ್ರಜೆಗಳು ಅಡಗಿಸಿಕೊಂಡಿದ್ದ ಅಲ್ಪ ಸ್ವಲ್ಪ ಧನವನ್ನೆಲ್ಲಾ ತಾನೇ ಎಳೆದುಕೊಂಡಿತು.

ಪ್ರಭುತ್ವದ ಖಜಾನೆ ಖಾಲಿಯಾದುದರ ಪರಿಣಾಮವಾಗಿ ಸುಲ್ತಾನನು ಚಿನ್ನಬೆಳ್ಳಿಗಳ ನಾಣ್ಯಗಳ ಸ್ಥಳದಲ್ಲಿ ತಾಮ್ರದ ನಾಣ್ಯಗಳನ್ನು ಪ್ರವೇಶಗೊಳಿಸಿದನು. ಅದನ್ನು ನೋಡಿ ಕೆಲವರು ತಮ್ಮ ಹತ್ತಿರವಿರುವ ತಾಮ್ರದ ಪಾತ್ರ ಪರಡಿಗಳನ್ನು ಕರಗಿಸಿ ತಾವೇ ಸ್ವಂತವಾಗಿ ನಾಣ್ಯಗಳ ತಯಾರಿಕೆಗೆ ತೊಡಗಿದರು. ಒಟ್ಟಿನಲ್ಲಿ ಆರ್ಥಿಕ ಸಂಕ್ಷೋಭೆಗೆ ಒಳಗಾದ ಸುಲ್ತಾನನು, ಪ್ರತ್ಯೇಕ ತೆರಿಗೆಗಳನ್ನು ಹಾಕಿದನು. ತೆರಿಗೆ ಕೊಡಲಾಗದವರು ನಾನಾ ಹಿಂಸೆಗಳಿಗೆ ಗುರಿಯಾದರು.






ಇದರೆಡೆಯಲ್ಲಿ ಸುಲ್ತಾನನು ರಾಜ್ಯದ ವಿಸ್ತರಣೆಗೂ ಪ್ರಯತ್ನಿಸಿ, ಮೂರು ಲಕ್ಷದ ಎಪ್ಪತ್ತು ಸಾವಿರ ಸೈನಿಕರನ್ನು ಜಮೆ ಮಾಡಿದನು. ಮೊದಲು ಪರ್ಷಿಯಾ ದೇಶಕ್ಕೆ ದಂಡೆತ್ತಬೇಕೆಂದಿದ್ದನು. ಮತ್ತೆ ಆ ಉದ್ದೇಶವನ್ನು ಬಿಟ್ಟು, ಕುಮಾನ್ ಪ್ರಾಂತದ ಚಿಕ್ಕ ಚಿಕ್ಕ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವುದು ಸುಲಭವೆಂದುಕೊಂಡು, ಪರ್ವತ ಪ್ರಾಂತದ ಕಡೆಗೆ ಸೈನ್ಯವನ್ನು ಸಾಗಿಸಿದನು.

ಅದಕ್ಕೂ ಕಾಲವು ಕೂಡಿಬರಲಿಲ್ಲ. ಆಗಲೇ ವರ್ಷಾಕಾಲವು ಪ್ರಾರಂಭವಾಗಿ, ತುಫಾನಿನ ಹೊಡೆತಕ್ಕೆ ಗಿರಿಶಿಖರಗಳು ಮುರಿದು ಸೈನ್ಯದ ಮೇಲೆ ಬೀಳ ತೊಡಗಿದುವು. ಆ ಪ್ರಾಂತಗಳನ್ನು ಆಳುವ ಸಣ್ಣ ಸಣ್ಣ ನಾಯಕರು ಕೂಡಾ ಈ ದುರಾಕ್ರಮಣವನ್ನು ಇದಿರಿಸಿ ನಾನಾ ಯಾತನೆಗೆ ಗುರಿಪಡಿಸಿದರು. ಈ ಕಷ್ಟಗಳಿಂದ ಬಹಳಮಂದಿ ಸೈನಿಕರು ಸತ್ತುಹೋದರು.





ಅವನ ಸಾಮ್ರಾಜ್ಯದಲ್ಲಿ ಪೂರಾ ತಿರುಗುದಾಳಿಗಳೂ, ಬಂಡಾಯಗಳೂ, ಎದ್ದುವು. ಸಿಂಧು ಪ್ರಾಂತದಲ್ಲೆದ್ದ ಬಂಡಾಯವನ್ನು ಅಡಗಿಸಲು ಹೋದ ಮುಹಮ್ಮದ್-ಬಿನ್-ತುಗ್ಲಕ್ ವಿಷಜ್ವರಕ್ಕೆ ತುತ್ತಾಗಿ ೧೩೫೧ ರಲ್ಲಿ ತೀರಿಹೋದನು. ಚಿಕ್ಕ ಚಿಕ್ಕ ಸಾಮಂತರಾಜರು ಕೂಡಾ ಸ್ವಾತಂತ್ರ್ಯವನ್ನು ಪ್ರಕಟಿಸಿಕೊಂಡುದರಿಂದ ತುಗ್ಲಕ್ ಸಾಮ್ರಾಜ್ಯವು ಛಿನ್ನಾಭಿನ್ನವಾಯಿತು.



# ಭಕ್ತ ಕಬೀರ್

ವಾರಣಾಸಿಯ ಸಮೀಪದಲ್ಲಿರುವ ಒಂದು ಗ್ರಾಮದಲ್ಲಿ ನೀರೂ-ನೀಮಾ ಎಂಬ ಮುಸ್ಲಿಮ್ ದಂಪತಿಗಳಿದ್ದರು. ಒಂದು ದಿನ ಬೆಳಿಗ್ಗೆ ಒಂದು ಮರದ ಕೆಳಗೆ ಒಂದು ವರ್ಷವೂ ತುಂಬದಿದ್ದ ಮಗುವನ್ನು ನೀರೂ ನೋಡಿದನು. ಅವನು ಆ ಶಿಶುವನ್ನು ತಂದು ಹೆಂಡತಿಗೆ ಕೊಟ್ಟನು. ಸಂತಾನವಿಲ್ಲದ ಆ ಗಂಡ ಹೆಂಡಿರಿಗೆ ಆ ಮಗುವನ್ನು ನೋಡಿ ಬಹಳ ಸಂತೋಷವಾಯಿತು.

ಅವರು ಆ ಮಗುವಿಗೆ ಕಬೀರ್ ಎಂದು ಹೆಸರಿಟ್ಟು ಅತ್ಯಂತ ಕೊಂಡಾಟದಿಂದ ಬೆಳೆಸಿದರು. ಕಬೀರ್ ಬೆಳೆದು ದೊಡ್ಡವನಾಗಿ ಸಾಕು ತಂದೆಯ ನೇಯ್ಗೆಯ ವೃತ್ತಿಯನ್ನೇ ತಾನೂ ಕಲಿಯತೊಡಗಿದನು. ಮಗ್ಗದ ಮೇಲೆ ಕುಳಿತು ಬಟ್ಟೆ ನೇಯುತ್ತಾ ಅದರ ಲಯ ಶಬ್ದಕ್ಕೆ ಸರಿಯಾಗಿ ಮನಸ್ಸಿನಲ್ಲೇ ಹಾಡುತ್ತಾ ಇರುವನು.





ಆ ಸಮಯದಲ್ಲಿ ವಾರಣಾಸಿಯಲ್ಲಿ ಸುಪ್ರಸಿದ್ಧರಾಗಿ ರಾಮಾನಂದಸ್ವಾಮಿಯವರಿದ್ದರು. ಅವರ ಸದ್ವರ್ತನೆಗಳು ಕಬೀರನನ್ನು ಆಕರ್ಷಿಸಿದುವು. ಆದರೆ ತಂದೆತಾಯಿಗಳನ್ನು ಅರಿಯದಿರುವ ನಿರಕ್ಷರ ಕುಕ್ಷಿಯಾದ ತನ್ನನ್ನು, ರಾಮಾನಂದರು ಶಿಷ್ಯನಾಗಿ ಅಂಗೀಕರಿಸಿಕೊಳ್ಳಲಾರರೇನೋ ಎಂಬ ಅನುಮಾನವು ಕಬೀರನನ್ನು ಪೀಡಿಸ ತೊಡಗಿತು.




ಪ್ರತಿ ದಿನವೂ ಬೆಳಂಜಾಮದಲ್ಲೇ ಎದ್ದು ಸ್ನಾನ ಮಾಡಿ ಬರುವುದು ರಾಮಾನಂದಸ್ವಾಮಿಯ ಪದ್ಧತಿ, ಹಾಗೆ ಒಂದು ದಿನ ಅವರು ಹೋದಾಗ ಕಬೀರ್ ಗಂಗಾನದಿಗಿಳಿಯುವ ಮೆಟ್ಟಿಲಿನ ಮೇಲೆ ಸಾಷ್ಟಾಂಗವಾಗಿ ಮಲಗಿದನು. ಸ್ನಾನ ಮುಗಿಸಿ ಮೇಲೆ ಬರುವ ರಾಮಾನಂದರ ಪಾದವು ಕಬೀರನ ಶರೀರದ ಮೇಲೆ ತಾಗಿದ ಕೂಡಲೇ, ಅವರ ಬಾಯಿಯಿಂದ ರಾಮ್ ರಾಮ್ ಎಂಬ ಸ್ಮರಣೆ ಹೊರಟಿತು.

ಕೂಡಲೇ ಕಬೀರ್ ಎದ್ದುನಿಂತು ಕೈ ಮುಗಿದು, "ಸ್ವಾಮಿ ! ಈ ಪ್ರಭಾತದ ಶುಭ ಸಮಯದಲ್ಲಿ ಪವಿತ್ರ ಗಂಗಾಸ್ನಾನಮಾಡಿ ಬರುತ್ತ, ನೀವು ನನಗೆ ದಿವ್ಯನಾಮವನ್ನು ಉಪದೇಶ ಮಾಡಿದಿರಿ" ಎಂದನು. "ಯಾರು ನೀನು ?" ಎಂದು ರಾಮಾನಂದರು ಕೇಳಿದರು. "ನನ್ನ ಹೆಸರು ಕಬೀರ್. ನಿಮ್ಮ ಶಿಷ್ಯ. ಇಷ್ಟೇ ಹೇಳಬಲ್ಲೆನು" ಎಂದನು ಕಬೀರ್ ವಿನಯದಿಂದ.





ಮತ್ತೆ, ಬಲುಬೇಗದಲ್ಲೇ ಕಬೀರನು ಹಾಡಿದ ಭಕ್ತಿಗೀತೆಗಳು, ಪ್ರಜೆಗಳಲ್ಲಿ, ಪ್ರಿಯವಾಗಿ ಹರಡಿದುವು. ದೇವರ ದಯೆಗೆ ಬೇಕಾದುದು ಹೊರಗಿನ ಆಚಾರಗಳಲ್ಲವೆಂದೂ, ನಿರ್ಮಲವಾದ ಭಕ್ತಿ ಮಾತ್ರವೆಂದೂ ಆತನ ಗೀತೆಗಳಲ್ಲಿರುವ ಬೋಧನೆಗಳು. ಅವನು ಜಾತಿಭೇದಗಳನ್ನು ನಿರಸನ ಮಾಡಿದನು. ಹಿಂದೂ ಮುಸಲ್ಮಾನರಲ್ಲಿರುವ ಮನ ಬಂದಂತೆ ಪ್ರವರ್ತಿಸುವ ಭಾವಗಳನ್ನು ಪರಿಹಾಸ ಮಾಡಿದನು.

ಕಬೀರನನ್ನು ಅವಮಾನ ಪಡಿಸಬೇಕೆಂದು ಕೆಲವು ದುಷ್ಟರು, ಅವನು ಔತಣಕ್ಕೆ ಬರಲು ಹೇಳಿದ್ದಾನೆಂದು, ನೂರಾರು ಜನರಿಗೆ ಹೇಳಿದರು. ಈ ವಿಷಯವೇನೂ ತಿಳಿಯದುದರಿಂದ ಆ ದಿನ ಕಬೀರನು ಮನೆಯಲ್ಲೇ ಇರಲಿಲ್ಲ. ಕಡೆಗೆ ಅವನು ಮನೆಗೆ ಬಂದಾಗ, ಯಾವನೋ ತನ್ನ ಹಾಗಿದ್ದವನು ಬಂದವರಿಗೆಲ್ಲಾ ಔತಣದ ಊಟ ಮಾಡಿಸಿ ತೃಪ್ತಿಬಡಿಸಿ ಕಳುಹಿಸಿದನೆಂದು ತಿಳಿದು ಆಶ್ಚರ್ಯಪಟ್ಟನು.





ಸಂಪ್ರದಾಯ ವಾದಿಗಳು ಕೆಲವರು ಢಿಲ್ಲೀ ಸುಲ್ತಾನನ ಬಳಿಗೆ ಹೋಗಿ, ತಮ್ಮ ಮತ ವಿಶ್ವಾಸಗಳನ್ನು ಕಬೀರನು ಅವಮಾನ ಪಡಿಸುವನೆಂದು ಫಿರ್ಯಾದಿ ಮಾಡಿದರು. ಸುಲ್ತಾನನು ವಿಚಾರಣೆ ನಡೆಸಿದಾಗ ಕಬೀರ್, "ನಾನು ಹಿಂದೂವೂ ಅಲ್ಲ, ಮುಸ್ಲಿಮ್‌ನೂ ಅಲ್ಲ. ಹಿಂದೂ ಮುಸ್ಲಿಮ್ ಭೇದ ನೋಡದಿರುವ ದೇವರ ಭಕ್ತ, ಅಷ್ಟೇ" ಎಂದನು.

ಅವನ ನಿರ್ಭೀತಿಯ ಉತ್ತರದಿಂದ ಬರತಕ್ಕ ಅಪಾಯವನ್ನು ವಿವರಿಸಿ ಒಬ್ಬ ಉದ್ಯೋಗಸ್ಥನು ಕಬೀರನನ್ನು ಹೆದರಿಸಲು ನೋಡಿದನು. ಆಗ ಕಬೀರ್, "ಆನೆಯ ಮೇಲೆ ಹೋಗುವವನು ನಾಯಿಯ ಬೊಗಳುವಿಕೆಗೆ ಹೆದರುವನೇ ?" ಎಂದನು, ಸಭಿಕರು ಭಯಾಶ್ಚರ್ಯಗಳಿಂದಿರಲು, ಸುಲ್ತಾನ್ ಅವನ ಧೈರ್ಯಕ್ಕೆ ಮೆಚ್ಚಿ ಗೌರವದಿಂದ ಕಳುಹಿಸಿ ಕೊಟ್ಟನು.





ಗೋರಕ್‌ಪೂರ್ ಎಂಬ ಗ್ರಾಮದಲ್ಲಿ ಕಬೀರನು ಕಾಲಧರ್ಮ ಹೊಂದಿದನು. ಆತನ ಭೌತಿಕ ಕಾಯವನ್ನು ದಹನ ಮಾಡಬೇಕೆಂದು ಹಿಂದೂ ಶಿಷ್ಯರೂ, ಭೂಸ್ಥಾಪಿತ ಮಾಡಬೇಕೆಂದು ಮುಸ್ಲಿಮ್ ಅನುಚರರೂ ತಗಾದೆಗಿಳಿದರೆಂದು ಪ್ರತೀತಿಯೊಂದಿದೆ.

ಆದರೆ ಕಬೀರನ ಭೌತಿಕ ಕಾಯದ ಮೇಲೆ ಮುಚ್ಚಲ್ಪಟ್ಟ ಬಿಳೀ ಬಟ್ಟೆಯನ್ನು ತೆಗೆದ ಕೂಡಲೇ, ಅಲ್ಲಿ ಅವನ ಶರೀರಕ್ಕೆ ಬದಲು ತಾವರೆ ಹೂಗಳು ಕಾಣಿಸಿದುವಂತೆ ! ಅವುಗಳಲ್ಲಿ ಕೆಲವು ಪುಷ್ಪಗಳನ್ನು ಹಿಂದೂ ಶಿಷ್ಯರು ಕಾಶಿಗೆ ತೆಗೆದುಕೊಂಡು ಹೋಗಿ, ಅವುಗಳ ಮೇಲೆ ಸ್ಮಾರಕ ಮಂದಿರವನ್ನು ನಿರ್ಮಿಸಿದರು. ಉಳಿದ ಪುಷ್ಪಗಳನ್ನು ಮುಸ್ಲಿಮ್ ಅನುಚರರು ಭೂಸ್ಥಾಪಿತ ಮಾಡಿ, ಅದರ ಮೇಲೆ ಗೋರಿಯೊಂದು ಕಟ್ಟಿದರು.





ಹದಿನಾಲ್ಕನಯ ಶತಾಬ್ದಾಂತದಿಂದ ಹದಿನೈದನೆಯ ಶತಾಬ್ದಾರಂಭದವರೆಗೆ ಜೀವಿಸಿದ್ದ ಕಬೀರನ ಗೀತೆಗಳೂ, ಆಲೋಚನೆಗಳೂ ಅನಂತರದ ತಲೆ ಮಾರಿನವರನ್ನು ತುಂಬಾ ಪ್ರಭಾವಿತಗೊಳಿಸಿದುವು. ಮುಖ್ಯವಾಗಿ ಗುರುನಾನಕ್, ಮೀರಾಬಾಯಿ, ರಾಮದಾಸ ಮೊದಲಾದವರನ್ನು ಕಬೀರನ ಗೀತೆಗಳು ಹೆಚ್ಚಾಗಿ ಆಕರ್ಷಿಸಿವೆ.



# ಗುರುನಾನಕ್

ಲಾಹೋರಿನ ಸಮೀಪದಲ್ಲಿ ಪ್ರಸ್ತುತ ನಾನ್ಕಾನಾ ಎಂದು ಪ್ರಸಿದ್ಧಿ ಪಡೆದ ತಲ್ವಾನ್‌ಡೀ ಗ್ರಾಮದಲ್ಲಿ ತೃಪ್ತಾ ಮತ್ತು ಕಲ್ಯಾಣ್‌ಚಂದ್ ಎಂಬ ದಂಪತಿಗಳಿಗೆ ೧೪೬೯ರ ಏಪ್ರಿಲ್ ೧೫ರ ದಿನ ಒಂದು ಗಂಡು ಮಗು ಹುಟ್ಟಿತು. ಆ ಮಗು ಭವಿಷ್ಯತ್ತಿನಲ್ಲಿ ಮಹಾಪುರುಷನಾಗುವನೆಂದು ಹೇಳಿ ಜೋಯಿಸರು ಆ ಶಿಶುವಿಗೆ ನಾನಕ್ ಎಂದು ನಾಮಕರಣ ಮಾಡಿದರು.

ಮಗು ಬೆಳೆದು ಬಾಲಕನಾಗಿ ಶಾಲೆಗೆ ಹೋಗಲು ಪ್ರಾರಂಭಿಸಿದನು. ಒಂದು ದಿನ ತರಗತಿಯಲ್ಲಿ ಉಪಾಧ್ಯಾಯರು ಹುಡುಗರಿಗೆ ಅಕಾರಾದಿ ಅಕ್ಷರಗಳನ್ನು ಹೇಳಿಕೊಡುತ್ತಿರುವಾಗ, ಬಾಲ ನಾನಕ್ ಅದನ್ನೇನೂ ಹಚ್ಚಿಕೊಳ್ಳದೆ, ತನ್ನ ಪಾಡಿಗೆ ಕರಿಹಲಗೆಯ ಮೇಲೆ ಬಳಪದಿಂದ ಏನೋ ಬರೆಯುತ್ತಲೇ ಇದ್ದನು. ಉಪಾಧ್ಯಾಯರು ಹತ್ತಿರ ಹೋಗಿ ನೋಡಿದರೆ. ಕರಿಹಲಗೆಯಲ್ಲಿ ದೇವರ ಮೇಲೆ ಪೂರ್ತಿಯಾದ ಒಂದು ಪ್ರಾರ್ಥನಾಗೀತವನ್ನು ಬರೆದಿದ್ದನು. ಈ ಅದ್ಭುತ ನೋಡಿ ಉಪಾಧ್ಯಾಯರಿಗೆ ಆಶ್ಚರ್ಯವಾಯಿತು.





ತಂದೆಯಾದ ಕಲ್ಯಾಣಚಂದ್ ಕುಮಾರನನ್ನು ವ್ಯಾಪಾರಕ್ಕೆ ಇಳಿಸಬೇಕೆಂದು ಪ್ರಯತ್ನಿಸಿದನು. ಒಂದು ದಿನ ನಾನಕನ ಕೈಗೆ ಹಣ ಕೊಟ್ಟು, ಪಟ್ಟಣದಲ್ಲಿ ವ್ಯಾಪಾರ ಮಾಡಲು ಸರಕುಗಳನ್ನು ತರಲು ಕಳುಹಿಸಿದನು. ಕಾಡುದಾರಿಯಲ್ಲಿ ಹೋಗುತ್ತಿದ್ದ ನಾನಕ್, ಕೆಲವು ಸಾಧುಗಳು ಹಸಿವಿನಿಂದ ನರಳುತ್ತಿರುವುದನ್ನು ನೋಡಿದನು. ತಂದೆ ಕೊಟ್ಟ ಹಣದಿಂದ ಆಹಾರ ಪದಾರ್ಥಗಳನ್ನು ಕೊಂಡುಕೊಂಡು ತಂದು, ಆ ಸಾಧುಗಳಿಗೆ ಹಂಚಿಕೊಟ್ಟು ಬಿಟ್ಟನು.



ಮದುವೆ ಮಾಡಿದರಾದರೂ ಸಂಸಾರ ಜೀವಿತದಲ್ಲಿ ಆಸಕ್ತಿ ತೋರಿಸುವನೆಂಬ ಉದ್ದೇಶದಲ್ಲಿ ಕಲ್ಯಾಣಚಂದ್ ನಾನಕನಿಗೆ ಮದುವೆ ಮಾಡಿದನು. ನಾನಕನು ಇಬ್ಬರು ಮಕ್ಕಳ ತಂದೆಯಾದನೇ ಹೊರತು, ಅವನ ಆಲೋಚನೆ ಮಾತ್ರ ಲೌಕಿಕ ಜೀವನದ ಕಡೆಗೆ ತಿರುಗಲೇ ಇಲ್ಲ. ಯಾವಾಗಲೂ ಏನೋ ಭಕ್ತಿ ಗೀತೆಗಳ ರಚನೆಯಲ್ಲಿಯೇ ಲೀನನಾಗಿರುವನು. " ಮೇಲಿನಿಂದ ನನಗೆ ಬರುವ ಸಂದೇಶಗಳನ್ನೇ ಬರೆಯುತ್ತೇನೆ " ಎಂದು ಹೇಳುತ್ತಿದ್ದನು.

ಒಂದು ದಿನ ನಾನಕ್ ಹೆಂಡತಿಯೊಂದಿಗೆ "ಎಲ್ಲರನ್ನೂ ಕಾಪಾಡುವ ದೇವನೇ ನಿನ್ನನ್ನೂ ಕಾಪಾಡುತ್ತಾನೆ " ಎಂದು ಹೇಳಿ ದೇಶಾಟನೆ ಮಾಡಲು ಹೊರಟನು. ಭಾರತದೇಶದೊಳಗಿನ ಪವಿತ್ರ ಕ್ಷೇತ್ರಗಳನ್ನು ಮಾತ್ರವಲ್ಲದೆ, ಮರ್ದನ್ ಎಂಬ ಮುಸ್ಲಿಮ್ ಮಿತ್ರನ ಜತೆಯಲ್ಲಿ, ನೇಪಾಳ, ಟಿಬೆಟ್, ಮಕ್ಕಾ, ಮದೀನಾ ಮೊದಲಾದ ಸ್ಥಳಗಳಿಗೂ ತೀರ್ಥಯಾತ್ರೆ ಮಾಡಿದನು.





ಹೃದಯಪೂರ್ವಕವಾದ ಭಕ್ತಿವಿಶ್ವಾಸಗಳಿಲ್ಲದೆ ಕೇವಲ ಮೇಲುಮೇಲಾದ ಮತಾಚಾರಗಳನ್ನು ಹಿಡಿದುಕೊಂಡಿರುವ ಜನತೆಯನ್ನು ನೋಡಿ ನಾನಕ್ ನೊಂದುಕೊಂಡನು. ಒಂದು ಸಾರಿ ಹರಿದ್ವಾರದ ಬಳಿಯಲ್ಲಿ ಪೂರ್ವ ದಿಕ್ಕಿಗೆ ತಿರುಗಿ ಜಲತರ್ಪಣ ಮಾಡುವವರನ್ನು ನೋಡಿ, ಅವನು ಪಶ್ಚಿಮ ದಿಕ್ಕಿಗೆ ತಿರುಗಿ ತರ್ಪಣ ಕೊಡಲು ಪ್ರಾರಂಭಿಸಿದನು. " ಹೀಗೇಕೆ ಮಾಡುವಿ ?" ಎಂದು ಕೇಳಿದುದಕ್ಕೆ " ಲಾಹೋರಿನ ಹತ್ತಿರವಿರುವ ನಮ್ಮ ಮರಗಳಿಗೆ ನೀರು ಎರೆಯುತ್ತಿದ್ದೇನೆ. ನೀವು ಕೊಡುವ ಅರ್ಘ್ಯವು ಪೂರ್ವ ದಿಕ್ಕಿನ ದೇವರಿಗೆ ಸೇರಿದರೆ, ನಾನು ಕೊಡುವ ನೀರು ಮಾತ್ರ ನನ್ನ ತೋಟಕ್ಕೆ ಹೋಗದೇ ?" ಎಂದನು ನಾನಕ್.

ಒಂದು ಸಾರಿ ನಾನಕ್ ಸೈಯದ್‌ಪುರದಲ್ಲಿ ಬಡವನ ಮನೆಗೆ ಅತಿಥಿಯಾಗಿ ಹೋದನು. ಅದೇ ಸಮಯದಲ್ಲಿ ಒಬ್ಬ ಧನಿಕನು ಬಂದು ತನ್ನ ಮನೆಯ ಔತಣದ ಭೋಜನಕ್ಕೆ ಬರುವಂತೆ ಅವನನ್ನು ಕರೆದನು. ನಾನಕ್ ಬಡವನು ಕೊಟ್ಟ ರೊಟ್ಟಿ ತುಂಡನ್ನು ಬಲಗೈಯಲ್ಲಿ ಹಿಡಿದುಕೊಂಡು, ಧನಿಕನು ಕೊಟ್ಟ ರಸಭಕ್ಷ್ಯವನ್ನು ಎಡಗೈಯಲ್ಲಿ ಹಿಡಿದು ಎರಡನ್ನೂ ಹಿಂಡಿದನು. ರೊಟ್ಟಿಯಿಂದ ಹಾಲೂ, ಎಡಗೈಯ ಭಕ್ಷ್ಯದಿಂದ ನೆತ್ತರೂ ಸುರಿಯಿತಂತೆ !





ಮಕ್ಕಾದಲ್ಲಿರುವಾಗ ನಾನಕ್ ಒಂದು ಸಾರಿ ಕಾಬಾದ ಕಡೆಗೆ ಕಾಲುಚಾಚಿ ಮಲಗಿದನು. ಕಾಜೀ ಅದನ್ನು ನೋಡಿ, "ದೇವಾಲಯದ ಕಡೆಗೆ ಕಾಲುಚಾಚಿ ಮಲಗಿದೆ ಏಕೆ ?" ಎಂದು ಕೇಳಿದನು. ಕೂಡಲೇ ನಾನಕ್ "ನನ್ನ ಕಾಲನ್ನು ತೆಗೆದು ದೇವನ ಆಲಯವಿಲ್ಲದ ಕಡೆಗೆ ನೀವೇ ಸ್ವಲ್ಪ ತಿರುಗಿಸಿಬಿಡಿ" ಎಂದನು. ನಾನಕನ ಕಾಲನ್ನು ಯಾವ ಕಡೆಗೆ ತಿರುಗಿಸಿದರೂ ಆ ಕಡೆಯಲ್ಲಿ ಕಾಜೀಗೆ ಕಾಬಾ ಕಾಣಿಸಿತಂತೆ.

ಪ್ರತಿಯೊಬ್ಬರೂ ಸಹನೆಯನ್ನೂ, ದಯೆಯನ್ನೂ ಅಭ್ಯಾಸ ಮಾಡಿಕೊಳ್ಳಬೇಕೆಂದು ನಾನಕ್ ಪ್ರಚಾರ ಮಾಡಿದರು. ಕೇವಲ ಮೇಲು ಮೇಲಿನ ಆಚಾರಗಳಿಂದ ಹೊರಬಿದ್ದು, ಹೃದಯ ನೈರ್ಮಲ್ಯವನ್ನು ಆಳವಡಿಸಿಕೊಂಡು, ಸತ್ಯ ಸ್ವರೂಪನಾದ ದೇವನ ಮೇಲೆ ಪ್ರೇಮವನ್ನು ವರ್ಧಿಸಿಕೊಳ್ಳಬೇಕೆಂದು ಗುರುನಾನಕ್ ಬೋಧಿಸಿದರು. ಜಾತಿ ಭೇದಗಳನ್ನು ನಿರಸನೆ ಮಾಡಿದ ನಾನಕರ ಬೋಧನೆಗಳು ಹಿಂದೂ ಮುಸ್ಲಿಮ್ ಉಭಯ ಮತದವರನ್ನೂ ಉದ್ದೇಶಿಸಲ್ಪಟ್ಟುದು.





ನಾನಕರ ಬೋಧನೆಗಳೆಲ್ಲ ಸಿಖ್ಖ ಮತವೆಂದು ಪ್ರಚಾರವಾಯಿತು. ನಾನಕ್ ತಮ್ಮ ಪ್ರಥಮ ಶಿಷ್ಯನಾದ ಅಂಗದನನ್ನು ತನ್ನ ಆಧ್ಯಾತ್ಮಿಕ ವಾರಸನನ್ನಾಗಿ ನಿಯಮಿಸಿದರು. ಸತ್ಯವೇ ಲಕ್ಷ್ಯವಾಗಿ ಭಾವಿಸಿ, ಉಜ್ವಲ ಜೀವಿತವನ್ನು ಕಳೆದ ಆ ಮಹನೀಯರು ೧೫೩೯ನೇ ವರ್ಷ ಸೆಪ್ಟೆಂಬರ್ ಏಳರ ದಿನ ತನ್ನ ಭೌತಿಕ ದೇಹವನ್ನು ತ್ಯಜಿಸಿದರು.

ನಾನಕರ ಭಕ್ತರು ನಿರ್ಮಿಸಿದ ಸ್ಮಾರಕಮಂದಿರವು ರಾವಿನದಿಯ ಪ್ರವಾಹದಿಂದ ಕೊಚ್ಚಿ ಹೋಯಿತು. ಪ್ರಧಾನವಾದುದು ಲಕ್ಷ್ಯವೇ ಹೊರತು ಭೌತಿಕ ಚಿಹ್ನೆಗಳು ಅಲ್ಲವೆಂಬ ಗುರುವಿನ ಅಭೀಷ್ಟದ ಮೇರೆಗೇ ಹಾಗಾಯಿತೆಂದು ನಾನಕರ ಭಕ್ತರು ನಂಬುತ್ತಾರೆ. ಅವರು ಹೇಳಿದ ಗೀತಾ ರಚನೆಗಳು "ಗ್ರಂಥ್ ಸಾಹೇಬ್" (ಆದಿಗ್ರಂಥ) ಎಂಬ ಹೆಸರಿನಿಂದ ಚಿರಸ್ಥಾಯಿಯಾಗಿ ನಿಂತಿವೆ.





ನಾನಕರ ಸ್ಮೃತಿ ಚಿಹ್ನೆಯಾಗಿ ಅವರ ಶಿಷ್ಯರು ನದೀತೀರದಲ್ಲಿ ಡೇರಾಬಾಬಾ ನಾನಕ್ ಎಂಬ ಪಟ್ಟಣವನ್ನು ನಿರ್ಮಿಸಿದ್ದಾರೆ. ಒಂದು ಕಾಲದಲ್ಲಿ ನಾನಕ್ ಧ್ಯಾನಮಗ್ನರಾಗಿ ಆಸೀನರಾಗಿದ್ದ ಸ್ಥಳದಲ್ಲಿ ಒಂದು ಮಂದಿರವನ್ನೂ ನಿರ್ಮಿಸಿದ್ದಾರೆ. ಗುರುನಾನಕರ ತರುವಾಯ ಅವರ ಎಂಟು ಮಂದಿ ಶಿಷ್ಯರೂ, ಪ್ರಶಿಷ್ಯರೂ ಉತ್ತಮವಾದ ಸಂಪ್ರದಾಯವನ್ನು ನೆಲೆಗೊಳಿಸಿದರು.



# ಶ್ರೀ ಚೈತನ್ಯ ಪ್ರಭು

ಒರಿಸ್ಸಾ ಪ್ರಾಂತದಲ್ಲಿಯ ಜಯಪುರದಿಂದ, ನವದ್ವೀಪದ ಮಾಯಾಪುರಿಗೆ ಬಂದು ನೆಲೆನಿಂತ, ಮಿಶ್ರಾಪಂಡಿತ ಕುಟುಂಬವೆಂದರೆ ಸುತ್ತಮುತ್ತಲಿನವರಿಗೆಲ್ಲ ಅತ್ಯಂತ ಗೌರವಾದರಗಳಿದ್ದುವು. ೧೪೮೬ನೆಯ ಇಸವಿ ಫೆಬ್ರುವರಿ ಹದಿನೆಂಟನೇ ತಾರೀಕಿನ ದಿನ ಜಗನ್ನಾಥ ಮಿಶ್ರಾ, ಶೋಚಿ ದೇವಿ ಎಂಬ ದಂಪತಿಗಳಿಗೆ ಒಬ್ಬ ಕುಮಾರನು ಹುಟ್ಟಿದನು.

ತಂದೆ ತಾಯಿಗಳು ಆ ಕುಮಾರನಿಗೆ ನಿಮಾಯ್ ಎಂದು ಹೆಸರಿಟ್ಟರು. ಆ ಮಗುವಿನ ಶರೀರ ಛಾಯೆ ಕಾಂತಿವಂತವಾಗಿದ್ದುದರಿಂದ ಅವನನ್ನು ಎಲ್ಲರೂ ಗೌರಾಂಗನೆಂತಲೂ ಕರೆಯುತ್ತಿದ್ದರು. ಓದುಬರೆಹಗಳಲ್ಲಿಯೂ, ಆಟಪಾಟಗಳಲ್ಲಿಯೂ ಜತೆಯ ಬಾಲಕರಿಗಿಂತ ಗೌರಾಂಗನು ಹೆಚ್ಚಿನ ಜಾಣನಾಗಿದ್ದನು.





ನಿಮಾಯ್ ಯುವಕನಾಗಿದ್ದಾಗಲೇ ಒಂದು ಸಂಸ್ಕೃತ ಶಾಲೆಯನ್ನು ಸ್ಥಾಪಿಸಿ ಅಲ್ಲಿ ಉಪಾಧ್ಯಾಯನಾದನು. ಅವನ ಪಾಂಡಿತ್ಯವೂ ದಯಾಗುಣವೂ ವಿದ್ಯಾರ್ಥಿಗಳನ್ನು ಬಹಳವಾಗಿ ಆಕರ್ಷಿಸಿದುವು. ಆದರೆ ಒಂದು ದಿನ ನಿಮಾಯ್ ಗಯೆಗೆ ಹೋಗಿ, ಈಶ್ವರ ಪುರಿ ಎಂಬ ಸಾಧುಪುಂಗವನನ್ನು ದರ್ಶನ ಮಾಡಿ ಆತನ ಶಿಷ್ಯನಾದನು.



ನಿಮಾಯ್ ಮಾಯಾಪುರಿಗೆ ಹಿಂದಿರುಗಿ ಬಂದ ಮೇಲೆ ಸಂಸ್ಕೃತ ಪಾಠಶಾಲೆಯನ್ನು ಮುಚ್ಚಿ ಬಿಟ್ಟನು. ನಿರಂತರ ಧ್ಯಾನದಲ್ಲಿಯೂ, ಭಕ್ತಿ ಶ್ರದ್ಧೆಗಳಿಂದ ಶ್ರೀ ಕೃಷ್ಣ ಕೀರ್ತನೆಗಳನ್ನು ಗಾನ ಮಾಡುವುದರಲ್ಲಿಯೂ ಕಾಲಕಳೆಯುತ್ತಿದ್ದನು. ಬಹುಬೇಗದಲ್ಲೇ ಅವನಿಗೆ ಅನೇಕ ಮಂದಿ ಅನುಚರರು ಕೂಡಿದರು. ಅವರೆಲ್ಲ ಬೃಂದಗಳಾಗಿ ಸೇರಿ ಭಜನೆ ಕೀರ್ತನೆಗಳನ್ನು ಆಲಾಪಿಸುತ್ತ ಮೆರವಣಿಗೆ ಹೋಗಲು ಪ್ರಾರಂಭಿಸಿದರು.

ಕೆಲವು ಸಂಪ್ರದಾಯವಾದಿಗಳಿಗೆ ಈ ನೂತನ ಪದ್ಧತಿಯ ವೈಷ್ಣವ ಭಜನೆ ಹಿಡಿಸಲಿಲ್ಲ. ಆದುದರಿಂದ ಅವರು ಬಂಗಾಳದ ನವಾಬನ ಸ್ಥಾನಿಕ ಪ್ರತಿನಿಧಿಯಾದ ಕಾಜೀಯ ಬಳಿಗೆ ಹೋಗಿ ನಿಮಾಯ್ ಅನುಚರರು ಮಾಡುವ ಶ್ರೀ ಕೃಷ್ಣ ಕೀರ್ತನೆಗಳಿಗೆ ವ್ಯತಿರೇಕವಾಗಿ ಫಿರ್ಯಾದಿ ಮಾಡಿದರು.





ಅದನ್ನು ಕೇಳಿ ಕಾಜೀ, ಬೀದಿಯಲ್ಲಿ ಬೃಂದ ಗಾನ ಮಾಡುವುದನ್ನು ನಿಷೇಧಿಸಿ ಆಜ್ಞೆಯನ್ನು ಜಾರೀ ಮಾಡಿದನು. ಆದರೆ ಅದನ್ನೇನೂ ಲಕ್ಷ್ಯಮಾಡದೆ ನವದ್ವೀಪದಲ್ಲಿರುವವರೆಲ್ಲರಿಗೂ ತನ್ನ ಭಜನೆಯಲ್ಲಿ ಪಾಲುಗೊಳ್ಳಬೇಕೆಂದು ನಿಮಾಯ್ ಕರೆಯನ್ನಿತ್ತನು. ಕೆಲವರು ಹೆದರಿ ಅದರ ದುಷ್ಪರಿಣಾಮವನ್ನು ಕುರಿತು ಅವನನ್ನು ಎಚ್ಚರಿಸಿದರು. ಆದರೆ ನಿಮಾಯ್ ಕಾಜೀಯ ಮೇಲೆ ಕೋಪವೇನೂ ತೋರ್ಪಡಿಸದೆ. ದೇವರ ಮೇಲಿನ ಅಚಂಚಲವಾದ ಭಕ್ತಿಶ್ರದ್ಧೆಗಳನ್ನು ಬಿಡಲಾರದೆ ಕಾಜೀಯ ನಿಷೇಧಾಜ್ಞೆಯನ್ನು ಅತಿಕ್ರಮಿಸಲಿಕ್ಕೇ ನಿಶ್ಚಯಿಸಿದನು.



ನೂರಾರು ಮಂದಿ ಭಕ್ತರು ನಿಮಾಯಿಯ ಸುತ್ತಲೂ ಸೇರಿದರು. ಶ್ರೀ ಕೃಷ್ಣ ಲೀಲೆಗಳನ್ನು ಅಭಿವರ್ಣಿಸುವ ಭಕ್ತಿಗೀತೆಗಳನ್ನು ಬಾಯಿತುಂಬಾ ಹಾಡುತ್ತ, ಭಜನೆಯ ವೃಂದ ಹೊರಟಿತು. ಹೋಗ ಹೋಗುತ್ತ ಭಕ್ತರ ಸಂಖ್ಯೆ ಬೆಳೆದು ಬೆಳೆದು ಪ್ರಜಾಸಮುದ್ರದ ಹಾಗೆ ಕಾಣಿಸಿತು. ಆ ಭಜನೆಯ ಬೃಂದವು ಕಾಜೀಯ ಗೃಹದ ಮುಂದೆ ಬರುತ್ತಿರಲು, ಅದನ್ನು ನೋಡಿ ಕಾಜೀ ಭಕ್ತಿಪೂರ್ವಕವಾಗಿ ನಿಮಾಯಿಗೆ ನಮಸ್ಕಾರ ಮಾಡಿದನು.

ಒಂದು ಸಾರಿ ನಿಮಾಯಿಯ ಪ್ರಥಮ ಶಿಷ್ಯನಾದ ನಿತ್ಯಾನಂದನ ಮೇಲೆ ಜಗಾಯ್, ಮಧಾಯ್ ಎಂಬ ಇಬ್ಬರು ದುಷ್ಟರು ಕೈ ಮಾಡಿದರು, ಮಧುಪಾತ್ರವನ್ನು ಅವನ ಮುಖದ ಮೇಲೆ ಬಿಸುಟರು. ನಿತ್ಯಾನಂದನ ಶರೀರದಿಂದ ರಕ್ತ ಸುರಿಯ ತೊಡಗಿತು. ಆದರೂ ಅವನು ಸ್ವಲ್ಪವೂ ಕೋಪ ತೋರಿಸದೆ ಕೃಷ್ಣನ ನಾಮಾವಳಿಯನ್ನು ಹೇಳಿರೆನ್ನುತ್ತ, ಅವರಿಗೆ ಬೋಧನೆ ಮಾಡ ತೊಡಗಿದನು. ಇಷ್ಟರಲ್ಲಿ ಅಲ್ಲಿಗೆ ನಿಮಾಯ್ ಬಂದುದರಿಂದ ಆ ದುಷ್ಟರು ಅವನ ಪಾದಗಳ ಮೇಲೆ ಬಿದ್ದು ನಮಸ್ಕಾರ ಮಾಡಿದರು.





ನಿಮಾಯಿಗೆ ವಿಷ್ಣುಪ್ರಿಯಳೊಂದಿಗೆ ವಿವಾಹ ವಾಯಿತು. ಕೆಲವು ದಿನಗಳವರೆಗೆ ಅವನು ಮಾಮೂಲು ಜೀವಿತವನ್ನು ಕಳೆಯುತ್ತಿದ್ದು, ಇನ್ನು ಮೇಲೆ ನೂತನ ಜೀವಿತಕ್ಕೆ ಸಮಯ ಬಂತೆಂದುಕೊಂಡನು. ಒಂದು ದಿನ ರಾತ್ರಿ ಮನೆಯನ್ನು ಬಿಟ್ಟು, ಸುಪ್ರಸಿದ್ಧನಾದ ಕೇಶವಭಾರತಿಯನ್ನು ದರ್ಶನಮಾಡಿ, ಸನ್ಯಾಸವನ್ನು ಸ್ವೀಕರಿಸಿದನು. ಅಂದಿನಿಂದ ಅವನು ಕೃಷ್ಣಚೈತನ್ಯನೆಂದು ಹೆಸರು ಪಡೆದನು.

ವಿಶ್ವಾಸಪಾತ್ರರಾದ ಅನುಚರರೊಂದಿಗೆ ಅವನು ಪವಿತ್ರವಾದ ಪೂರೀ ನಗರಕ್ಕೆ ಪ್ರಯಾಣ ಮಾಡಿದನು. ದೂರದಿಂದ ಪೂರಿಕ್ಷೇತ್ರವನ್ನು ದರ್ಶಿಸಿದ ಕೂಡಲೇ ಅವನು ಭಕ್ತಿ ಆನಂದಗಳಿಂದ ತನ್ಮಯನಾದನು. ಅಲ್ಲಿರುವ ಕವಿಗಳ, ಪಂಡಿತರ, ಸಾಧುಗಳ ಸಾನ್ನಿಧ್ಯದಲ್ಲಿ ಅಲ್ಲಿಯೇ ಸ್ಥಿರಪಡಬೇಕೆಂದು ನಿಶ್ಚಯಿಸಿಕೊಂಡನು.





ಕೃಷ್ಣನಿವಾಸ ಸ್ಥಾನವೆಂದು ಪುರಾಣ ಪ್ರಸಿದ್ಧವಾದ ಬೃಂದಾವನಕ್ಕೆ ಚೈತನ್ಯನು ಯಾತ್ರೆ ಮಾಡಿದನು. ಅಲ್ಲಿ ಶ್ರೀ ಕೃಷ್ಣನ ಲೀಲೆಗಳೊಂದಿಗೆ ಸಂಬಂಧಪಟ್ಟ ಸ್ಥಲಗಳನ್ನು ಗುರುತಿಸಿ ಮೈಮರೆತನು. ಆತನ ಅಭೀಪ್ಸದಂತೆ ಆ ಪ್ರದೇಶಗಳಲ್ಲಿ ನೂತನ ಆಲಯಗಳು ನಿರ್ಮಿಸಲ್ಪಟ್ಟವು. ಪ್ರಾಚೀನವಾದ ಆಲಯಗಳನ್ನು ಪುನರುದ್ಧಾರ ಮಾಡಲಾಯಿತು.

ಕೃಷ್ಣಚೈತನ್ಯನು ಪೂರೀಗೆ ಹಿಂದಿರುಗಿ ಬಂದಾಗ ಒರಿಸ್ಸಾದ ರಾಜಪ್ರತಾಪರುದ್ರನೂ, ಮಂತ್ರಿ ರಾಮಾನಂದರಾಯ್ ಕೂಡಾ ಭಕ್ತಿಗೌರವಗಳಿಂದ ಅವನನ್ನು ಸ್ವಾಗತ ಮಾಡಿಕೊಂಡರು. ಇಸವಿ ೧೫೩೩ ನೇ ವರ್ಷದಲ್ಲಿ ಆತನು ಎಲ್ಲಿಗೋ ಅಜ್ಞಾತವಾಗಿ ಹೊರಟು ಹೋದನು. ಆದರೆ ಅವನು ನಡೆಯಿಸಿದ ವೈಷ್ಣವೋದ್ಯಮವು ಮಾತ್ರ ಪೂರ್ವ ಭಾರತ ದೇಶವನ್ನು ಪ್ರತ್ಯಕ್ಷವಾಗಿಯೂ, ಉಳಿದ ಪ್ರಾಂತಗಳನ್ನು ಪರೋಕ್ಷವಾಗಿಯೂ ಪ್ರಭಾವಿತಗೊಳಿಸಿರುತ್ತದೆ.





# ಹುಮಯೂನ್ ಮತ್ತು ಷೇರ್‌ಷಹ

ಬಾಬರನ ಅನಂತರ ಆತನ ಕುಮಾರ ಹುಮಯೂನ್ ೧೫೩೦ ನೇ ಇಸವಿಯಲ್ಲಿ ತನ್ನ ಇಪ್ಪತ್ತಮೂರನೇ ವಯಸ್ಸಿನಲ್ಲಿ, ಅಗ್ರರಾಜಧಾನಿಯಾಗಿರುವ ದಿಲ್ಲಿಯಲ್ಲಿ ಮೊಗಲ್ ಸಾಮ್ರಾಜ್ಯದ ಸಿಂಹಾಸನವನ್ನು ಅಧಿಷ್ಠಿಸಿದನು. ಇವನು ಭೋಗಲಾಲಸನಾದುದರಿಂದ, ತನ್ನ ತಂದೆ ಸ್ಥಾಪಿಸಿದ ಸಾಮ್ರಾಜ್ಯವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಆಸಕ್ತಿ ತೋರಿಸಲಿಲ್ಲ.

ಆ ಸಮಯದಲ್ಲಿ ಅಫಘನ್ ಷೇರ್‌ಷಹನು ಭಾರತದೇಶದಲ್ಲಿ ಬಲಿಷ್ಠನಾದ ಪಾಲಕನಾಗಿ ಮೇಲೆ ಬರಲು ತೊಡಗಿದ್ದನು. ಬೀಹಾರದೊಳಗಿನ ಶಹಾರ ಜಾಗೀರುದಾರನ ಕುಮಾರನಾದ ಷೇರ್‌ಷಹನ ಆಸಲು ಹೆಸರು ಫರೀದ್. ಬಾಲ್ಯದಲ್ಲಿ ಅವನು ತನ್ನ ಸವತಿ ತಾಯಿಯಿಂದ ಅವಮಾನಿಸಲ್ಪಟ್ಟು, ಜುವ್ಪೂನ್‌ಪೂರಿಗೆ ಓಡಿಹೋದವನು.





ಫರೀದ್ ಯುವಕನಾಗಿರುವಾಗ ಒಂದು ಸಾರಿ ಒಬ್ಬಂಟಿಗನಾಗಿ ಹುಲಿಯನ್ನು ಇದಿರಿಸಿ ಹೋರಾಡಿ ಹತ ಮಾಡಿದನು. ಆ ಯುವಕನು ಪ್ರದರ್ಶಿಸಿದ ಸಾಹಸವನ್ನು ನೋಡಿ, ಮುಗ್ಧನಾದ ಬೀಹಾರಿನ ಸುಲ್ತಾನ್ ಅವನಿಗೆ ಷೇರ್‌ಷಹ ಎಂಬ ಬಿರುದನ್ನು ಕೊಟ್ಟು ಗೌರವಿಸಿದನು. ಷೇರ್‌ಷಹನು ಸೈನಿಕ ವಿಧಾನದಲ್ಲಿಯೂ, ಉಪಾಯಕ್ಕೆ ಮೇಲೆ ಉಪಾಯ ಮಾಡುವುದರಲ್ಲಿಯೂ ಬಾಬರ್‌ನನ್ನು ಆದರ್ಶವಾಗಿಟ್ಟುಕೊಂಡು ಅಭ್ಯಾಸ ಮಾಡಿದನು.



ಬಗೆಬಗೆಯ ವ್ಯೂಹಗಳನ್ನು ಮಾಡಿ, ಬೇಗದಲ್ಲೇ ಷೇರ್‌ಷಹನು ಬೀಹಾರಿನ ಪಾಲಕನಾದನು. ದಿನ ದಿಂದ ದಿನಕ್ಕೆ ಹೆಚ್ಚಿಕೊಂಡು ಹೋಗುವ ಷೇರ್‌ಷಹನ ಒತ್ತಡವನ್ನು ಹುಮಯೂನ್ ಇದಿರಿಸಲೇ ಬೇಕಾಯಿತು. ಅನೇಕ ಯುದ್ಧಗಳು ನಡೆದುವು. ಹುಮಯೂನನಿಗೆ ಯುದ್ಧದ ಮೇಲಿದ್ದ ಅನಾಸಕ್ತಿಯ ಕಾರಣದಿಂದ ಪ್ರತಿ ಸಾರಿಯೂ ಅವನು ಸೋಲುಣ್ಣುತ್ತಾ ಬಂದನು.

ಒಂದು ಸಾರಿ ನಡೆದ ಯುದ್ಧದಲ್ಲಿ ಷೇರ್‌ಷಹನ ಸೈನಿಕರಿಂದ ಹುಮಯೂನ್ ಮತ್ತು ಅವನ ಸೈನಿಕರು ಗಂಗಾನದಿಗೆ ಹಾರಿ ತಪ್ಪಿಸಿಕೊಳ್ಳ ಬೇಕಾಗಿ ಬಂತು. ನೂರಾರು ಮಂದಿ ಪ್ರವಾಹ ದಲ್ಲಿ ಕೊಚ್ಚಿಹೋಗಲ್ಪಟ್ಟರು. ಹುಮಯೂನ್ ಕೂಡಾ ಒಳ್ಳೆಯ ಈಜುಗಾರನಲ್ಲದುದರಿಂದ ಪ್ರಾಣಾಪಾಯದ ಸ್ಥಿತಿ ಏರ್ಪಟ್ಟಿತು.





ಪ್ರವಾಹದ ವೇಗಕ್ಕೆ ತಡೆದುಕೊಳ್ಳಲಾಗದೆ ತತ್ತಳಿಸುತ್ತಿದ್ದ ಹುಮಯೂನನನ್ನು ನೀರು ಹೊರುವವನೊಬ್ಬನು ನೋಡಿ, ತನ್ನ ಹತ್ತಿರವಿದ್ದ ತೊಗಲಿನ ಚೀಲದೊಳಗೆ ತುಂಬಾ ಗಾಳಿ ತುಂಬಿಸಿ ಅದನ್ನು ಗಂಗಾನದಿಯಲ್ಲಿ ಬಿಟ್ಟನು. ಅದನ್ನು ಹಿಡಿದುಕೊಂಡು ಹುಮಯೂನ್ ತೀರವನ್ನು ಸೇರಿದನು. ಆ ವಿಧವಾಗಿ ಒಬ್ಬ ರಾಜನ ಪ್ರಾಣ ವನ್ನು ಸಾಮಾನ್ಯದವನೊಬ್ಬನು ಕಾಪಾಡಿದನು.



ಪ್ರಾಣವನ್ನು ಕಾಪಾಡಿದವನಿಗೆ ಕೃತಜ್ಞತೆ ಹೇಳುವ ರೀತಿಯಲ್ಲಿ ಹುಮಯೂನ್ ಅವನನ್ನು ಒಂದು ದಿನವಿಡೀ ತನ್ನ ಸಿಂಹಾಸನದಲ್ಲಿ ಕೂಡಿಸಿದನು. ಅವನು ತನ್ನ ಅಧಿಕಾರಕ್ಕೆ ಗುರುತಾಗಿ ಚರ್ಮದ ಸಂಚಿಯನ್ನು ಚೂರುಚೂರಾಗಿ ಹರಿದು, ಅವುಗಳನ್ನು ತನ್ನ ಜೀವಿತದಲ್ಲಿ ಮರೆಯಲಾಗದ ದಿನದ ಜ್ಞಾಪಕ ಚಿಹ್ನೆಯಾಗಿ ತತ ಮಿತ್ರರಿಗೆಲ್ಲಾ ಹಂಚಿಕೊಟ್ಟನು.

ತನ್ನ ಸಿಂಹಾಸನವನ್ನು ರಕ್ಷಿಸಿಕೊಳ್ಳಲಿಕ್ಕೆ ಹುಮಯೂನ್ ಮಾಡಿದ ಪ್ರಯತ್ನಗಳಾವುವೂ ಫಲಿಸಲಿಲ್ಲ. ಕಡೆಗೆ ಶತ್ರುಗಳ ದಾಳಿಗೆ ತಡೆಯಲಾರದೆ ಉಮರು ಕೋಟದ ಒಬ್ಬ ಹೈಂದವ ರಾಜನ ಮನೆಯಲ್ಲಿ ಹುಮಯೂನ್ ಅಡಗಿಕೊಳ್ಳಬೇಕಾಗಿ ಬಂತು. ಆ ಸಮಯದಲ್ಲಿ ಹುಮಯೂನನಿಗೆ ಅವನ ರಾಣಿ ಬೇಗಂ ಹಮೀದಾ ಬಾನುವಿನಲ್ಲಿ ಮಗನಾಗಿ ಅಕ್ಬರ್ ಜನಿಸಿದನು.





ಢಿಲ್ಲಿಯನ್ನು ಆಕ್ರಮಿಸಿಕೊಂಡ ಷೇರ್‌ಷಹನು ಕ್ರಮವಾಗಿ ಉತ್ತರ ಭಾರತ ದೇಶವನ್ನೂ, ಪೂರ್ವ ಭಾರತ ಪ್ರಾಂತಗಳನ್ನೂ ತನ್ನ ಅಧಿಕಾರದೊಳಗೆ ತಂದುಕೊಂಡನು. ಅಧಿಕಾರವನ್ನು ಸುಸ್ಥಿರ ಮಾಡಿಕೊಂಡ ಮೇಲೆ, ನೂರ್ ವಂಶಕ್ಕೆ ಸೇರಿದ ಷೇರ್‌ಷಹನು ತನ್ನ ಪರಿಪಾಲನೆಯ ವಿಧಾನದಲ್ಲಿ ಅನೇಕ ಸಂಸ್ಕರಣೆಗಳನ್ನು ತಂದು ಸಮರ್ಥನೆಂದೂ, ಆದರ್ಶ ಪರಿಪಾಲಕನೆಂದೂ ಹೆಸರುಗಳಿಸಿದನು.

ಷೇರ್‌ಖಾನನೆಂದು ತನ್ನ ಹೆಸರನ್ನು ಬದಲಾಯಿಸಿ ಕೊಂಡ ಷೇರ್‌ಷಹನು ರಾಜಪುತ್ರರೊಂದಿಗೆ ಅನೇಕ ಯುದ್ಧಗಳನ್ನು ಮಾಡಿದನು. ಕಾಲಿಂಜರ್ ಕೋಟೆಯ ಸಮೀಪದಲ್ಲಿ ಯುದ್ಧ ನಡೆಯುತ್ತಿದ್ದಾಗ ಒಂದು ಸಾರಿ ತುಪಾಕಿಯ ಸಿಡಿ ಮದ್ದಿನ ಸಂಗ್ರಹಕ್ಕೆ ಬೆಂಕಿ ಹತ್ತಿತು. ಆ ಸಮಯದಲ್ಲಿ ಸಮೀಪದಲ್ಲಿದ್ದ ಷೇರ್‌ಷಹನು ಗಾಯಗೊಂಡು ಆ ಮೇಲೆ ಮೃತನಾದನು.





ಷೇರ್‌ಷಹನ ಮರಣವೂ, ಆ ಮೇಲೆ ಉಂಟಾದ ಅಸ್ತವ್ಯಸ್ತ ಪರಿಸ್ಥಿತಿಯೂ ಕಾಂದಹಾರದಲ್ಲಿದ್ದ ಹುಮಯೂನನಿಗೆ ಗೊತ್ತಾಯಿತು. ಅದೇ ಸುಸಂಧಿ ಎಂದು ಭಾವಿಸಿ ಭಾರತದೇಶಕ್ಕೆ ಬಂದು, ಹದಿನೈದು ವರ್ಷಗಳ ಕೆಳಗೆ ಕಳೆದುಕೊಂಡಿದ್ದ ತನ್ನ ರಾಜ್ಯಾಧಿಕಾರವನ್ನು ಮರಳಿ ವಶಪಡಿಸಿ ಕೊಳ್ಳಲು ತಲೆ ಹಾಕಿದನು. ಆ ಕಾಲಕ್ಕೆ ಕ್ರಮ ಶಿಕ್ಷಣದಿಂದ ಸಂದರ್ಭಕ್ಕೆ ತಕ್ಕ ಹಾಗೆ ಹೇಗೆ ಪ್ರವರ್ತಿಸಬೇಕೆಂಬುದನ್ನು ಹುಮಯೂನ್ ಚೆನ್ನಾಗಿ ತಿಳಿದಿದ್ದನು.

೧೫೫೫ ನೇ ವರ್ಷದಲ್ಲಿ ಲಾಹೋರ್, ಆಗ್ರ, ಢಿಲ್ಲಿ ಪ್ರಾಂತಗಳನ್ನು ಸುಲಭವಾಗಿ ಆಕ್ರಮಿಸಿಕೊಂಡು ಹುಮಯೂನ್ ಮೊಗಲ್ ಪರಿಪಾಲನೆಯನ್ನು ಮತ್ತೆ ಸ್ಥಾಪಿಸಿದನು. ಆದರೆ ಅವನು ನೂತನ ರಾಜ್ಯ ವೈಭವವನ್ನು ಒಂದು ವರ್ಷ ಪೂರ್ತಿ ಕೂಡಾ ಅನುಭವಿಸಲಾರದೆ ಹೋದನು. ತನ್ನ ಭವನದಲ್ಲಿದ್ದ ಗ್ರಂಥಾಲಯಕ್ಕೆ ಹೋಗುವ ಮಾಳಿಗೆ ಮೆಟ್ಟಿಲಿನಿಂದ ಜಾರಿ ಬಿದ್ದು ೧೫೫೬ ನೇ ವರ್ಷದಲ್ಲಿ ಮೃತನಾದನು.





# ಅಕ್ಬರ್ ಚಕ್ರವರ್ತಿ-೧

ಹುಮಾಯೂನ್ ಸಾಯುವ ಕಾಲದಲ್ಲಿ ಅವನ ಕುಮಾರನಾದ ಜಲಾಲುದ್ದೀನ್ ಮಹಮ್ಮದ್ ಅಕ್ಬರ್ ಪಂಜಾಬಿನಲ್ಲಿದ್ದನು. ಅಕ್ಬರನಿಗೆ ಹದಿನಾಲ್ಕನೆಯ ವಯಸ್ಸಿನಲ್ಲಿ ಮೊಗಲ್ ಸಾಮ್ರಾಜ್ಯದ ಪಟ್ಟಾಭಿಷೇಕವಾಯಿತು. ಹುಮಾಯೂನನ ಮಿತ್ರ ಭೈರಂಖಾನ್ ಅಕ್ಬರನ ಸಂರಕ್ಷಕನಾಗಿದ್ದನು.

ರಾಜ್ಯಾಧಿಕಾರವು ಕೈಗೆ ಬಂದ ಕೂಡಲೇ ಅಕ್ಬರ್ ಎಷ್ಟೋ ಸಮಸ್ಯೆಗಳನ್ನು ಇದಿರಿಸಬೇಕಾಯಿತು. ಷೇರ್‌ಷಹನ ವಂಶಕ್ಕೆ ಸೇರಿದ ಹೇಮು ಎಂಬ ಸೇನಾನಾಯಕನು ಢಿಲ್ಲಿಯನ್ನೂ ಆಗ್ರಾವನ್ನೂ ಆಕ್ರಮಿಸಿದನು. ಪಾನಿಪಟ್ಟಿನ ಹತ್ತಿರ ಅಕ್ಬರನಿಗೂ ಹೇಮುವಿಗೂ ಯುದ್ಧವು ಪ್ರಾರಂಭವಾಯಿತು. ಆ ಯುದ್ಧವೇ ಎರಡನೇ ಪಾನಿಪಟ್ ಯುದ್ಧವೆಂದು ಚರಿತ್ರೆಯಲ್ಲಿ ಪ್ರಸಿದ್ಧಿ ಪಡೆಯಿತು.





ಯುದ್ಧದಲ್ಲಿ ಮೊದಲು ಹೇಮುವಿನ ಬಲವಾದ ಸೈನ್ಯದ ಏಟಿಗೆ, ಯುದ್ಧ ವ್ಯೂಹಗಳಿಗೆ ಅಕ್ಬರನ ಸೈನ್ಯವು ತಡೆಯಲಾಗದೆ ಹೋಯಿತು. ಅಕ್ಬರನ ಪರಿಸ್ಥಿತಿ ಸೋಲಿನ ಅಂಚಿಗೇ ಬಂದಿತು. ಆದರೂ ಅಕ್ಬರನ ಅದೃಷ್ಟದಿಂದ, ಯಾರದೋ ಬಾಣದ ಪೆಟ್ಟಿನಿಂದ ಹೇಮು ಕುದುರೆಯಿಂದ ಕೆಳಗೆ ಬೀಳುವುದನ್ನು ನೋಡಿ ಅವನ ಸೈನಿಕರು ಭಯ ಭ್ರಾಂತರಾದರು. ಆ ಕಾರಣದಿಂದಲೇ ಅಕ್ಬರನಿಗೇ ವಿಜಯವಾಯಿತು.



ಭಟರು ಹೇಮುವನ್ನು ಬಂಧಿಸಿ ತಂದು ಅಕ್ಬರನ ಮುಂದೆ ನಿಲ್ಲಿಸಿದರು. ಶತ್ರುಶೇಷವನ್ನು ಉಳಿಸ ಕೂಡದು. ಅವನನ್ನು ಕೊಲ್ಲಿಸಬೇಕೆಂದು ಭೈರಂಖಾನ್ ಸಲಹೆ ಮಾಡಿದನು. ಆದರೆ ನಿಸ್ಸಹಾಯಕನಾಗಿದ್ದ ಬಂದಿಯನ್ನು ಕೊಲ್ಲಲು ಅಕ್ಬರನು ನಿರಾಕರಿಸಿದುದರಿಂದ, ಭೈರಂಖಾನ್ ತಾನೇ ಹೇಮುವಿನ ತಲೆಯನ್ನು ಕಡಿದು ಹಾಕಿದನು.

ಪರಸ್ಪರ ವಿರುದ್ಧ ಸ್ವಭಾವದ ಅಕ್ಬರ್ ಭೈರಂಖಾನರ ಮಧ್ಯೆ ಅಭಿಪ್ರಾಯಭೇದಗಳೂ, ಅನುಮಾನಗಳೂ ತಲೆ ಎತ್ತಿದುವು. ಅಕ್ಬರನ ಮೇಲೆ ಅಧಿಕಾರ ಚಲಾಯಿಸಲಿಕ್ಕೆ ಭೈರಂಖಾನ್ ಪ್ರಯತ್ನಿಸುತ್ತಿದ್ದನು. ಆ ಸಂಗತಿಯನ್ನು ಕಂಡು ಹಿಡಿದ ಅಕ್ಬರ್ ಆತನನ್ನು ಪಟಾಕ್ತನೆ ಅಧಿಕಾರದಿಂದ ಕಿತ್ತು ಬಿಟ್ಟನು. ಭೈರಂಖಾನ್ ಇದಿರು ತಿರುಗಿ ಸಿಕ್ಕಿಬಿದ್ದು, ಮಕ್ಕಾ ಯಾತ್ರೆಗೆ ಹೋಗಲು ಅಕ್ಬರನ ಅನುಮತಿ ಪಡೆದನು.





ಭೈರಂಖಾನನಿಗೆ ಅನೇಕ ಮಂದಿ ಶತ್ರುಗಳಿದ್ದರು. ಅಫ್‌ಘನ್‌ಸ್ಥಾನಕ್ಕೆ ಸೇರಿದ ಶತ್ರುವೊಬ್ಬನು ಭೈರಂಖಾನ್ ಮಕ್ಕಾಕ್ಕೆ ಹೋಗುವ ಸಂಗತಿಯನ್ನು ತಿಳಿದು, ಮಾರ್ಗ ಮಧ್ಯದಲ್ಲಿ ಹೊಂಚಿ ಕೊಂಡಿದ್ದು, ಕತ್ತಿಯಿಂದ ತಿವಿದು ಅವನನ್ನು ಕೊಂದು ಬಿಟ್ಟನು.

ಎರಡನೇ ಪಾನಿಪಟ್ ಯುದ್ಧದಲ್ಲಿ ವಿಜಯ ಸಾಧಿಸಿದುದರಿಂದ ಅಕ್ಬರನಿಗೆ ದೊಡ್ಡ ಹೆಸರು ಬಂದಿತು. ಆದರೂ ಅಕ್ಬರ್ ವಿಜಯಗರ್ವದಿಂದ ಉಬ್ಬಿಹೋಗದೆ, ಪರಾಕ್ರಮಶಾಲಿಗಳಾದ ರಾಜಪುತ್ರ ರಾಜರೊಂದಿಗೆ ಸ್ನೇಹ ಸಂಬಂಧವನ್ನು ಬಲಪಡಿಸಿಕೊಳ್ಳಲು ಪ್ರಯತ್ನ ಮಾಡಿದನು. ಜೈಪೂರ್ ರಾಜನಾದ ಬಿಹಾರಿಮಲ್ಲನ ಕುಮಾರಿಯನ್ನು ವಿವಾಹ ಕೂಡಾ ಮಾಡಿಕೊಂಡನು.





ಆ ಮೇಲೆ ಅಕ್ಬರ್ ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಕಾರ್ಯಕ್ಕೆ ತೊಡಗಿದನು. ಅಕ್ಬರನ ದೃಷ್ಟಿ ರಾಣಿ ದುರ್ಗಾವತಿ ಪಾಲಿಸುತ್ತಿದ್ದ ಗೊಂಡ್ವಾನಾ ರಾಜ್ಯದ ಕಡೆಗೆ ತಿರುಗಿತು. ಗಂಡನು ತೀರಿಹೋದ ಮೇಲೆ ಚಿಕ್ಕವನಾದ ತನ್ನ ಕುಮಾರ ವೀರನಾರಾಯಣನ ಪರವಾಗಿ ರಾಣಿ ದುರ್ಗಾವತಿ ರಾಜ್ಯ ಪಾಲನೆ ಮಾಡುತ್ತಿದ್ದಳು.

ಗೊಂಡ್ವಾನಾವನ್ನು ಜಯಿಸಲು ಅಕ್ಬರನು ಆಸಫ್ ಖಾನ್ ಎಂಬ ಸೇನಾನಾಯಕನನ್ನು ಕಳುಹಿಸಿದನು. ಅವನು ಆಕಸ್ಮಿಕವಾಗಿ ದಾಳಿ ಮಾಡಿದುದರಿಂದ ರಾಣಿ ದುರ್ಗಾವತಿ ಯುದ್ಧಕ್ಕೆ ಸಿದ್ಧವಾಗಿಲ್ಲದಿದ್ದರೂ, ಅವಳ ಸೈನಿಕರು ಅಕ್ಬರನ ಸೇನೆಯನ್ನು ಧೈರ್ಯದಿಂದ ಇದಿರಿಸಿದರು.





ಆಗ ರಾಣಿ ದುರ್ಗಾವತಿ ತನ್ನ ಸೇನೆಗೆ ತಾನೇ ನಾಯಕತ್ವ ವಹಿಸಿ, ತನ್ನ ರಾಜ್ಯದ ಮೇಲೆ ದುರಾಕ್ರಮಣ ಮಾಡಿದ ಐವತ್ತು ಸಾವಿರ ಮಂದಿ ಸೈನಿಕರನ್ನು ಇದಿರಿಸಿದಳು. ಯುವರಾಜ ವೀರನಾರಾಯಣನೂ ಯುದ್ಧರಂಗಕ್ಕೆ ಇಳಿದನು. ಯುವರಾಜನನ್ನು ಹೇಗಾದರೂ ಹಿಡಿಯಬೇಕೆಂದು ಅಸಫ್‌ಖಾನ್ ವ್ಯೂಹ ಮಾಡಿದನು.

ಬಾಣದ ಏಟುತಿಂದ ವೀರನಾರಾಯಣನನ್ನು ಅಸಫ್‌ಖಾನನ ಸೈನಿಕರು ಮುತ್ತಿಕೊಂಡರು. ಈ ವಿಷಯ ತಿಳಿದು ರಾಣಿ ದುರ್ಗಾವತಿ, ಕೂಡಲೇ ಅಲ್ಲಿಗೆ ಹೋಗಿ, ಆ ಸೈನಿಕರೊಂದಿಗೆ ಹೋರಾಡಿ, ಕುಮಾರನನ್ನು ಬಿಡುಗಡೆ ಮಾಡಿ ರಾಜಭವನಕ್ಕೆ ಕಳುಹಿಸಿದಳು. ಅವನ ರಕ್ಷಣೆಗಾಗಿ ಅರ್ಧಮಂದಿ ಸೈನಿಕರು ಹೋದುದರಿಂದ ಅವಳ ಪಕ್ಷಬಲಹೀನವಾಯಿತು. ಇನ್ನು ಸೋಲು ತಪ್ಪದೆಂದು ನಿರ್ಧರಿಸಿ ದುರ್ಗಾವತಿ ಕತ್ತಿಯಿಂದ ತಿವಿದುಕೊಂಡು ಪ್ರಾಣ ಬಿಟ್ಟಳು.





ರಾಣಿ ದುರ್ಗಾವತಿಯ ಮರಣವಾದ ಮೇಲೆ ಯುವರಾಜ ವೀರನಾರಾಯಣನೇ ಸೇನಾನಾಯಕತ್ವ ವಹಿಸಿದನು. ಅಕ್ಬರನ ಸೇನೆ ಸಂಖ್ಯಾಬಲದಲ್ಲಿ ಬಹಳ ಹೆಚ್ಚೆಂದು ತಿಳಿದುಕೂಡಾ ವೀರನಾರಾಯಣನು ತನ್ನ ದೇಹದಲ್ಲಿ ಶ್ವಾಸವಿರುವವರೆಗೂ ಹೋರಾಡಿ, ವೀರಮರಣವನ್ನಪ್ಪಿದನು.



# ರಾಣಾ ಪ್ರತಾಪ್

ಅಕ್ಬರ್ ತನ್ನ ಸ್ನೇಹಪೂರ್ವಕವಾದ ಯೋಜನೆಗಳ ಮೂಲಕ, ಮೇವಾರ್ ಯುವರಾಜನಾದ ರಾಣಾ ಪ್ರತಾಪನೊಬ್ಬನ ಹೊರತು, ಉಳಿದ ರಾಜಪುತ್ರ ರಾಜರೆಲ್ಲರನ್ನೂ ವಶಪಡಿಸಿಕೊಂಡನು. ಸ್ವತಂತ್ರ ಭಾವನೆಗಳು ತುಂಬಿದ, ವೀರ ಸಾಹಸಿಯಾದ ರಾಣಾ ಪ್ರತಾಪ್ ಮಾತ್ರ ಅಕ್ಬರನಿಗೆ ತಲೆ ಬಾಗಲಿಲ್ಲ. ಯಾವ ವಿಧದಿಂದಾದರೂ ಮೇವಾರವನ್ನು ವಶಪಡಿಸಿಕೊಳ್ಳಲೇಬೇಕೆಂದು ಅಕ್ಬರನು ಹಂಚಿಕೆ ಹಾಕಿಕೊಂಡೇ ಇದ್ದನು.

ಮೇವಾರದ ರಾಜಧಾನಿಯಾದ ಚಿತ್ತೋರಿನ ಮೇಲೆ ಅಕ್ಬರನು ಮೊದಲೇ ದಾಳಿ ಮಾಡಿದ್ದನು. ಆಗ ರಾಣಾ ಪ್ರತಾಪನ ತಂದೆ ರಾಣಾ ಉದಯಸಿಂಹನು ಕಾಡಿಗೆ ಓಡಿ ಹೋಗಿದ್ದನು. ಆದರೆ ಧೈರ್ಯಶಾಲಿಯಾದ ಜಯಮಲ್ಲ ಮತ್ತು ಪುನ್ನ ಎಂಬಿಬ್ಬರು ರಾಜಪುತ್ರ ಸೇನಾನಾಯಕರು ಕೋಟೆಗೆ ರಕ್ಷಕರಾಗಿ ನಿಂತು ಹೋರಾಡುತ್ತಿದ್ದುದರಿಂದ ಕೋಟೆಯನ್ನು ಹಿಡಿಯಲು ಅಕ್ಬರನಿಂದಾಗಲಿಲ್ಲ.





ಒಂದು ದಿನ ರಾತ್ರಿ ಅಕ್ಬರ್ ತನ್ನ ಸೈನಿಕ ಶಿಬಿರವನ್ನು ಸುತ್ತಿಕೊಂಡು ಬರುವಾಗ, ಗುಡ್ಡದ ಮೇಲಿನ ಕೋಟೆಯ ಗೋಡೆಯನ್ನು ಕೆಲ ಮಂದಿ ರಾಜಪುತ್ರರು ದೀವಿಟಿಗೆಯ ಬೆಳಕಿನಿಂದ ಪರಿಶೀಲಿಸುವುದನ್ನು ನೋಡಿದನು. ಕೂಡಲೇ ಅಕ್ಬರನು ಪಕ್ಕದಲ್ಲಿದ್ದ ಸೈನಿಕನ ಕೈಯಿಂದ ತುಪಾಕಿಯನ್ನು ಎಳೆದುಕೊಂಡು ಆ ರಾಜಪುತ್ರ ವೀರರಲ್ಲಿ ಒಬ್ಬನನ್ನು ಸುಟ್ಟುಕೊಂದನು. ಹಾಗೆ ಅಕ್ಬರನ ತುಪಾಕಿ ಗುಂಡಿಗೆ ಬಲಿಯಾದವನು ಜಯಮಲ್ಲನೇ.



ಪುನ್ನು ಕೂಡಾ ಅದಕ್ಕೆ ಮೊದಲೇ ಸತ್ತು ಹೋಗಿದ್ದನು. ಆದುದರಿಂದ ಚಿತ್ತೋರು ಕೋಟೆ ಸುಲಭದಲ್ಲಿ ಅಕ್ಬರನ ವಶವಾಯಿತು. ಮರುದಿನ ಬೆಳಿಗ್ಗೆ ಎರಡು ಸಾವಿರ ಮಂದಿ ರಾಜಪುತ್ರ ಸೈನಿಕರು ಕೋಟೆಯೊಳಗಿನಿಂದ ಅಪೂರ್ವ ರೀತಿಯಲ್ಲಿ ತಪ್ಪಿಸಿಕೊಂಡರು. ಅವರು ಹೆಂಗಸರು ಮಕ್ಕಳ ಕೈಗಳನ್ನು ಬಂಧಿಸಿ ಎಳೆದು ಕೊಂಡು ಅಕ್ಬರನ ಸೈನಿಕ ಶಿಬಿರಗಳ ಬದಿಯಿಂದಾಗಿಯೇ ಹೋದರು. ತಮ್ಮ ಸೈನಿಕರೇ ಖೈದಿಗಳನ್ನು ಕರೆದುಕೊಂಡು ಹೋಗುವರೆಂದು ಅಕ್ಬರನ ಸೈನಿಕರು ಮೋಸಹೋದರು.

ರಾಜಪುತ್ರ ವೀರರ ಧೈರ್ಯ ಸಾಹಸಗಳಿಗೆ ಮುಗ್ಧನಾದ ಅಕ್ಬರನು, ದಿಲ್ಲಿಗೆ ಹಿಂದಿರುಗಿದ ಮೇಲೆ, ಆ ವೀರರ ಸ್ಮೃತಿ ಚಿಹ್ನೆಯಾಗಿ ಕೋಟೆಯ ಇದಿರಿನಲ್ಲಿ ಜಯಮಲ್ಲನೂ, ಪುನ್ನುವೂ ಕುದುರೆಯ ಮೇಲೆ ಸವಾರಿ ಮಾಡುವ ಹಾಗೆ, ಎರಡು ವಿಗ್ರಹಗಳನ್ನು ಪ್ರತಿಷ್ಠಿಸಿದನು.





ಚಿತ್ತೋರನ್ನು ಕಳೆದುಕೊಂಡರೂ ರಾಣಾ ಪ್ರತಾಪ್ ಮೊಗಲರನ್ನು ಇದಿರಿಸುವುದನ್ನು ಮಾತ್ರ ಬಿಡಲಿಲ್ಲ. ಕಡೆಗೆ ಸಹೋದರನಾದ ಶಕ್ತಿಸಿಂಹನೂ ಅಕ್ಬರನ ಪಕ್ಷ ಸೇರಿಬಿಟ್ಟನು. ಒಂದು ದಿನ ಪರ್ವತ ಶ್ರೇಣಿಗಳ ಪಕ್ಕದಲ್ಲಿ, ತನ್ನ ಚೇತಕ್ ಎಂಬ ಕುದುರೆಯ ಮೇಲೆ ರಾಣಾ ಪ್ರತಾಪ್ ಹೋಗುತ್ತಿರಲು, ಅಸಫ್ ಖಾನನ ನಾಯಕತ್ವದಲ್ಲಿ ಮೊಗಲ್ ಸೈನ್ಯವು ಅವನನ್ನು ಬೆಂಬತ್ತಿತು.



ತಪ್ಪಿಸಿಕೊಂಡು ಹೋಗುವಾಗ ರಾಣಾ ಪ್ರತಾಪನ ಚೇತಕ್ ಕುದುರೆಗೆ ದೊಡ್ಡ ಗಾಯವಾಯಿತು. ಮೊದಲೇ ದಣಿದಿದ್ದ ಕುದುರೆಯಾದರೂ ನಿಲ್ಲದೆ ವಾಯುವೇಗದಿಂದ ಓಡುತ್ತಿದ್ದಿತು. ಯಾರೋ ಕರೆಯುವ ಶಬ್ದ ಕೇಳಿ ರಾಣಾ ಪ್ರತಾಪ್ ಹಿಂದಿರುಗಿ ನೋಡಿದನು. "ಅಣ್ಣಾ, ನಿನ್ನ ಕುದುರೆ ಸಾಯುತ್ತದೆ. ನನ್ನ ಕುದುರೆ ತೆಗೆದುಕೋ" ಎಂದನು ಶಕ್ತಿಸಿಂಹ. ಆಗಲೇ ಚೇತಕ್ ಸತ್ತು ಬಿದ್ದುದರಿಂದ ರಾಣಾ ಪ್ರತಾಪ್ ತನ್ನ ಸೋದರನ ಕುದುರೆಯನ್ನೇರಿ, ಅಲ್ಲಿಂದ ತಪ್ಪಿಸಿಕೊಂಡು ಹೋಗಿಬಿಟ್ಟನು.

ರಾಣಾ ಪ್ರತಾಪ್ ತನ್ನ ರಾಣಿಯೊಂದಿಗೂ, ಮಕ್ಕಳೊಂದಿಗೂ ಅರಣ್ಯಗಳಲ್ಲಿ ಅಷ್ಟಕಷ್ಟಗಳನ್ನೂ ಅನುಭವಿಸಿದನು. ಒಂದು ಸಾರಿ ಶತ್ರುಗಳು ರಾಣಾನ ಕುಟುಂಬವನ್ನು ನಾಶಮಾಡಲಿಕ್ಕಾಗಿ ಪ್ರಯತ್ನಿಸಿದಾಗ, ಅಡವಿಯೊಳಗಿದ್ದ ಕೆಲವು ಮಂದಿ ಭಿಲ್ಲರು ರಾಣಾನ ಮಕ್ಕಳನ್ನು ತಮ್ಮ ಬುಟ್ಟಿಗಳಲ್ಲಿ ಬಚ್ಚಿಟ್ಟು ಅಪಾಯದಿಂದ ಪಾರುಗೊಳಿಸಿದರು.





ರಾಣಾ ಪ್ರತಾಪನ ಮಕ್ಕಳು ಕಾಯಿ, ಚಿಗುರುಗಳನ್ನು ತಿನ್ನುತ್ತ, ಮರದ ಬಳ್ಳಿಗಳಿಂದ ಕಟ್ಟಲ್ಪಟ್ಟ ಉಯ್ಯಾಲೆಯಲ್ಲಿ ನಿದ್ರಿಸುತ್ತ, ಕಾಲಕಳೆಯಬೇಕಾದ ಅಸಹನೀಯ ಪರಿಸ್ಥಿತಿಯುಂಟಾಯಿತು. ಆದರೂ ಸಹ ಶತ್ರುಗಳಿಗೆ ತಲೆ ಬಾಗಲಾರೆನೆಂದು ಪ್ರತಿಜ್ಞೆ ತೊಟ್ಟಿದ್ದ ಪ್ರತಾಪನು, ಬಾಗಲೇ ಇಲ್ಲ.

ಒಂದು ದಿನ ರಾಣಾ ಪ್ರತಾಪನ ಮಗಳು ತಿನ್ನುತ್ತಿದ್ದ ಗೆಣಸನ್ನು ಕಾಡು ಬೆಕ್ಕು ಎಳೆದು ಕೊಂಡು ಓಡಿ ಹೋಯಿತು. ಹಸಿವಿನಿಂದ ಅಳುತ್ತಾ ಇದ್ದ ಮಗಳನ್ನು ನೋಡಿ ರಾಣಾ ಪ್ರತಾಪನ ಕಣ್ಣುಗಳಲ್ಲಿ ನೀರು ತುಂಬಿತು. ಈ ಸಂಘಟನೆಯು ಮೇಲೆ ರಾಣಾನಿಗೆ ಮೊಗಲರನ್ನು ಇದಿರಿಸಬೇಕೆಂಬ ಹಟ ಇನ್ನಷ್ಟು ಗಟ್ಟಿಯಾಯಿತೇ ಹೊರತು ಸಡಿಲಾಗಲಿಲ್ಲ !





ಅಸಮಾನವಾದ ಧೈರ್ಯ ಸಾಹಸಗಳಿಂದ ರಾಣಾ ಪ್ರತಾಪ್ ಹೋರಾಡಿದನು. ನಿಧಾನವಾಗಿ ಮೇವಾರ್ ಪರಗಣೆಯೊಳಗಿನ ಕೆಲವು ಪ್ರಾಂತ ಗಳನ್ನು ಮೊಗಲರಿಂದ ತನ್ನ ವಶಕ್ಕೆ ತಂದು ಕೊಂಡನು. ಅಂತೂ ಅಕ್ಬರನ ಅಧಿಕಾರಕ್ಕೆ ತಲೆ ಬಾಗದ ಏಕೈಕ ರಾಜಪುತ್ರನಾಗಿ ನಿಂತವನು ರಾಣಾ ಪ್ರತಾಪ್.

ರಾಜಪುತ್ರರ ವೀರ ಸಾಹಸಗಳಿಗೆ ಪ್ರತೀಕವಾಗಿ ಜೀವನವನ್ನು ಸಾಗಿಸಿದ ರಾಣಾ ಪ್ರತಾಪ್ ಭಾರತ ದೇಶದ ಚರಿತ್ರೆಯ ಮಹಾಪುರುಷರಲ್ಲಿ ಒಬ್ಬನಾಗಿದ್ದಾನೆ. ಬಲಿಷ್ಠರಾದ ಶತ್ರುಗಳಿಗೆ ಎದೆಯೊಡ್ಡಿ ಸ್ವತಂತ್ರ ಜೀವನ ಸಾಗಿಸಿದ ರಾಣಾ ಪ್ರತಾಪ್ ೧೫೯೭ ನೇ ವರ್ಷದಲ್ಲಿ ಅಮರ ನಾದನು.





# ಅಕ್ಬರ್ ಚಕ್ರವರ್ತಿ-೨

ಆಗ್ರಾದ ಸಮೀಪದ ಸಿಕ್ರೀ ಎಂಬ ಸುಂದರ ಪ್ರಾಂತದ ಹತ್ತಿರವಿರುವ ಚಿಕ್ಕ ಗುಡ್ಡದ ಮೇಲೆ ಷೇಕ್ ಸಲೀಂಚಿಸ್ತೀ ಎಂಬ ಸಾಧು ವಾಸವಾಗಿದ್ದನು. ಆತನ ಮೇಲೆ ಅಕ್ಬರನಿಗೆ ಅತ್ಯಂತ ಭಕ್ತಿಯೂ ಗೌರವವೂ ಇದ್ದುವು.

೧೫೬೯ ನೇ ವರ್ಷದಲ್ಲಿ ಅಕ್ಬರನ ರಾಜಪುತ್ರ ರಾಣಿ ಮಗನನ್ನು ಹಡೆದಳು. ಸಾಧು ಷೇಕ್ ಸಲೀಂ ಆಶೀರ್ವಾದ ಮಾಡಿದುದರಿಂದಲೇ ಪುತ್ರನು ಹುಟ್ಟಿದನೆಂಬ ವಿಶ್ವಾಸದಲ್ಲಿ ಅಕ್ಬರ್ ತನ್ನ ಮಗನಿಗೆ ಸಲೀಂ ಎಂದು ನಾಮಕರಣ ಮಾಡಿದನು. ಅಕ್ಬರನ ತರುವಾಯ ಈ ಯುವ ರಾಜನೇ ಮೊಗಲ್ ಸಿಂಹಾಸನವನ್ನು ಏರಿದನು.





ಸಲೀಂ ಸಾಧುವಿನ ಗೌರವಾರ್ಥವಾಗಿ ಅಕ್ಬರ್ ಸಿಕ್ರೀಯಲ್ಲಿ ಒಂದು ಕೋಟೆ ನಿರ್ಮಿಸಿದನ್ನು ಅಲ್ಲಿ ದೊಡ್ಡ ದೊಡ್ಡ ಅನೇಕ ಅರಮನೆಗಳನ್ನು ಕೂಡಾ ನಿರ್ಮಿಸಿ ಅದನ್ನೇ ತನ್ನ ರಾಜಧಾನಿಯಾಗಿಯೂ ಮಾಡಿಕೊಂಡನು. ಈ ಕೋಟೆಯಿಂದಲೇ ಅವನು ಗುಜರಾತಿನ ಮೇಲೆ ದಂಡೆತ್ತಿ ವಿಜಯ ಸಾಧಿಸಿದನು. ಆಗಿನಿಂದ ಸಿಕ್ರೀಗೆ " ಫತೇ ಪೂರ್ ಸಿಕ್ರೀ " (ವಿಜಯ ನಗರ) ಎಂಬ ಹೆಸರು ಬಂತು.



೧೫೯೩ ನೇ ವರ್ಷದಲ್ಲಿ ಅಕ್ಬರನು ಅಹ್ಮದ್ ನಗರದ ಮೇಲೆ ದಾಳಿ ನಡೆಸಿದನು. ಅದಕ್ಕೆ ಮೊದಲೇ ಅಹ್ಮದ್ ನಗರದ ರಾಜನು ಸತ್ತಿದ್ದನು. ಅವನ ತರುವಾಯ ಅವನ ಸೋದರಿ ಬಿಜಾಪೂರ್ ರಾಣಿ ಚಾಂದ್ ಬೀಬೀ ಅಹ್ಮದ್ ನಗರವನ್ನು ಪಾಲಿಸಿಕೊಂಡಿದ್ದಳು. ಮೊಗಲರ ಸೇನೆಯನ್ನು ಚಾಂದ್ ಬೀಬೀ ಇದಿರಿಸಿದಳು.

ಮೊದಲು ಅಕ್ಬರನ ಸೇನೆಯೊಂದಿಗೆ ಧೈರ್ಯದಿಂದ ಹೋರಾಡಿದ ಚಾಂದ್‌ಬೀಬೀ, ಆಮೇಲೆ ಅಸಂಖ್ಯಾಕರಾದ ಮೊಗಲ್ ಸೈನ್ಯದ ರಭಸಕ್ಕೆ ತಾಳಿಕೊಳ್ಳುವುದು ಕಷ್ಟವೆಂದು ತಿಳಿದಳು. ಆದುದರಿಂದ ಮೊಗಲರು ಅಹ್ಮದ್ ನಗರವನ್ನು ಬಿಟ್ಟು ಹೋಗುವ ಪಕ್ಷದಲ್ಲಿ ಬೀರಾರನ್ನು ಅವರಿಗೆ ಒಪ್ಪಿಸುವುದಕ್ಕೆ ಅಂಗೀಕರಿಸುವುದಾಗಿ ರಾಯಭಾರ ಕಳುಹಿಸಿದಳು.





ಅದರಂತೆ ಮೊಗಲ್ ಸೇನೆಗಳು ಹಿಂದಿರುಗಿದುವು. ಆದರೆ ಚಾಂದ್ ಬೀಬೀಯ ನಿರ್ಣಯವು ಅಹ್ಮದ್ ನಗರದ ಕೆಲಮಂದಿ ಪ್ರಮುಖರಿಗೆ ಹಿಡಿಸದೆಹೋದುದರಿಂದ, ಅವರು ಅವಳನ್ನು ಹತ್ಯ ಮಾಡಿಬಿಟ್ಟರು. ಅದರ ಫಲಿತವಾಗಿ ಪೂರ್ತಿ ಅಹ್ಮದ್ ನಗರವು ಮೊಗಲರ ವಶವಾಯಿತು.

ಬಲುಬೇಗದಲ್ಲೇ ಅಕ್ಬರನು ಸುವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಅಷ್ಟೇ ಅಲ್ಲದೆ ದೊಡ್ಡ ಪರಿಪಾಲನಾ ದಕ್ಷನೆಂದೂ ಹೆಸರು ಪಡೆದನು. ಅವನ ಮಂತ್ರಿ ಅಬುಲ್ ಫಜಲ್ ಅಕ್ಬರನ ಪರಿಪಾಲನಾ ವಿಧಾನಗಳನ್ನು ವಿವರಿಸುವ "ಐನ್-ಇ-ಅಕ್ಬರೀ" ಎಂಬ ಚಾರಿತ್ರಿಕ ಗ್ರಂಥವನ್ನು ಬರೆದನು.





ಮಂತ್ರಿ ಬೀರಬಲ್, ಪ್ರಸಿದ್ಧ ಸಂಗೀತ ವಿದ್ವಾಂಸ ನಾದ ತಾನ್ ಸೇನ್, ಕವಿ ಅಬುಲ್ ಫೈಜೀ. ಭೂ ಸಂಸ್ಕರಣೆಗಳನ್ನು ಪ್ರವೇಶಗೊಳಿಸಿದ ತೋಡರ್‌ಮಲ್ ಮೊದಲಾದ ಪ್ರಮುಖರು ಅಕ್ಬರನ ಆಸ್ಥಾನದಲ್ಲಿದ್ದರು.

ಬೇರೆ ಬೇರೆ ಮತಗಳು ಮನುಷ್ಯ–ಮನುಷ್ಯರೊಳಗೆ ಭೇದಗಳನ್ನು ಸೃಷ್ಟಿಸುತ್ತವೆಂದು ತಿಳಿದು ಅಕ್ಬರ್, ಸರ್ವಮತ ಸಮನ್ವಯವಾದ "ದಿನ್-ಇಲ್ಲಾಹಿ" ಎಂಬ ನೂತನ ಮತ ಸಿದ್ಧಾಂತವನ್ನು ರೂಪುಗೊಳಿಸಿದನು. ಆದರೆ ಆ ಮತವು ಹೆಚ್ಚು ಕಾಲ ನಿಲ್ಲಲಾರದೆ ಹೋಯಿತು.





ಮಹಾ ಸಾಮ್ರಾಜ್ಯದ ಅಧಿನೇತನಾದರೂ ಅಕ್ಬರ್ ಅಂತಿಮ ದಶೆಯಲ್ಲಿ ವಿಷಾದ ಸಂಘಟನೆಗಳನ್ನು ಇದಿರಿಸಬೇಕಾಗಿ ಬಂತು. ವ್ಯಾಯವ್ಯದ ಸರಿಹದ್ದಿನಲ್ಲಿ ಬೀರಬಲ್ ಕೊಲ್ಲಲ್ಪಟ್ಟನು. ಯುವರಾಜ ಸಲೀಂನ ಪ್ರೋದ್ಬಲದಿಂದ ಅಕ್ಬರನ ಆಪ್ತಮಿತ್ರನಾದ ಅಬುಲ್ ಫಜಲ್ ದಾರುಣವಾಗಿ ಕೊಲೆಯಾದನು. ಆ ಇಬ್ಬರ ಮರಣಗಳು ಅಕ್ಬರನಿಗೆ ದೊಡ್ಡ ದುಃಖವನ್ನುಂಟು ಮಾಡಿದುವು.

ಇಂಗ್ಲಂಡನ್ನು ಪರಿಪಾಲಿಸಿದ ಮೊದಲನೇ ಎಲಿಜಬೆತ್ ರಾಣಿಯ ಬಳಿಯಿಂದ ಜಾನ್ ನ್ಯೂಬೆರಿಯ ಮುಖಂಡತ್ವದಲ್ಲಿ ಮೂವರು ಅಧಿಕಾರಿಗಳು ಬಂದು ಅಕ್ಬರನನ್ನು ಕಲೆತುಕೊಂಡರು. ಈ ಮೂವರೇ ಮೊತ್ತಮೊದಲು ಭಾರತ ದೇಶಕ್ಕೆ ಬಂದ ಆಂಗ್ಲೇಯ ಅಧಿಕಾರಿಗಳು.





ಅಕ್ಬರ್ ತುಂಬಾ ಅಭಿಮಾನಿಸಿಕೊಂಡಿದ್ದ ರಾಜಧಾನೀ ನಗರವಾದ ಫತೇಪೂರ್ ಸಿಕ್ರೀ ನೀರಿಲ್ಲದ ಕಾರಣದಿಂದ ಬಹಳ ಕಾಲ ಬೆಳಗದೆ ಹೋಯಿತು. ಬ್ರಹ್ಮಾಂಡದಂತಹ ರಾಜಪ್ರಾಸಾದಗಳನ್ನು ಅಕ್ಬರನು ಬಿಡಲಾಗದೆ ಬಿಡಬೇಕಾಯಿತು. ಯುವರಾಜ ಸಲೀಂನ ಪ್ರವರ್ತನೆಯಿಂದ ಇನ್ನಷ್ಟು ನೊಂದು ಹೋದ ಅಕ್ಬರ್ ೧೬೦೫ ನೇ ವರ್ಷದಲ್ಲಿ ಮೃತನಾದನು.



## ಜಹಾಂಗೀರ್, ಷಾಜಹಾನ್

ಅಕ್ಬರನ ಆನಂತರ ಅವನ ಮಗ ಸಲೀಮನು, ಜಹಾಂಗೀರ್ ಎಂಬ ಹೆಸರಿನಿಂದ ೧೬೦೫ ನೇ ಸಂವತ್ಸರದಲ್ಲಿ ಮೊಗಲ್ ಸಿಂಹಾಸನವನ್ನು ಏರಿದನು. ಆದರ್ಶ ಪರಿಪಾಲಕನಾದ ತಂದೆಯಂತೆ ಇವನಿರಲಿಲ್ಲ. ಇವನು ನಿರ್ಮಾಣಾತ್ಮಕ ಕಾರ್ಯಗಳಿಗಿಂತಲೂ ವಿನೋದಗಳಿಗೇ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದನು.

ಸೌಂದರ್ಯದ ರಾಣಿ ಎಂದು ಹೆಸರು ಪಡೆದ ಮೆಹರುನ್ನೀಸಾ ಎಂಬ ವಿತಂತು ಯುವತಿಯನ್ನು, ಜಹಾಂಗೀರನು ಮದುವೆ ಮಾಡಿಕೊಂಡು ಅವಳಿಗೆ ನೂರ್ಜಹಾನ್ ಎಂದು ಹೆಸರಿಟ್ಟನು. ಕ್ರಮಕ್ರಮವಾಗಿ ನೂರ್ಜಹಾನ್ ರಾಜ್ಯಪಾಲನೆಯ ವ್ಯವಹಾರಗಳಿಗೂ ತಲೆಹೊಗಿಸ ತೊಡಗಿದಳು. ಜಹಾಂಗೀರ್ ನಾಣ್ಯಗಳ ಮೇಲೆ ತನ್ನ ಚಿತ್ರದ ಜತೆಯಲ್ಲಿ ನೂರ್ಜಹಾನಳ ಚಿತ್ರವನ್ನೂ ಮುದ್ರಿಸತೊಡಗಿದನು.





ಜಹಾಂಗೀರನ ಹಿರಿಯ ಮಗನಾದ ಖುಸ್ರೂ ತಂದೆಯ ಮೇಲೆ ಬಂಡಾಯವೆದ್ದು ಸಿಂಹಾಸನವನ್ನು ಆಕ್ರಮಿಸಲು ನೋಡಿದನು. ಜಹಾಂಗೀರ್ ದೊಡ್ಡ ಯುದ್ಧವೀರನಲ್ಲದಿದ್ದರೂ, ಆ ಸಂಗತಿ ತಿಳಿದ ಕೂಡಲೇ, ಖುಸ್ರೂವನ್ನು ಪಂಜಾಬಿನವರೆಗೆ ಓಡಿಸಿ, ಅಲ್ಲಿಯೇ ಅವನನ್ನು ಬಂಧಿಸಿ ಹಾಕಿದನು. ಖುಸ್ರೂ ಅಲ್ಲಿಯ ಸೆರೆಯಲ್ಲಿಯೇ ತೀರಿಹೋದನು.



ಜಹಾಂಗೀರನಲ್ಲಿ ನ್ಯಾಯಬುದ್ಧಿ ಎಚ್ಚರವಾಗಿತ್ತೆಂದೇ ಹೇಳಬಹುದು. ನ್ಯಾಯಕ್ಕಾಗಿ ಅವನು ದೀಕ್ಷೆ ಹಿಡಿದು ಕೆಲಸ ಮಾಡಿದನು. ಆಗ್ರಾದ ತನ್ನ ಭವನದ ದ್ವಾರದಿಂದ ಯಮುನಾ ನದಿಯ ತೀರದ ವರೆಗೆ, ಅರುವತ್ತು ಗಂಟೆಗಳು ನೇತಾಡುವ ಒಂದು ಸಂಕಲೆಯನ್ನು ಕಟ್ಟಿಸಿ, ಯಾರು ಯಾವ ಸಮಯದಲ್ಲಿ ಬೇಕಾದರೂ ನ್ಯಾಯಕ್ಕಾಗಿ ರಾಜನನ್ನು ನೋಡಲು ನ್ಯಾಯದ ಸಂಕಲೆಯನ್ನೆಳೆದು ಗಂಟೆ ಬಾರಿಸಬಹುದೆಂದು ಪ್ರಕಟಪಡಿಸಿದನು.

ಇಂಗ್ಲೇಂಡಿನ ರಾಜ ಮೊದಲನೇ ಜೇಮ್ಸನ ಕಡೆಯಿಂದ ಕೇಪ್ಟನ್ ಹಾಕಿನ್ಸ್, ಸರ್ ಥಾಮಸ್ ರೋ ಎಂಬ ಇಬ್ಬರು ರಾಯಭಾರಿಗಳು ಬಂದು ಜಹಾಂಗೀರನನ್ನು ದರ್ಶನ ಮಾಡಿದರು. ಭಾರತ ದೇಶದಲ್ಲಿ ವ್ಯಾಪಾರ ಮಾಡುವ ವಿಷಯವಾಗಿ ಅವರು ಮಾತುಕತೆ ನಡೆಸಿದರು. ಸರ್ ಥಾಮಸ್ ರೋ ಜಹಾಂಗೀರನಿಂದ ವಿನಾಯಿತಿ ಪಡೆದು, ಆಂಗ್ಲರು ಭಾರತ ದೇಶವನ್ನು ಪ್ರವೇಶಿಸಲು ದಾರಿ ತೋರಿಸಿದನು.





ಜಹಾಂಗೀರನ ಕಾಲದಲ್ಲಿ ನಡೆದ ಮತ್ತೊಂದು ಮುಖ್ಯ ಸಂಘಟನೆ, ಮೇವಾರ್ ಪರಗಣೆ ಮೊಗಲ್ ಸಾಮ್ರಾಜ್ಯದೊಂದಿಗೆ ಕೂಡಿದುದು. ರಾಣಾ ಪ್ರತಾಪ್ ಕೊನೆಯ ಕ್ಷಣದ ವರೆಗೂ ಮೊಗಲರನ್ನು ಇದಿರಿಸಿ ಹೋರಾಡಿದರೂ, ಅವನ ಮಗ ರಾಣಾ ಅಮರಸಿಂಗ್ ಅಷ್ಟು ಧೈರ್ಯ ತೋರಿಸಲಾರದೆ ಹೋದನು. ಜಹಾಂಗೀರನ ಅಧಿಕಾರಕ್ಕೆ ತಲೆಬಾಗಿ ಬಿಟ್ಟನು.

ಜಹಾಂಗೀರನ ಮರಣಾ ನಂತರ ಅವನ ಮಗ ಯುವರಾಜ ಖುರ್ರಂ, ತನ್ನನ್ನು ಇದಿರಿಸಿದ ತಮ್ಮನಾದ ಷಾರಿಯಾರನನ್ನೂ, ಮತ್ತೆ ಕೆಲವು ಯುವರಾಜರನ್ನೂ ಕೊಂದು, ಷಾಜಹಾನ್ ಎಂಬ ಹೆಸರಿನಿಂದ ಮೊಗಲ್ ಸಿಂಹಾಸನವನ್ನು ಅಧಿಷ್ಠಿಸಿದನು.





ಷಾಜಹಾನನು ವಿಲಾಸಪ್ರಿಯನು. ಅಪಾರವಾದ ಧನವನ್ನು ವ್ಯಯಿಸಿ ತನಗಾಗಿ ಮಯೂರ ಸಿಂಹಾಸನವನ್ನು ಮಾಡಿಸಿದನು. ಮೊಗಲ್ ರಾಜ್ಯದ ಅಂತರ್ಭಾಗವಾದ ಕಂದ ಹಾರವನ್ನು, ಪರ್ಷಿಯಾ ಷಾಹನು ವಶಪಡಿಸಿಕೊಂಡಾಗ ಷಾಜಹಾನ್ ಅದಕ್ಕಾಗಿ ಹೋರಾಡಿದ್ಧನಾದರೂ, ಅದನ್ನು ಮತ್ತೆ ಹಿಡಿಯಲಾರದೆ ಹೋದನು.

ಢಿಲ್ಲಿಯಲ್ಲಿ ಪ್ರಸಿದ್ಧವಾದ ಕೆಂಪು ಕೋಟೆ ಮೊದಲಾದ ಬ್ರಹ್ಮಾಂಡದಂತಹ ಭವನಗಳನ್ನು ನಿರ್ಮಿಸಿದವನು ಷಾಜಹಾನನೇ. ಕೆಂಪು ಕೋಟೆಯ ಒಳಗಿನ "ದಿವಾನ್-ಇ-ಖಾಸ್" ಎಂಬ ಮಂಡಪದ ಗೋಡೆಯಲ್ಲಿ "ಭೂಮಿಯಲ್ಲಿ ಸ್ವರ್ಗವೆಂಬುದು ಇರುವುದಾದರೆ ಅದು ಇಲ್ಲಿಯೇ! ಅದು ಇಲ್ಲಿಯೇ! ಅದು ಇಲ್ಲಿಯೇ!" ಎಂದು ಕೆತ್ತಿಸಿರುವನು.





ಪಟ್ಟದ ರಾಣಿ ಮುಮ್ತಾಜಳ ಮೇಲೆ ಹೇಳಲಾಗದಷ್ಟು ಪ್ರೇಮಾಭಿಮಾನಗಳಿದ್ದುವು. ದಾರಾ, ಸುಜಾ, ಔರಂಗಜೇಬ್, ಮುರಾದ್ ಎಂಬ ನಾಲ್ವರು ಮಕ್ಕಳನ್ನು ಹೆತ್ತ ಮುಮ್ತಾಜ್ ಷಾಜಹಾನನ ಜೀವಿತದಲ್ಲಿ ತುಂಬಾ ಸುಖ ಸಂತೋಷಗಳನ್ನುಂಟು ಮಾಡಿದಳು.

ಆದರೆ ಮುಮ್ತಾಜ್ ಅಕಾಲ ಮರಣಕ್ಕೆ ವಶಳಾದುದರಿಂದ ಷಾಜಹಾನ್ ದಿಗ್ಭ್ರಾಂತನಾದನು. ಹೆಂಡತಿಯ ಸಮಾಧಿಯ ಮೇಲೆ ಅದ್ಭುತವಾದ ತಾಜ್‌ಮಹಲನ್ನು ಎಬ್ಬಿಸಿದನು. ಪೂರ್ತಿ ಹಾಲುಗಲ್ಲುಗಳಿಂದ ನಿರ್ಮಿಸಲ್ಪಟ್ಟ ತಾಜಮಹಲ್, ಪ್ರಪಂಚದ ಅತ್ಯದ್ಭುತವಾದ ಶಿಲ್ಪಕಲಾ ಖಂಡವಾಗಿ ಬೆಳಗಿಕೊಂಡಿದೆ.





ಷಾಜಹಾನನ ಕೊನೆಯ ದಿನಗಳು ವಿಷಾದದಿಂದ ಕಳೆದುವು. ಔರಂಗಜೇಬ್ ತನ್ನ ಅಣ್ಣ ತಮ್ಮಂದಿರನ್ನು ಕೊಂದು ತಂದೆ ಷಾಜಹಾನನನ್ನು ಕೋಟೆಯೊಳಗೇ ಸೆರೆಯಿಟ್ಟನು. ಮಗಳು ಜಹಮಾರಾಳ ರಕ್ಷಣೆಯಲ್ಲಿ, ಯಮುನಾ ನದಿಯ ಆಚೆಯ ಬದಿಯಲ್ಲಿರುವ ತಾಜಮಹಲನ್ನು ವಿಚಾರದಿಂದ ನೋಡುತ್ತ ೧೬೬೬ ನೇ ವರ್ಷದಲ್ಲಿ ಷಾಜಹಾನ್ ಸೆರೆಮನೆಯಲ್ಲೇ ಕಣ್ಣು ಮುಚ್ಚಿದನು.



# ಔರಂಗಜೇಬ್

ದಾರಾ, ಸುಜಾ, ಔರಂಗಜೇಬ್, ಮುರಾದ್ ಎಂಬ ಷಾಜಹಾನನ ನಾಲ್ವರು ಮಗಂದಿರಲ್ಲಿ ದೊಡ್ಡವನಾದ ದಾರಾನೇ ತನ್ನ ಅನಂತರ ಮೊಗಲ್ ಸಿಂಹಾಸನವನ್ನು ಅಧಿಷ್ಠಿಸಬೇಕೆಂದು ಷಾಜಹಾನ್ ಆಶಿಸಿದ್ದನು. ದಾರಾ ದೊಡ್ಡ ಪಂಡಿತ. ವೇದಗಳನ್ನೂ ಉಪನಿಷತ್ತುಗಳನ್ನೂ ಅವನು ಪರ್ಷಿಯಾ ಭಾಷೆಗೆ ಅನುವಾದ ಮಾಡಿದನು.

೧೬೫೭ ನೇ ಇಸವಿಯಲ್ಲಿ ಷಾಜಹಾನ್ ರೋಗದಲ್ಲಿ ಬಿದ್ದನು. ಆ ಸಮಯದಲ್ಲಿ ಅವನ ಕೋರಿಕೆಯನ್ನು ನೆರವೇರಿಸಲು ದಾರಾ ಮಾತ್ರವೇ ಹತ್ತಿರವಿದ್ದನು. ಉಳಿದ ಮೂವರು ಮಗಂದಿರೂ ರಾಜ್ಯದ ಮೂಲೆಗೊಬ್ಬನಂತೆ ಪ್ರತಿನಿಧಿಗಳಾಗಿದ್ದರು, ತಂದೆ ಸಾಯಲು ಬಿದ್ದಿರುವನೆಂದು ತಿಳಿದು, ಕೂಡಲೇ ಮೂವರು ಮಗಂದಿರೂ ಹೇಗಾದರೂ ರಾಜ್ಯಾಧಿಕಾರವನ್ನು ವಶಪಡಿಸಿಕೊಳ್ಳಬೇಕೆಂದು ಪಥಕ ಯೋಜಿಸತೊಡಗಿದರು.





ಅದುವರೆಗೂ ಬಂಗಾಳದಲ್ಲಿ ರಾಜ ಪ್ರತಿನಿಧಿಯಾಗಿದ್ದ ಸುಜಾ ತನ್ನನ್ನು ತಾನೇ ರಾಜನೆಂದು ಹೇಳಿಕೊಳ್ಳುತ್ತ ಆಗ್ರಾದ ಮೇಲೆ ಸೈನ್ಯದೊಂದಿಗೆ ಸಾಗಿ ಬಂದನು. ಷಾಜಹಾನನ ಆಜ್ಞಾನುಸಾರವಾಗಿ ದಾರಾನ ಕುಮಾರ ಸುಲೈಮಾನ್ ಶಿಕೋ ತನ್ನ ಚಿಕ್ಕಪ್ಪನ ಸೈನ್ಯವನ್ನು ಇದಿರಿಸಲು ಹೊರಟನು. ವಾರಣಾಸಿಯ ಹತ್ತಿರ ಯುದ್ಧವು ನಡೆಯಿತು. ಸುಜಾ ಸೋತು ಬಂಗಾಳಕ್ಕೆ ಹಿಂದಿರುಗಿ ಹೋದನು.



ಆಗ ದಖನ್ನಿನಲ್ಲಿದ್ದ ಔರಂಗಜೇಬ್, ಸೋದರನಾದ ಮುರಾದನೊಂದಿಗೆ ಕೂಡಿ ಮಾತಾಡಿ, ಉಳಿದಿಬ್ಬರನ್ನು ಕೊಂದು ರಾಜ್ಯವನ್ನು ಸಮನಾಗಿ ಹಂಚಿಕೊಳ್ಳೋಣವೆಂಬ ಯೋಜನೆ ಹಾಕಿದನು. ಸರಳಗುಣದವನಾದ ಮುರಾದನು ಅದಕ್ಕೆ ಒಪ್ಪಿದನು. ಇಬ್ಬರೂ ಕೂಡಿ ದಾರಾನ ಮೇಲೆ ದಾಳಿ ಮಾಡಿದರು.

ಉಭಯರ ಸೈನ್ಯಗಳೂ ದಾರಾನ ಸೇನೆಗಳನ್ನು ಆಗ್ರಾಕ್ಕೆ ಸಮೀಪದಲ್ಲಿರುವ ಸಮುಘರ್ ಪ್ರಾಂತದಲ್ಲಿ ಇದಿರಿಸಿದುವು. ರಾಜಪುತ್ರರು ದಾರಾನ ಪಕ್ಷ ವಹಿಸಿ ಹೋರಾಡಿದರು. ಆಗ ದಾರಾನು ಏರಿಕೊಂಡ ಆನೆ ಗಾಯಗೊಂಡುದರಿಂದ ದಾರಾ ಅದರ ಮೇಲಿನಿಂದ ಕೆಳಗೆ ಬಿದ್ದನು. ಆ ದೃಶ್ಯವನ್ನು ನೋಡಿದ ಅವನ ಸೈನಿಕರು ದಾರಾ ಸತ್ತನೆಂದು ಹೆದರಿ ಚೆಲ್ಲಾಚೆದರಾಗಿ ಓಡಿದರು.





ಔರಂಗಜೇಬನು ಆಗ್ರಾ ಕೋಟೆಯನ್ನು ಸುತ್ತಲೂ ಮುತ್ತಿದನು. ಅದು ಉರಿಬೇಸಗೆಯ ಕಾಲ. ಕೋಟೆಯೊಳಗೆ ನೀರಿನ ಸರಬರಾಯಿ ಆಗದಂತೆ ಮಾಡಿದನು ಔರಂಗಜೇಬ್. ರೋಗಗ್ರಸ್ತನಾದ ರಾಜನಿಗೆ ಸಹಾ ನೀರಿಗೆ ಬರವಾಗಿ ಹೋಯಿತು. ದಾಹದಿರದ ಸೈನಿಕರಿಗೆ ಶತ್ರುಸೇನೆಯೊಂದಿಗೆ ಹೋರಾಡಲು ಸಾಧ್ಯವಾಗಲಿಲ್ಲ. ಕೋಟೆ ಪತನವಾಯಿತು.

ಕೋಟೆಯೊಳಗೆ ಮುಗಿಬಿದ್ದ ಔರಂಗಜೇಬನು ತಂದೆಯನ್ನು ಪದಭ್ರಷ್ಟ ಮಾಡಿದೆನೆಂದು ಸಾರಿಬಿಟ್ಟನು. ಷಾಜಹಾನ್ ಇದ್ದಲ್ಲಿಂದ ಎತ್ತಲೂ ಕದಲಲಾಗದೆ ಹೋದನು. ಅವನು ಕೋಟೆಯೊಳಗೇ ಖೈದುಗೊಳಿಸಲ್ಪಟ್ಟನು.





ಔರಂಗಜೇಬನು ಆಗ್ರಾದಿಂದ ಢಿಲ್ಲಿಯ ಮೇಲೆ ಸೈನ್ಯವನ್ನು ಸಾಗಿಸಿದನು. ತಂದೆಯನ್ನೂ, ಅಣ್ಣನನ್ನೂ ಜಯಿಸುವುದರಲ್ಲಿ ತನಗೆ ಸಹಾಯ ಮಾಡಿದ ತಮ್ಮನಾದ ಮುರಾದನನ್ನು ಮಾರ್ಗ ಮಧ್ಯದ ಮಧುರೆಯಲ್ಲಿ ಖೈದು ಮಾಡಿಸಿ ಕೊಲ್ಲಿಸಿಬಿಟ್ಟನು. ಭಯಂಕರವಾದ ಈ ದ್ರೋಹವು ಎಲ್ಲರನ್ನೂ ದಿಗ್ಭ್ರಾಂತಿಗೊಳಿಸಿತು.

ಢಿಲ್ಲಿಯನ್ನು ಸೇರಿದ ಕೂಡಲೇ ಔರಂಗಜೇಬನು ತನ್ನನ್ನು ಚಕ್ರವರ್ತಿಯಾಗಿ ಪ್ರಕಟಿಸಿಕೊಂಡನು. ಆಲಂಘೀರ್ (ಪ್ರಪಂಚವಿಜೇತ) ಎಂಬ ಬಿರುದು ಧರಿಸಿದ ಔರಂಗಜೇಬನು, ಮೊಗಲ್ ಸಾಮ್ರಾಜ್ಯದ ವಿಸ್ತರಣೆಗೆ ಶ್ರಮಿಸಿದನು. ಆದರೆ ಅವನೊಳಗಿನ ಮತದುರಭಿಮಾನ, ಪರಮತದ್ವೇಷ, ನಿತ್ಯಶಂಕೆ ಮೊದಲಾದ ದುರ್ಗುಣಗಳಿಂದ ಅವನು ಮೊಗಲ್ ಸಾಮ್ರಾಜ್ಯದ ಪತನಕ್ಕೆ ಕಾರಣನಾದನು.





ವಾಯುವ್ಯ ಸರಹದ್ದು ಪ್ರಾಂತಕ್ಕೆ ತಪ್ಪಿಸಿಕೊಂಡು ಹೋದ ದಾರಾ, ತನ್ನ ಮಿತ್ರನಾದ ಜಿವಾನ್ ಖಾನನ ಮನೆಯಲ್ಲಿ ಅಡಗಿಕೊಂಡನು. ಅಲ್ಲಿ ಮತ ಗ್ರಂಥಗಳನ್ನು ಓದಿಕೊಳ್ಳುತ್ತ ಪ್ರಶಾಂತವಾಗಿ ಕಾಲಕಳೆಯತೊಡಗಿದನು. ಆದರೆ ಔರಂಗಜೇಬನ ಅಭಿಮಾನವನ್ನು ಸಂಪಾದಿಸಿಕೊಳ್ಳಲು ಜಿವಾನ್‌ಖಾನ್ ದಾರಾನನ್ನು ಅವನಿಗೆ ಒಪ್ಪಿಸಿಬಿಟ್ಟನು. ಅನಂತರ ದಾರಾ ಕೊಲ್ಲಲ್ಪಟ್ಟನು.

ಅರಕಾನ್ ಬೆಟ್ಟಗಳ ಕಡೆಗೆ ಓಡಿ ಹೋದ ಸುಜಾನ ಜಾಡು ಮತ್ತೆ ಕಾಣಲೇ ಇಲ್ಲ. ಬಹುಶಃ ಅರಕಾನರೇ ಅವನನ್ನು ಹತಮಾಡಿರಬೇಕೆಂದು ಹೇಳುತ್ತಾರೆ. ದಾರಾನ ಮಗ ಸುಲೈಮಾನಾ ವಿಷ ಪ್ರಯೋಗದಿಂದ ಕೊಲ್ಲಲ್ಪಟ್ಟನು. ಕಟ್ಟಕಡೆಗೆ ಔರಂಗಜೇಬ್ ತನ್ನೊಂದಿಗೆ ರಾಜ್ಯ ಸಿಂಹಾಸನಕ್ಕೆ ಸ್ಪರ್ಧೆಗೆ ಬರುವವರು ಯಾರೂ ಇಲ್ಲದಂತೆ ಮಾಡಿಕೊಂಡನು.





ಇಷ್ಟು ಮಾಡಿಯೂ . ಔರಂಗಜೇಬನಿಗೆ ಮನಃಶಾಂತಿ ಇರಲಿಲ್ಲ. ಕೋಟೆಯೊಳಗೆ ಸಹಾ ಅವನು ಯಾರನ್ನೂ ನಂಬಲಾರದೆ ಹೋದನು. ಅವನ ಮೇಲೆ ಅಭಿಮಾನ ತೋರಿಸುವವರೂ ಇರಲಿಲ್ಲ. ಬಲು ಬೇಗದಲ್ಲೇ ರಾಜ್ಯದೊಳಗೆಲ್ಲಾ ಬಂಡಾಯಗಳು ತಲೆ ಎತ್ತ ತೊಡಗಿದುವು. ಮಥುರೆಯ ಪ್ರಾಂತದ ಜಾಟ ರೈತರು ಔರಂಗಜೇಬನ ಅಧಿಕಾರಕ್ಕೆ ವ್ಯತಿರೇಕವಾಗಿ ದಂಗೆ ಎದ್ದು ತಿರುಗಿಬಿದ್ದರು !



# ಛತ್ರಪತಿ ಶಿವಾಜಿ - ೧

ಮೊಗಲ್ ಸಾಮ್ರಾಜ್ಯವನ್ನು ಗಡಗಡ ನಡುಗಿಸಿದ ವೀರಶಿವಾಜಿ ೧೬೨೭ನೆಯ ಇಸವಿಯಲ್ಲಿ ಹುಟ್ಟಿದನು. ಶಿವಾಜಿಯ ತಂದೆ ಷಾಜೀ. ಬೀಜಾಪೂರ್ ಸುಲ್ತಾನನ ಆಸ್ಥಾನದಲ್ಲಿ ಜಾಗೀರುದಾರನಾಗಿದ್ದನು. ಆದರೆ ಶಿವಾಜಿಯ ಬಾಲ್ಯವು ತಾಯಿ ಜೀಜೀಯಾಬಾಯಿಯ ಕುಟುಂಬ ಮಿತ್ರನಾದ ದಾದಾಜೀ ಸಂರಕ್ಷಣೆಯಲ್ಲಿ ಪೂನಾದಲ್ಲೇ ಕಳೆಯಿತು.

ಬಾಲಕನಾಗಿರುವಾಗಲೇ ಶಿವಾಜಿ ಅದ್ಭುತವಾದ ಧೈರ್ಯ ಸಾಹಸಗಳನ್ನು ಪ್ರದರ್ಶಿಸಿ ಸಮೀಪದಲ್ಲಿದ್ದ ಗುಡ್ಡಗಾಡು ಪ್ರಾಂತದ ಮಾವಳಿಗರ ಅಭಿಮಾನಕ್ಕೆ ಪಾತ್ರನಾದನು. ಕ್ರಮಕ್ರಮವಾಗಿ ಅವರು ಶಿವಾಜಿಯನ್ನು ತಮ್ಮ ನಾಯಕನೆಂದು ಭಾವಿಸತೊಡಗಿದರು.





ಧೈರ್ಯಶಾಲಿಯಾದರೂ ಶಿವಾಜಿಗೆ ಸ್ವಲ್ಪವೂ ಗರ್ವವಿರಲಿಲ್ಲ. ಮತವಿಷಯಗಳಲ್ಲಿ ಅವನಿಗೆ ಬಹಳ ಅಭಿಮಾನವಿದ್ದಿತು. ಆ ಕಾಲದ ಪ್ರಜೆಗಳಲ್ಲಿ ಐಕಮತ್ಯವನ್ನೂ, ಮತಾಭಿಮಾನವನ್ನೂ ಕೆರಳಿಸಿದ ಪ್ರಮುಖ ಸಾಧುವಾದ ರಾಮದಾಸರ ಮೇಲೆ ಶಿವಾಜಿಗೆ ಎಣೆಯಿಲ್ಲದಷ್ಟು ಗೌರವಾಭಿಮಾನಗಳಿದ್ದುವು.



ಬಲುಬೇಗದಲ್ಲೇ ಶಿವಾಜಿ ಚಿಕ್ಕದೊಂದು ಸೈನ್ಯವನ್ನೇ ಸೇರಿಸಿಕೊಂಡನು. ಸೈನಿಕರು ಶಿವಾಜಿಯ ಮೇಲೆ ಅಚಲವಾದ ಭಕ್ತಿವಿಶ್ವಾಸಗಳನ್ನಿಟ್ಟಿದ್ದರು. ಅವರ ಸಹಾಯದಿಂದ ಶಿವಾಜಿ ಬಿಜಾಪೂರದ ಸರಿಹದ್ದಿನಲ್ಲಿರುವ ಕೋಟೆಗಳನ್ನೂ, ದುರ್ಗಗಳನ್ನೂ ಒಂದರಹಿಂದೊಂದಾಗಿ ವಶಪಡಿಸಿಕೊಂಡನು. ಈ ವಿಷಯವನ್ನು ತಿಳಿದು ಬಿಜಾಪೂರ್ ಸುಲ್ತಾನನು ಶಿವಾಜಿಯನ್ನು ಅಡಗಿಸಲು ಸೈನ್ಯಾಧಿಕಾರಿ ಅಫ್‌ಜಲ್‌ಖಾನನನ್ನು ಕಳುಹಿಸಿದನು.

ಅಫ್‌ಜಲ್‌ಖಾನನ ದೊಡ್ಡ ಸೈನಿಕ ಬಲವನ್ನು ಶಿವಾಜಿಯ ಸೈನ್ಯವು ಛಿದ್ರಛಿದ್ರ ಮಾಡಿತು. ಕಡೆಗೆ ಅಫ್‌ಜಲ್‌ಖಾನ್ ಶಿವಾಜಿಯನ್ನು ಒಂದು ಏಕಾಂತ ಪ್ರದೇಶದಲ್ಲಿ ಕಲೆತುಕೊಳ್ಳಲು ಒಪ್ಪಿದನು. ನಿರ್ಣಯಿಸಲ್ಪಟ್ಟ ಸಮಯದಲ್ಲಿ ಗೊತ್ತಾದ ಪ್ರದೇಶದಲ್ಲಿ ಇಬ್ಬರು ಪ್ರತ್ಯರ್ಥಿಗಳೂ ಇದಿರಿದಿರಾಗಿ ಬರತೊಡಗಿದರು.





ಶಿವಾಜಿಯನ್ನು ಆಲಿಂಗಿಸಿಕೊಳ್ಳಲು ಕೈಗಳನ್ನು ಚಾಚುವಂತೆ ನಟಿಸಿ, ಅವನ ಕುತ್ತಿಗೆ ಹಿಸುಕಲು ನೋಡಿದನು ಅಫ್‌ಜಲ್‌ಖಾನ್. ಆದರೆ ಈ ತಂತ್ರವನ್ನು ಮೊದಲೇ ಊಹಿಸಿ, ಅದಕ್ಕೆ ಮೊದಲೇ ಸಿದ್ಧನಾಗಿ ಬಂದಿದ್ದ ಶಿವಾಜಿ, ತನ್ನ ಎಡಗೈಯ ಬೆರಳುಗಳಲ್ಲಿ ತಗಲಿಸಿಕೊಂಡಿದ್ದ ಹುಲಿಯುಗುರಿನಂತಹ ಕಬ್ಬಿಣದ ಕವಚಾಯುಧದಿಂದ ಅಫ್‌ಜಲ್‌ಖಾನನನ್ನು ಇರಿದು ಕೊಂದುಬಿಟ್ಟನು.

ಶಿವಾಜಿ ಮೊಗಲ್ ಸಾಮ್ರಾಜ್ಯದ ಸರಿಹದ್ದುಗಳನ್ನು ಜಯಿಸಲು ಪ್ರಾರಂಭಿಸಿದಾಗಲೇ ಔರಂಗಜೇಬನು ತನ್ನ ಸೇನಾನಾಯಕನಾದ ಷಯಿಸ್ತೈಖಾನನನ್ನು ಶಿವಾಜಿಯ ಮೇಲೆ ಕಳುಹಿಸಿದನು. ಮಹಾರಾಷ್ಟ್ರರ ಕೋಟೆಗಳನ್ನು ಬಹಳ ಮಟ್ಟಿಗೆ. ಮತ್ತೆ ಆಕ್ರಮಿಸಿಕೊಂಡ ಷಯಿಸ್ತೈಖಾನ್ ಪೂನಾದಲ್ಲಿದ್ದ ಶಿವಾಜಿಯ ರಾಜಧಾನಿಯನ್ನೂ ಹಿಡಿದನು. ಒಂದು ದಿನ ರಾತ್ರಿ ನಡೆದ ಮದುವೆಯ ಮೆರವಣಿಗೆಯೊಂದಿಗೆ ಶಿವಾಜಿಯೂ, ಅವನ ಅನುಚರರೂ ಷಯಿಸ್ತೆಖಾನನ ಶಿಬಿರದ ಕಡೆಗೆ ಹೊರಟರು.





ಶಿವಾಜಿ ತನ್ನ ಇಪ್ಪತ್ತು ಮಂದಿ ಅನುಚರರೊಂದಿಗೆ ಹಠಾತ್ತಾಗಿ ಶಿಬಿರದ ಮೇಲೆ ದಾಳಿ ಮಾಡಿದನು. ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಶಿವಾಜಿ ಷಯಿಸ್ತೈಖಾನನ ಕೋಣೆಯೊಳಗೆ ನುಗ್ಗಿದನು. ಅವನನ್ನು ನೋಡುತ್ತಲೇ ಮೊಗಲ್ ಸೈನ್ಯಾಧಿಪತಿ ಕಿಟಿಕಿಯ ಮೂಲಕ ಹಾರಿ ಓಡಿದನು. ಆ ಸಮಯದಲ್ಲಿ ಅವನ ಕೈಯ ಮೂರು ಬೆರಳುಗಳು ಶಿವಾಜಿಯ ಕತ್ತಿಯ ಪೆಟ್ಟಿನಿಂದ ತುಂಡಾಗಿ ಅಲ್ಲಿ ಬಿದ್ದುವು.

ಔರಂಗಜೇಬನ ಕಡೆಯಿಂದ ರಾಜಾ ಜೈಸಿಂಗ್ ಶಿವಾಜಿಯೊಡನೆ ರಾಯಭಾರಗಳನ್ನು ನಡೆಸಿದನು. ಎಲ್ಲಾ ವಿಧವಾದ ರಕ್ಷಣೆಗಳೊಂದಿಗೆ ನೋಡಿಕೊಳ್ಳುವೆನೆಂದು ಮಾತುಕೊಟ್ಟು, ಜೈಸಿಂಗ್, ಚರ್ಚೆ ನಡೆಸಲು ಶಿವಾಜಿಯನ್ನು ಆಗ್ರಾಕ್ಕೆ ಆಹ್ವಾನ ಮಾಡಿದನು. ತನ್ನ ಕುಮಾರ ಶಂಭೂಜೀಯೊಂದಿಗೆ ಶಿವಾಜಿ ಆಗ್ರಾವನ್ನು ಸೇರಿದನು. ಅಲ್ಲಿ ಅವನಿಗೆ ಸರಿಯಾದ ಗೌರವತೋರದೆ ಹೋದುದರಿಂದ ಶಿವಾಜಿ ಇದಿರು ತಿರುಗಿದನು.





ತಂದೆ ಮಗಂದಿರು ಒಂದು ಮನೆಯಲ್ಲಿ ಬಂಧಿಸಲ್ಪಟ್ಟರು. ರಕ್ಷಣೆಯ ಏರ್ಪಾಡುಗಳೆಲ್ಲ ಬಂಧನದ ಏರ್ಪಾಡುಗಳೇ ಆದುವು. ತನ್ನ ಬಲಿಷ್ಠ ಶತ್ರು ಸಿಕ್ಕಿಬಿದ್ದನೆಂದು ಔರಂಗಜೇಬನಿಗೆ ಪರಮಾನಂದವಾಯಿತು. ಶಿವಾಜಿ ಅಸ್ವಸ್ಥನಾದಂತೆ ನಟಿಸುತ್ತ, ಪುಣ್ಯಕಾರ್ಯಗಳಂತೆ ದೊಡ್ಡ ಚೀಲಗಳಲ್ಲಿ ಆಹಾರ ಪದಾರ್ಥಗಳನ್ನು ಬಡಜನರಿಗೆ ಹಂಚಲು ಕಳುಹಿಸುತ್ತಲಿದ್ದನು. ದಿನದಿಂದ ದಿನಕ್ಕೆ ಈ ಚೀಲಗಳ ಸಂಖ್ಯೆ ಹೆಚ್ಚುತ್ತಾ ಬಂದಿತು.

ಒಂದು ದಿನ ಶಿವಾಜಿ, ಶಂಭೂಜಿಯರು ಆಹಾರದ ಚೀಲದೊಳಗೆ ಸೇರಿ, ಪೈದಿನೊಳಗಿನಿಂದ ಹೊರಬಿದ್ದರು. ಅಭ್ಯಾಸದಂತೆ ಕಾವಲಿನವರು ಆ ಚೀಲಗಳ ಮೂಟೆಗಳನ್ನು ಹೊರಕ್ಕೆ ಬಿಡಲು ಅಭ್ಯಂತರ ಹೇಳಲಿಲ್ಲ. ಔರಂಗಜೇಬನಿಗೆ ಈ ಸಂಗತಿ ಬಹಳ ತಡವಾಗಿ ತಿಳಿಯಿತು.






ಸನ್ಯಾಸಿಗಳ ವೇಷಧರಿಸಿ ತಂದೆ ಮಗಂದಿರು ಆಗ್ರಾವನ್ನು ಬಿಟ್ಟರು. ನಗರದ ಮೇರೆಗಳಲ್ಲಿ ಶಿವಾಜಿಯ ಅನುಚರರು ಕುದುರೆಗಳೊಂದಿಗೆ ಸಿದ್ಧರಾಗಿದ್ದರು. ಕೆಲವು ದಿನಗಳಲ್ಲಿ ಶಿವಾಜಿಯೂ, ಶಂಭೂಜಿಯೂ ಪೂನಾದಲ್ಲಿರುವ ತಮ್ಮ ಪರಿವಾರವನ್ನು ಸೇರಿಕೊಂಡರು. ಶಿವಾಜಿಯನ್ನು ಶಾಂತಪಡಿಸಿ ಒಳಿತು ಮಾಡಿಕೊಳ್ಳಲಿಕ್ಕಾಗಿ, ಔರಂಗಜೇಬನು ಅವನಿಗೆ 'ರಾಜಾ' ಎಂಬ ಬಿರುದನ್ನು ಕೊಟ್ಟನು.



# ಛತ್ರಪತಿ ಶಿವಾಜಿ - ೨

ತಮ್ಮ ನಾಯಕನಾದ ಶಿವಾಜಿ ಮೊಗಲರ ಬಂಧನದಿಂದ ತಪ್ಪಿಸಿಕೊಂಡು ಬಂದುದನ್ನು ನೋಡಿ, ಮಹಾರಾಷ್ಟ್ರರು ಅತ್ಯಾನಂದದಿಂದ ಉತ್ಸವ ಮಾಡಿಕೊಂಡರು. ೧೬೭೪ ನೇ ವರ್ಷದಲ್ಲಿ ಛತ್ರಪತಿ ಬಿರುದಿನೊಂದಿಗೆ ಶಿವಾಜಿ ಮಹಾರಾಷ್ಟ್ರರಿಗೆ ರಾಜನಾದನು.

ಮಹಾರಾಷ್ಟ್ರರಿಗೂ ಮೊಗಲರಿಗೂ ಆಗಾಗ ಯುದ್ಧ ನಡೆಯುತ್ತಿದ್ದುವು. ಅಪೂರ್ವವಾದ ಧೈರ್ಯ ಸಾಹಸಗಳಿಂದ, ಆದರ್ಶವಾದ ನಡವಳಿಕೆಗಳಿಂದ ಶಿವಾಜಿ ತನ್ನ ಅನುಚರರಿಗೆ ಉತ್ಸಾಹಕಾರಕನಾದನು. ಒಂದು ಸಾರಿ ಶಿವಾಜಿಯ ಸೇನಾನಿ ಬಾಜೀಪ್ರಭು, ತಮ್ಮ ನಾಯಕನು ಸುರಕ್ಷಿತ ಸ್ಥಾನವನ್ನು ಸೇರಲಿಕ್ಕೆಂದು, ಗುಹೆಯ ಮುಖದ್ವಾರಕ್ಕೆ ಅಡ್ಡನಿಂತು ಒಬ್ಬಂಟಿಗನಾಗಿ ಶತ್ರುಸೇನೆಯನ್ನು ತಡೆಯುತ್ತ, ತನ್ನ ಪ್ರಾಣವನ್ನೇ ಅರ್ಪಿಸಿದನು.






ಸೋತುಹೋದ ಶತ್ರುವಿನಲ್ಲಿ ಶಿವಾಜಿ ಆದರಪೂರ್ವಕವಾಗಿಯೇ ವ್ಯವಹರಿಸಿದನು. ಅವನಿಗೆ ಹಿಂದೂ ಮತದ ಮೇಲೆ ಅತ್ಯಂತ ಅಭಿಮಾನವಿದ್ದರೂ ಇತರ ಮತಗಳನ್ನು ಕೂಡ ಗೌರವಿಸುತ್ತಿದ್ದನು. ಒಮ್ಮೆ ಅವನಿಗೆ ಲಭಿಸಿದ ಖುರಾನ್ ಗ್ರಂಥದ ಪ್ರತಿಯನ್ನು ಒಬ್ಬ ಮುಸ್ಲಿಮನಿಗೆ ಬಹುಮಾನವಾಗಿ ಕೊಟ್ಟನು.



ಕಲ್ಯಾಣದ ಪಾಲಕನಾದ ಮುಲಾನ್ ಅಹ್ಮದ್ ಶಿವಾಜಿಯ ಸೇನಾಪತಿಯಾದ ಅಬಾಜೀ ಸೋನ್ ದೇವನ ಕೈಯಲ್ಲಿ ಸೋತುಹೋದನು. ಆಗ ಅವನು ಶಿವಾಜಿಯನ್ನು ಪ್ರಸನ್ನ ಮಾಡಿಕೊಳ್ಳಲು ಸುಂದರಿಯಾದ ತನ್ನ ಮಗಳನ್ನು ಶಿವಾಜಿಗೆ ಬಹುಮಾನವಾಗಿ ಕಳುಹಿಸಿದನು. ಆದರೆ ಶಿವಾಜಿ ಅವಳನ್ನು ನೋಡುತ್ತಲೇ "ನನ್ನ ತಾಯಿ ಇಷ್ಟು ಸುಂದರಿಯಾಗಿರುತ್ತಿದ್ದರೆ ನಾನು ಇನ್ನಿಷ್ಟು ಸುಂದರನಾಗಿರುತ್ತಿದ್ದೆ" ಎಂದು, ತಂದೆ ಮಗಳಿಗೆ ಕೊಡುವ ಹಾಗೆ, ಬೆಲೆ ಬಾಳುವ ಕಾಣಿಕೆಗಳನ್ನು ಕೊಟ್ಟು ಅವಳನ್ನು ತಂದೆ ತಾಯಿಗಳ ಬಳಿಗೇ ಕಳುಹಿಸಿದನು.

ಮತ ಸಂಬಂಧವಾದ ಉಪನ್ಯಾಸ ಕೇಳುವುದೆಂದರೆ ಶಿವಾಜಿಗೆ ಬಹಳ ಇಷ್ಟ. ಒಂದು ಸಾರಿ ಅವನು ತುಕಾರಾಂನ ಉಪನ್ಯಾಸ ಕೇಳಿಕೊಂಡಿರುವಾಗ, ಆ ಸಂಗತಿ ಶತ್ರುಗಳಿಗೆ ಗೊತ್ತಾಯಿತು. ಕೂಡಲೇ ಶತ್ರು ಸೈನಿಕರು ಆ ಸಭೆಯಲ್ಲಿ ಶೋಧಿಸತೊಡಗಿದರು. ಆಗ ಶಿವಾಜಿಯನ್ನು ಹೋಲುವವನೊಬ್ಬನು ಅಲ್ಲಿಂದೆದ್ದು ಹಾರಿ ಓಡಿ ಹೋಗುವುದನ್ನು ನೋಡಿದ ಸೈನಿಕರು, ಅವನ ಬೆನ್ನು ಹಿಡಿದು ಓಡಿದರು. ಸಭೆ ಮುಗಿದ ಮೇಲೆ ಶಿವಾಜಿ ಹಾಯಾಗಿ ಮನೆಗೆ ಹೋಗಿ ಸೇರಿದನು.





ಸಾಧುವಾದ ರಾಮದಾಸರ ಸಾಂಗತ್ಯದಲ್ಲಿ ಹೊತ್ತು ಕಳೆಯುವುದೆಂದರೆ ಶಿವಾಜಿಗೆ ಬಹಳ ಇಷ್ಟ. ಆದರೆ ಅದಕ್ಕಿಂತ ಹೆಚ್ಚಿನ ಕಾರ್ಯಗಳನ್ನು ಸಾಧಿಸಬೇಕಾದವನು ಶಿವಾಜಿ ಎಂಬುದನ್ನು ಅರಿತಿದ್ದ ರಾಮದಾಸರು, ಅವನಿಗೆ ದೂರವಾಗಿಯೇ ನಡೆಯತೊಡಗಿದರು. ಒಂದು ದಿನ ಭಿಕ್ಷೆಗಾಗಿ ತನ್ನ ಮನೆಯ ಮುಂದೆ ನಿಂತ ರಾಮದಾಸರನ್ನು ನೋಡಿದ ಶಿವಾಜಿ, ತನ್ನ ರಾಜ್ಯವನ್ನೆಲ್ಲಾ ಆ ಸಾಧುಗಳಿಗೇ ಸಮರ್ಪಿಸಿ ಬರೆಯಲ್ಪಟ್ಟ ವೀಲುನಾಮೆಯನ್ನು ಅವರ ಭಿಕ್ಷಾಪಾತ್ರದಲ್ಲಿ ಹಾಕಿದನು.

ಧರ್ಮಬದ್ಧವಾದ ಸಾಮ್ರಾಜ್ಯವನ್ನು ಉತ್ತಮ ರೀತಿಯಲ್ಲಿ ಪಾಲಿಸಿಕೊಂಡಿರುವಂತೆ ರಾಮದಾಸರು ಶಿವಾಜಿಗೆ ಆದೇಶ ಮಾಡಿದರು. ಆ ಮಹತ್ತರವಾದ ಕಾರ್ಯದಲ್ಲಿಯೇ ಶಿವಾಜಿ ನಿಮಗ್ನನಾದನು. ಹಿಂದೂ ದೇವಾಲಯಗಳ ನಿರ್ಮಾಣಗಳಿಗೆ ಮಾತ್ರವಲ್ಲದೆ, ಮಸೀದಿಗಳ ನಿರ್ಮಾಣಗಳಿಗೂ ಶಿವಾಜಿ ಸಹಾಯ ಮಾಡಿದನು. ಅವನಿಗೆ ಮತ ವಿರೋಧವಿರಲಿಲ್ಲ. ಆದರೆ ಔರಂಗಜೇಬನ ಮತ ದುರಭಿಮಾನವನ್ನು ಮಾತ್ರ ಇದಿರಿಸಿ ಹೋರಾಡಿದನು.





ಸಾಹಸ ವೀರನೂ, ಮಹಾ ನಾಯಕನೂ ಆದ ಶಿವಾಜಿ ತನ್ನ ಐವತ್ತಮೂರನೇ ವಯಸ್ಸಿನಲ್ಲೇ (೧೬೮೦ ನೇ ವರ್ಷ) ಕಣ್ಣು ಮುಚ್ಚಿದನು. ಅವನ ಮರಣವು ಮಹಾರಾಷ್ಟ್ರರಿಗೆ ಮಾತ್ರವಲ್ಲದೆ ಔರಂಗಜೇಬನ ಹಿಂಸೆಗಳನ್ನು ಅನುಭವಿಸುತ್ತಿರುವವರೆಲ್ಲರಿಗೂ ವಿಷಾದವನ್ನು ಉಂಟುಮಾಡಿತು.

ಶಿವಾಜಿಯ ತರುವಾಯ ಅವನ ಕುಮಾರ ಶಂಭೂಜೀ ರಾಜನಾದನು. ಅಚಂಚಲವಾದ ಧೈರ್ಯ ಸಾಹಸಗಳಿಂದ ಶಂಭೂಜೀ ಒಂಬತ್ತು ವರ್ಷ ಮೊಗಲರ ಉಪಟಳದಿಂದ ರಾಜ್ಯವನ್ನು ಕಾಪಾಡಿದನು. ಆಗಾಗ ನಡೆಯುವ ಯುದ್ಧಗಳಲ್ಲಿ, ಮೊಗಲ್ ಸೇನೆಗಳಿಗೆ ಸ್ವಯಂ ಔರಂಗಜೇಬನೇ ನಾಯಕತ್ವ ವಹಿಸಿ ಬಂದಾಗಲೂ, ಮಹಾರಾಷ್ಟ್ರರು ಶಂಭೂಜೀಯ ನಾಯಕತ್ವದಲ್ಲಿ ಒಮ್ಮನಸ್ಸಿನ ಒಗ್ಗಟ್ಟಿನಲ್ಲಿ ಹೋರಾಡಿದುದರಿಂದ ಜಯಿಸಲಾಗದೆ ಹೋದನು.





ಒಂದು ದಿನ ಶಂಭೂಜೀ ನಿದ್ದೆಯಲ್ಲಿರುವ ಸಮಯ ಸಾಧಿಸಿ, ಮೊಗಲ್ ಸೇನೆಗಳು ಅವನನ್ನು ಹಿಡಿದುಬಿಟ್ಟವು. ೧೬೮೯ ನೇ ವರ್ಷದಲ್ಲಿ, ಶಂಭೂಜೀ ಬಂದೀಯಾಗಿದ್ದೂ ಸಹ, ಔರಂಗಜೇಬನ ದುಷ್ಕೃತ್ಯಗಳನ್ನು ತೀವ್ರವಾಗಿ ಖಂಡಿಸಿದನು. ಔರಂಗಜೇಬನು ಶಂಭೂಜೀಯನ್ನು ದಾರುಣವಾದ ಚಿತ್ರಹಿಂಸೆಗಳಿಂದ ಕೊಲ್ಲಿಸಿದನು.

ಶಂಭೂಜೀಯ ಹತ್ಯದಿಂದ ಮಹಾರಾಷ್ಟ್ರದಲ್ಲಿ ಕ್ರೋಧವೂ, ಹಟವೂ ಕೆರಳಿಕೊಂಡಿತು. ಗೆರಿಲ್ಲಾ ಯುದ್ಧ ಪದ್ಧತಿಯನ್ನು ಅವಲಂಬಿಸಿ, ಸಂಧಿದೊರೆತಲ್ಲೆಲ್ಲಾ ಮೊಗಲ್ ಸೇನೆಗಳನ್ನು ಹತ ಮಾಡಲು ತೊಡಗಿದರು. ಔರಂಗಜೇಬನು ಮಹಾರಾಷ್ಟ್ರರ ಅಧಿಕಾರವನ್ನು ಕೊನೆಮುಟ್ಟಿಸಲು ಶತ ಪ್ರಯತ್ನ ಮಾಡಿದರೂ, ಅವನ ಬಲವೇ ದಿನದಿಂದ ದಿನಕ್ಕೆ ಇಳಿಯುತ್ತಾ ಹೋಯಿತು.





ಶಿವಾಜಿಯ ಎರಡನೇ ಕುಮಾರ ರಾಜಾರಾಮ್ ಮಹಾರಾಷ್ಟ್ರರಿಗೆ ನಾಯಕತ್ವವಹಿಸಿ ಮೊದಲು ಜಿಂಗಿ ಕೋಟೆಯಲ್ಲಿ, ಆಮೇಲೆ ಸತಾರಾ ಕೋಟೆಯಲ್ಲಿ ಹೀಗೆ ೧೭೦೦ ನೇ ವರ್ಷದಲ್ಲಿ ಅವನು ಸಾಯುವವರೆಗೂ ಹೋರಾಟ ಸಾಗಿಸಿದನು, ರಾಜಾರಾಮ್‌ನ ಅನಂತರ ಅವನ ಪತ್ನಿ ತಾರಾಬಾಯಿ ನಾಯಕಿಯಾಗಿ ಸಮರ್ಥತೆಯಿಂದ ಸೇನೆಗಳನ್ನು ನಡೆಸಿದುದರಿಂದ, ಔರಂಗಜೇಬನಿಗೆ ಶಾಂತಿ ಇಲ್ಲದೆ ಹೋಯಿತು.



## ಮೊಗಲ್ ಸಾಮ್ರಾಜ್ಯ ಪತನ

ಮಹಾರಾಷ್ಟ್ರರ ವಿಜೃಂಭಣೆಯನ್ನು ಅಡಗಿಸುವ ಪ್ರಯತ್ನದಲ್ಲಿ ಔರಂಗಜೇಬನು ತನ್ನ ಪರಿಪಾಲನೆಯ ಕಾಲದಲ್ಲಿ ಒಟ್ಟು ಇಪ್ಪತ್ತಾರು ವರ್ಷಗಳನ್ನು ದಖಿನ್ನಿನಲ್ಲಿ ಕಳೆಯಬೇಕಾಗಿ ಬಂತು. ಅವನು ರಾಜಧಾನಿಯಲ್ಲಿ ಇಲ್ಲದೆ ಹೋದುದರಿಂದ ಪರಿಪಾಲನೆಯ ವ್ಯವಹಾರಗಳು ಕುಂಠಿಸಿದುವು. ಅಕ್ಬರ್ ಎಂಬ ಅವನ ಮಗನು ತಂದೆಗೆ ಇದಿರು ತಿರುಗಿ ಪರ್ಷಿಯಾಕ್ಕೆ ಓಡಿಹೋದನು. ಈ ಪರಿಸ್ಥಿತಿಯಿಂದ ತುಂಬಾ ದುಃಖಿತನಾದ ಔರಂಗಜೇಬನು ೧೭೦೭ ರಲ್ಲಿ ಅಹ್ಮದ್ ನಗರದಲ್ಲಿ ತೀರಿಹೋದನು.

ಅವನ ಕುಮಾರರ ನಡುವಿನಲ್ಲಿದ್ದ ವಿರೋಧವು ರಕ್ತಪಾತಕ್ಕೆ ದಾರಿ ತೆಗೆಯಿತು. ಹಿರಿಯ ಮಗನು ಇಬ್ಬರು ತಮ್ಮಂದಿರನ್ನು ಕೊಂದು ಬಹದೂರ್ ಷಾ ಎಂಬ ಹೆಸರಿನಲ್ಲಿ ಸಿಂಹಾಸನವನ್ನು ಆಕ್ರಮಿಸಿಕೊಂಡನು. ೧೭೧೨ ರಲ್ಲಿ ಅವನು ತೀರಿಹೋದ ಮೇಲೆ, ಅವನ ಹಿರಿಯ ಮಗ ಜಹಾಂದರ್ ಷಾ ತನ್ನ ಮೂವರು ತಮ್ಮಂದಿರನ್ನು ಕೊಂದು ತನ್ನನ್ನು ರಾಜನೆಂದು ಪ್ರಕಟಿಸಿಕೊಂಡನು.





ಮತ್ತೆ ಒಂದು ವರ್ಷದೊಳಗೆ ಅವನ ಸೋದರ ಅಳಿಯನು ಅವನನ್ನು ಕೊಂದು ಸಿಂಹಾಸನವನ್ನೇರಿದನು. ಆಮೇಲೆ ದುಷ್ಟರೆಂದು ಹೆಸರು ಪಡೆದ ಸೈಯದ್ ಸೋದರರು ಅಧಿಕಾರವನ್ನು ಹಸ್ತಗತ ಮಾಡಿಕೊಂಡು, ತಮ್ಮ ಇಷ್ಟಾನುಸಾರವಾಗಿ ಒಬ್ಬರ ತರುವಾಯ ಒಬ್ಬರಂತೆ ಮೂವರು ರಾಜರನ್ನು ಸಿಂಹಾಸನದಲ್ಲಿ ಕೂಡಿಸಿ, ಕೊಲ್ಲಿಸಿಬಿಟ್ಟರು !



ಆಮೇಲೆ ಮಹಮ್ಮದ್ ಷಾ ಸಿಂಹಾಸನವನ್ನು ಆಕ್ರಮಿಸಿ, ಸೈಯದ್ ಸೋದರರನ್ನು ಹತ ಮಾಡಿಸಿಬಿಟ್ಟನು. ಆದರೆ, ಆಗಲೇ ಢಿಲ್ಲಿಯಲ್ಲಿ ಏರ್ಪಟ್ಟ ಅಶಾಂತಿಯನ್ನು ಕುರಿತು, ಅಲ್ಲಿಯ ಅಸ್ತವ್ಯಸ್ತ ಪರಿಸ್ಥಿತಿಯನ್ನು ಕುರಿತು ಕೇಳಿದ ಪರ್ಷಿಯಾ ಪಾಲಕನಾದ ನಾದಿರ್ ಷಾ, ದೊಡ್ಡ ಸೈನ್ಯದೊಂದಿಗೆ ಢಿಲ್ಲಿಯನ್ನು ಆಕ್ರಮಿಸಲಿಕ್ಕಾಗಿ ಭಾರತ ದೇಶದ ಮೇಲೆ ದಂಡೆತ್ತಿ ಬಂದನು.

ನಾದಿರ್ ಷಾನನ್ನು ಇದಿರಿಸುವ ಸೈನಿಕ ಬಲ ವಾಗಲಿ, ಧೈರ್ಯ ಸಾಹಸಗಳಾಗಲಿ ಮಹ ಮ್ಮದ್ ಷಾನಿಗೆ ಇರಲಿಲ್ಲ. ಅದರ ಮೇಲೆ ರಾಜಪುತ್ರರ ಸಹಾಯವನ್ನು ಕೂಡಾ ಅವನು ಕೇಳಲಿಲ್ಲ, ಆದುದರಿಂದ ನಾದಿರ್ ಷಾ ಸುನಾ ಯಾಸವಾಗಿ ಡಿಲ್ಲಿಯನ್ನು ಹಿಡಿದುಕೊಂಡನು. ಬೇರೆ ಉಪಾಯವಿಲ್ಲದೆ ಮಹಮ್ಮದ್ ಷಾ ನಾದಿರ್ ಷಾನನ್ನು ಸಗೌರವವಾಗಿ ಸ್ವಾಗತ ಮಾಡಿಕೊಂಡನು.





ನಾದಿರ್ ಷಾನು ಢಿಲ್ಲಿಯಲ್ಲಿ ಸುಖಭೋಗ ಗಳನ್ನು ಅನುಭವಿಸಿಕೊಂಡಿರಲು, ಅವನ ಸೈನಿಕರು ನಗರವನ್ನು ಕೊಳ್ಳೆ ಹೊಡೆಯ ತೊಡಗಿದರು. ನಾದಿರ್ ಷಾ ಸತ್ತುಹೋದ ನೆಂಬ ವದಂತಿ ಹೊರಟ ಕೂಡಲೇ ಢಿಲ್ಲೀ ನಗರದ ಪೌರರು ಹಿಡಿಸಲಾರದಷ್ಟು ಸಂತೋಷ ದಿಂದ, ಪರ್ಷಿಯಾ ಸೈನಿಕರ ಮೇಲೆ ಇದಿರು ತಿರುಗಿ ಕೆಲವರನ್ನು ಕೊಂದರು.

ಈ ವಾರ್ತೆ ನಾದಿರ್ ಷಾನ ಕಿವಿಗೆ ಬಿದ್ದ ಕೂಡಲೇ ಅವನು ತನ್ನ ಸೈನಿಕರನ್ನು ದಿಲ್ಲೀ ಪೌರರ ಮೇಲೆ ಪ್ರತೀಕಾರಕ್ಕೆ ಕೆರಳಿಸಿ ಕಳುಹಿಸಿದನು. ಅವರು ವಿಪರೀತವಾಗಿ ವಿಜೃಂಭಿಸಿ ಮನೆಗಳನ್ನೂ ಅಂಗಡಿಗಳನ್ನೂ ದೋಚಿಕೊಂಡು ನಾಶ ಮಾಡಿದರು. ಮಕ್ಕಳು ಮುದುಕರು, ಗಂಡು, ಹೆಣ್ಣು ಎಂಬ ಭೇದವೇನಿಲ್ಲದೆ ಒಂದೇ ದಿನದಲ್ಲಿ ಮೂವತ್ತು ಸಾವಿರ ಮಂದಿಯನ್ನು ಕೊಂದು ಹಾಕಿದರು.





ಪರ್ಷಿಯಾ ಸೈನಿಕರು ಭವನಗಳಿಗೆಲ್ಲ ಬೆಂಕಿ ಹಚ್ಚಿದರು. ಅಂದಚೆಂದದ ಕಟ್ಟಡಗಳೆಲ್ಲಾ ಅಗ್ನಿಗೆ ಆಹುತಿಯಾಗಿ ಮಸಿಯಾದುವು. ಕಂಡ ಕಂಡ ಪ್ರತಿಯೊಬ್ಬರನ್ನೂ ಕೊಲೆ ಮಾಡಿದರು. ಬ್ರಹ್ಮಾಂಡವಾದ ದಿಲ್ಲೀ ನಗರವು ದೆವ್ವಗಳ ನಗರವಾಗಿ ಕಂಡಿತು.

ಅಪರಿಮಿತವಾದ ಧನ, ಬಂಗಾರ, ಬೆಲೆ ಬಾಳುವ ಮಣಿರತ್ನಗಳೇ ಅಲ್ಲದೆ, ಜಗತ್ಪ್ರಸಿದ್ಧವಾದ ಮಯೂರ ಸಿಂಹಾಸನವನ್ನು ಕೂಡಾ ನಾದಿರ್ ಷಾನು ತನ್ನೊಂದಿಗೆ ಸಾಗಿಸಿಕೊಂಡು ಹೋದನು. ಅವುಗಳಷ್ಟೇ ಅಲ್ಲದೆ ಸಾವಿರ ಆನೆಗಳನ್ನೂ, ಏಳು ಸಾವಿರ ಕುದುರೆಗಳನ್ನೂ, ಹತ್ತು ಸಾವಿರ ಒಂಟೆಗಳನ್ನೂ, ವಿವಿಧ ವೃತ್ತಿಗಳಲ್ಲಿ ನಿಪುಣರಾದ ಅನೇಕ ಕೆಲಸಗಾರರನ್ನೂ ನಾದಿರ್ ಷಾ ಪರ್ಷಿಯಾಕ್ಕೆ ಸಾಗಿಸಿದನು.





ಸುಪ್ರಸಿದ್ಧವಾದ ಕೋಹಿನೂರ್ ವಜ್ರಕ್ಕಾಗಿ ನಾದಿರ್ ಷಾ ಮೊಗಲ್ ರಾಜಭವನಗಳಲ್ಲೆಲ್ಲಾ ಹುಡುಕಲು ತೊಡಗಿದನು. ಅಮೂಲ್ಯವಾದ ಆ ವಜ್ರವನ್ನು ಮಹಮ್ಮದ್ ಷಾ ತನ್ನ ತಲೆಯ ಉಷ್ಣೀಷದೊಳಗೆ ಅಡಗಿಸಿಕೊಂಡಿರುವಂತೆ ಒಬ್ಬ ಮೊಗಲ್ ಅಧಿಕಾರಿ ರಹಸ್ಯವಾಗಿ ನಾದಿರ್ ಷಾನಿಗೆ ಹೇಳಿದನಂತೆ.

ಗುಟ್ಟು ತಿಳಿದುಕೊಂಡ ನಾದಿರ್ ಷಾ ಮಹಮ್ಮದ್ ಷಾನೊಂದಿಗೆ, "ಮಿತ್ರಾ, ನಮ್ಮ ಮೈತ್ರಿಯ ಚಿಹ್ನೆಯಾಗಿ ನಮ್ಮ ಉಷ್ಣೀಷಗಳನ್ನು ಬದಲಾಯಿಸಿಕೊಳ್ಳೋಣವೇ ?" ಎಂದು ತನ್ನ ತಲೆಯ ಉಷ್ಣೀಷವನ್ನು ತೆಗೆದು ಮಹಮ್ಮದ್ ಷಾನ ಕೈಗೆ ಕೊಟ್ಟು; ಮಹಮ್ಮದ್ ಷಾನ ಉಷ್ಣೀಷವನ್ನು ತಾನೇ ಅವನ ತಲೆಯಿಂದ ತೆಗೆದು ಧರಿಸಿಕೊಂಡನು. ಆ ವಿಧವಾಗಿ ಕೋಹಿನೂರ್ ವಜ್ರವು ಅವನ ಹಸ್ತಗತವಾಯಿತು !





ಢಿಲ್ಲೀ ನಗರವನ್ನು ರಕ್ತದ ಹೊಳೆಯಲ್ಲಿ ಮುಳುಗಿಸಿ ಬೀಭತ್ಸವಾಗಿ ಮಾರ್ಪಡಿಸಿದ ನಾದಿರ್ ಷಾನು ಮೊಗಲ್ ಪರಿಪಾಲನೆಯ ಮೇಲೆ ಮರಣದ ಪೆಟ್ಟನ್ನೇ ಕೊಟ್ಟು ಹೋದನು. ಆ ಕಾಲದಲ್ಲಿಯೇ ಫ್ರೆಂಚು, ಇಂಗ್ಲೀಷು ವರ್ತಕರು ಭಾರತ ದೇಶದಲ್ಲಿಯ ಸಿರಿಸಂಪದಗಳಿಂದ ಆಕರ್ಷಿತರಾಗಿ ಕ್ರಮವಾಗಿ ಬರತೊಡಗಿದರು.




# ಕೃಷ್ಣಕುಮಾರಿ

ರಾಜಾಸ್ಥಾನದ ಉದಯಪೂರ್ ರಾಜ್ಯವು, ಮಹಾರಾಣಾರ ಕಾಲದಲ್ಲಿ ಅತಿ ವೈಭವದಿಂದ ಬೆಳಗಿಕೊಂಡಿದ್ದಿತು. ಮಹಾರಾಣಾ ಭೀಮ್ ಸಿಂಗ್ ಪರಿಪಾಲಿಸಿಕೊಂಡಿದ್ದಾಗ, ಉದಯಪೂರ್ ಸೌಂದರ್ಯ ನಗರವಾಗಿ ಅಭಿವೃದ್ಧಿಗೇರಿತು.

ಆ ಸುಂದರವಾದ ನಗರದಲ್ಲಿ ಮಹಾರಾಣಾನ ಕುಮಾರಿ ಕೃಷ್ಣಕುಮಾರಿ ಸೌಂದರ್ಯದ ರಾಶಿಯಾಗಿ ಹೆಸರು ಪಡೆದಳು. ಅವಳ ಸೌಂದರ್ಯಕ್ಕೆ ಮುಗ್ಧರಾಗಿ ಎಲ್ಲರೂ ಅವಳನ್ನು 'ರಾಜಾಸ್ಥಾನದ ಕುಸುಮ' ಎನ್ನುತ್ತಿದ್ದರು. ಅವಳ ಮಧುರ ಮಾತು ಮಿದುಗುಣಗಳು ಉದಯಪೂರ್ ಪ್ರಜೆಗಳಿಗೆ ಬಹಳ ಸಂತೋಷಪ್ರದವಾಗಿತ್ತು.





ಜಯಪೂರ್ ಪಾಲಕನಾದ ಜಗತ್ಸಿಂಗ್ ಆ ಯುವರಾಣಿಯನ್ನು ಮದುವೆಯಾಗಲು ಆಶಿಸಿ, ತನ್ನ ದೂತನನ್ನು ಮಹಾರಾಣಾನ ಬಳಿಗೆ ಕಳುಹಿಸಿದನು. ಬೇಗದಲ್ಲೇ ತನ್ನ ನಿರ್ಣಯವನ್ನು ತಿಳಿಸುವೆನೆಂದು ಹೇಳಿ ಮಹಾರಾಣಾನು ಜಗತ್ಸಿಂಗನ ದೂತನನ್ನು ಕಳುಹಿಸಿದನು. ಮಗಳ ಮದುವೆಯ ವಿಷಯವನ್ನು ರಾಣಿಯೊಂದಿಗೂ, ಮಂತ್ರಿಗಳೊಂದಿಗೂ ಆಲೋಚಿಸಿ ವಿವಾದಿಸಿ ನಿಶ್ಚಯಿಸಬೇಕೆಂದು ಮಹಾರಾಣಾನ ಉದ್ದೇಶ.



ಅಷ್ಟರಲ್ಲಿ ಜಗತ್ಸಿಂಗನಿಗೂ ಮಾರ್ವಾರ್ ಪಾಲಕನಾದ ಮಾನ್‌ಸಿಂಗನಿಗೂ ಯುದ್ಧವು ತೊಡಗಿತು. ಯುದ್ಧದಲ್ಲಿ ಜಗತ್ಸಿಂಗ್ ಸೋತು ಹೋದನೆಂದು ಮಾನ್‌ಸಿಂಗ್ ಪ್ರಕಟಪಡಿಸಿದನು. ಆದರೆ ಜಗತ್ಸಿಂಗ್ ಸೋಲನ್ನು ಒಪ್ಪಿಕೊಳ್ಳಲಿಲ್ಲ. ಅದರ ಪರಿಣಾಮವಾಗಿ ಅವರಿಬ್ಬರೂ ಬದ್ಧ ಶತ್ರುಗಳಾದರು.

ಯುದ್ಧವು ಮುಗಿದ ಮೇಲೆ ಮಾನ್‌ಸಿಂಗ್‌ನ ಪ್ರತಿನಿಧಿ ಉದಯಪೂರ್ ಮಹಾರಾಣಾನ ಬಳಿಗೆ ಹೋಗಿ, "ಯುವರಾಣಿ ಕೃಷ್ಣಕುಮಾರಿಯನ್ನು ನಮ್ಮ ರಾಜ ಮಾನ್‌ಸಿಂಗ್ ವಿವಾಹ ಮಾಡಿಕೊಳ್ಳಬೇಕೆಂದು ಆಶಿಸುತ್ತಾರೆ. ಯುದ್ಧದಲ್ಲಿ ಜಯಿಸಿದ ವೀರರಾದ ನಮ್ಮ ರಾಜರಿಗೆ ನಿಮ್ಮ ಕುಮಾರಿಯನ್ನು ಕೊಡಲು ನೀವು ಸಂತೋಷದಿಂದ ಒಪ್ಪಿಕೊಳ್ಳುವಿರೆಂದು ನಂಬುತ್ತೇವೆ" ಎಂದನು.





ಇದರಿಂದ ಮಹಾರಾಣಾನೂ, ರಾಣಿಯೂ ಸಂದಿಗ್ಧದಲ್ಲಿ ಬಿದ್ದರು. ಜಗತ್ಸಿಂಗ್, ಮಾನ್‌ಸಿಂಗ್ ಇಬ್ಬರೂ ಸಹ ಬಲಿಷ್ಠರೇ. ಆದುದರಿಂದ ತಮ್ಮ ಕುಮಾರಿಯನ್ನು ಯಾರಿಗೆ ಕೊಟ್ಟರೂ ಎರಡನೆಯವರೊಂದಿಗೆ ಉದಯಪೂರಕ್ಕೆ ವಿರೋಧವು ತಪ್ಪದು. ಆಗಿನ ಉದಯಪೂರ್ ಯಾವ ಒಬ್ಬರನ್ನಾದರೂ ಇದಿರಿಸುವ ಸ್ಥಿತಿಯಲ್ಲಿ ಇರಲಿಲ್ಲ.

ಮಾನ್‌ಸಿಂಗನಿಗೆ ಅಮೀರ್‌ಖಾನ್ ಎಂಬ ಮಿತ್ರ ನಿದ್ದನು. ಅವನು ಸಮಯ ದೊರಕಿದಾಗಲೆಲ್ಲಾ ಮಾನ್‌ಸಿಂಗ್ ಉದಯಪೂರ್ ಯುವರಾಣಿ ಯನ್ನು ಮದುವೆಯಾಗಬೇಕೆಂದು ಆಗಾಗ ಹೇಳಿ ಹುರಿಗೊಳಿಸುತ್ತಿದ್ದನು. ಆ ಪ್ರೋತ್ಸಾಹ ದಿಂದ ಮಾನ್‌ಸಿಂಗ್ ಮಹಾರಾಣಾನ ಬಳಿಗೆ ಆಗಾಗ ದೂತರನ್ನು ಕಳುಹಿಸಿ ಮದುವೆಗೆ ಒತ್ತಾಯಪಡಿಸತೊಡಗಿದನು.





ಕಡೆಗೊಮ್ಮೆ ಮಾನ್‌ಸಿಂಗನ ಪರವಾಗಿ ಅಮೀರ್ ಖಾನ್ ಸ್ವತಃ ಮಹಾರಾಣಾನ ಬಳಿಗೆ ಹೋಗಿ "ಮಾನ್‌ಸಿಂಗರಿಗೆ ನಿಮ್ಮ ಕುಮಾರಿಯನ್ನು ಕೊಡದೆಹೋದರೆ ಉದಯಪೂರನ್ನು ನಾಶ ಮಾಡಿಬಿಡುತ್ತೇವೆ. ನಿಮ್ಮ ಕುಮಾರಿಯನ್ನು ನೀವು ಕೊಂದರೂ ಚಿಂತೆ ಇಲ್ಲ. ಅವಳನ್ನು ಜಗತ್ಸಿಂಗನಿಗೆ ಮಾತ್ರ ಕೊಡಕೂಡದು" ಎಂದು ಎಚ್ಚರಿಕೆ ಕೊಟ್ಟನು.

ತನ್ನ ತಂದೆತಾಯಿಗಳಿಗೆ ಬಂದ ಸಂಕಟದ ಪರಿಸ್ಥಿತಿಯನ್ನು ನೋಡಿ ಕೃಷ್ಣಕುಮಾರಿ ಬಹಳ ವಿಷಾದಗೊಂಡಳು. ತನ್ನ ಮೂಲದಿಂದಾಗಿ ಉದಯಪೂರ್ ನಗರವು ನಾಶವಾಗುವುದು ಅವಳಿಗೆ ಇಷ್ಟವಿಲ್ಲ. ಆದರೂ ಅವಳು ಯಾವ ತಪ್ಪೂ ಮಾಡದೆಯೇ ಹೆತ್ತವರು ಕೂಡಾ ಅವಳೊಂದಿಗೆ ಮಾತಾಡುವುದನ್ನು ನಿಲ್ಲಿಸಿಬಿಟ್ಟರು.





ಕೆಲವು ದಿನಗಳು ಕಳೆಯುವುದರೊಳಗೇ ಜಗ
ತ್ಸಿಂಗ್ ಮತ್ತು ಮಾನ್ ಸಿಂಗ್ ಉದಯ
ಪೂರನ್ನು ಹಿಡಿದು ಯುವರಾಣಿಯನ್ನು ಮದುವೆ
ಯಾಗಲು ಹೊರಟರು. ನಗರದೊಳಗೆಲ್ಲಾ
ಭಯವು ಆವರಿಸಿಕೊಂಡಿತು. ರಾಜನಿಗೂ
ಅವನ ಪರಿವಾರದವರಿಗೂ ಏನು ಮಾಡ
ಬೇಕೆಂಬುದೇ ಗೊತ್ತಾಗಲಿಲ್ಲ.

ಒಂದು ದಿನ ರಾತ್ರಿ ಯುವರಾಣಿ ಮಲಗಿ
ಕೊಂಡಿದ್ದಾಗ, ಮಸಕು ಕತ್ತಲೆಯಲ್ಲಿ, ಕತ್ತಿ
ಹಿಡಿದುಕೊಂಡ ಒಬ್ಬನು ತನ್ನ ಬಳಿಗೆ ಬರುವು
ದನ್ನು ನೋಡಿ "ಅಪ್ಪಾ !" ಎಂದು ಕೂಗಿ
ದಳು. ಕೂಡಲೇ ಆ ವ್ಯಕ್ತಿ ಕತ್ತಿಯನ್ನು ದೂರ
ಬಿಸುಟು ಓಡಿಹೋದನು. ಅವನು ಮಹಾ
ರಾಣಾನ ಬಂಧುವಾದ ಜವಾನ್‌ದಾಸ್
ಎಂಬವನೇ.






ತನ್ನ ಮರಣ ಮಾತ್ರವೇ ನಗರಕ್ಕೆ ಬಂದ
ಅಪಾಯವನ್ನು ತಪ್ಪಿಸುವುದೆಂದು ತಿಳಿದು
ಕೊಂಡು, ತನ್ನನ್ನು ಕೊಲ್ಲಲು ಹಿರಿಯರು
ಜವಾನ್‌ದಾಸನನ್ನು ನಿಯೋಗಿಸಿದ್ದಾರೆಂದು ಯುವ
ರಾಣಿಗೆ ಗೊತ್ತಾಯಿತು. ಕೂಡಲೇ ಅವಳು
ಸೇವಕಿಯನ್ನು ವಿಷ ತರಲು ಹೇಳಿದಳು
ವಿಷಾದ ತುಂಬಿದ ನಗುವಿನೊಂದಿಗೆ ಅವಳು
ವಿಷವನ್ನು ಕುಡಿದು, ಹಾಗೆಯೇ ಪ್ರಾಣಬಿಟ್ಟು,
ತನ್ನ ಕುಟುಂಬವನ್ನೂ ರಕ್ಷಿಸಿದಳು.




# ಕಂಪೆನೀ ಯುಗ

ಹದಿನೆಂಟನೆಯ ಶತಮಾನದ ಪ್ರಾರಂಭದಲ್ಲಿ ಬ್ರಿಟಿಷ್ ಈಸ್ಟಿಂಡಿಯಾ ಕಂಪೆನೀ, ಕ್ರಮವಾಗಿ ಭಾರತದೇಶವನ್ನು ತನ್ನ ಅಧಿಕಾರದೊಳಗೆ ತರಲು ಪ್ರಯತ್ನಿಸಿತು. ಹಡಗುಗಳ ಮೇಲೆ ಹಡಗುಗಳಲ್ಲಿ ಬ್ರಿಟಿಷ್ ವರ್ತಕರು ಭಾರತದೇಶಕ್ಕೆ ಬರ ತೊಡಗಿದರು. ಆದರೆ ಭಾರತ ದೇಶದ ಸರಕು ಗಳು ಬ್ರಿಟಿಷ್ ಸರಕುಗಳಿಗೆ ಸ್ವಲ್ಪವೂ ಕಡಿಮೆ ಯಾದುದಲ್ಲವಾದುದರಿಂದ, ಬ್ರಿಟಿಷ್ ಸರಕು ಗಳಿಗೆ ಹೆಚ್ಚಿನ ಗಿರಾಕಿ ಇಲ್ಲದೆ ಹೋಯಿತು.

ಆದುದರಿಂದ ಈಸ್ಟಿಂಡಿಯಾ ಕಂಪೆನಿಯ ಜನರು ಆಗಾಗ ನಮ್ಮ ದೇಶದ ಕೆಲಸ ಜಾಣ ರಾದ ಜಾಡರ ಮನೆಗಳಿಗೆ ದಾಳಿ ಮಾಡಿ, ಮಗ್ಗ ಗಳನ್ನು ನಾಶಪಡಿಸಿ, ಅವರನ್ನು ಹೊಡೆದು ವಿಕಲಾಂಗರಾಗುವಂತೆ ಮಾಡುತ್ತಿದ್ದರು. ಆ ಕ್ರಮ ವಾಗಿ ಅವರು ವ್ಯಾಪಾರದಲ್ಲಿ ತಮ್ಮೊಂದಿಗೆ ಸ್ಪರ್ಧೆಗೆ ಬಾರದಂತೆ ಮಾಡಲು ಕಂಪೆನಿಯ ವರ್ತಕರು ಪ್ರಯತ್ನಿಸಿದರು.






ಕಂಪೆನಿಯವರು ಕೆಲವು ಪ್ರಾಂತಗಳಲ್ಲಿ ನೀಲಿ ಪೈರು ಬೆಳೆಸಲು ಪ್ರಾರಂಭಿಸಿ, ಸುತ್ತುಮುತ್ತಲಿನ ಕೂಲಿಯಾಳುಗಳನ್ನು ಕೆಲಸಕ್ಕೆ ತೆಗೆದುಕೊಂಡರು. ತಮಗೆ ತೃಪ್ತಿಯಾಗುವಂತೆ ಕೆಲಸ ಮಾಡದ ಬೇಸಾಯದ ಆಳುಗಳನ್ನು ಎತ್ತಿಗೆ ಹೊಡೆಯುವ ಹಾಗೆ ಹೊಡೆದು, ಕೊಡಬೇಕಾದ ಕೂಲಿಯನ್ನು ಕೊಡದೆ ಓಡಿಸುತ್ತಿದ್ದರು.



ದೇಶದೊಳಗಿನ ಸಣ್ಣ ಸಣ್ಣ ರಾಜರಿಂದ, ಜಮೀನುದಾರರಿಂದ, ಅಧಿಕಾರವನ್ನು, ಆಸ್ತಿ ಪಾಸ್ತಿಗಳನ್ನು ಬಗೆಬಗೆಯ ಕುಯುಕ್ತಿಗಳಿಂದ ತಾವೇ ಸಾಗಿಸುವಂತೆ ಕಂಪೆನೀ ದೊರೆತನ ಮಾಡಿತು. ಹೀಗೆ ಈಸ್ಟಿಂಡಿಯಾ ಕಂಪೆನಿ, ಬರಿಯ ವ್ಯಾಪಾರ ಸಂಸ್ಥೆಯಾಗಿರದೆ, ಭಾರತ ದೇಶದಲ್ಲಿ ದೊಡ್ಡ ಜಮೀನುದಾರಿಯಾಗಿ ರೂಪಾಂತರ ಹೊಂದಿತು.

ಕಂಪೆನಿ, ವಾರನ್ ಹೇಸ್ಟಿಂಗ್ಸ್‌ನನ್ನು ಬಂಗಾಳದ ಗವರ್ನರಾಗಿ ನಿಯಮಿಸಿತು. ಬಂಗಾಳಕ್ಕೆ ಸೇರಿದ ರಾಜಾ ನಂದಕುಮಾರ್*, ವಾರನ್ ಹೇಸ್ಟಿಂಗ್ಸ್‌ನ ಲಂಚಕೋರತನವನ್ನು ಕುರಿತು ಮೇಲಿನವರಿಗೆ ಫಿರ್ಯಾದಿ ಮಾಡಿದನು. ಆದರೆ ಹೇಸ್ಟಿಂಗ್ಸ್‌ನ ಮಿತ್ರ ಇಂಪೇಯೇ ನ್ಯಾಯಮೂರ್ತಿಯಾದುದರಿಂದ, ಅವನು ನಂದಕುಮಾರನ ಮೇಲೆ ಕಳವಿನ ಆರೋಪಣೆ ಹಾಕಿ, ಅವನಿಗೆ ಮರಣ ದಂಡನೆ ವಿಧಿಸಿದನು.





ಪುಣ್ಯ ಸ್ಥಳಗಳನ್ನು ಸಂದರ್ಶಿಸುವ ಕೆಲವರು ಸಾಧುಗಳ ಮೇಲೆ ಬ್ರಿಟಿಷ್ ಕಂಪೆನಿ ತೆರಿಗೆ ವಿಧಿಸಿದುದರಿಂದ, ಸಾಧುಗಳೂ ಸನ್ಯಾಸಿಗಳೂ ಅದಕ್ಕೆ ಬದ್ಧಶತ್ರುಗಳಾಗಿ ಇದಿರು ತಿರುಗಿದರು. ಹೀಗೆ ಬ್ರಿಟಿಷ್ ಅಧಿಕಾರವನ್ನು ಇದಿರಿಸಿದವರಲ್ಲಿ ಸಾಮಾನ್ಯರಾದ ಸಾಧು, ಸನ್ಯಾಸಿಗಳು ಮೊದಲನೇಯವರಾದರು.

ಭವಾನೀಪಥಕ್, ದೇವೀ ಚೌಧುರಾಣಿ ಎಂಬ ಇಬ್ಬರು ಪ್ರಮುಖರು ಸಾಧುಗಳ ಬಂಡಾಯಕ್ಕೆ ನಾಯಕತ್ವ ವಹಿಸಿದರು. ಮುಖ್ಯವಾಗಿ ಚೌಧುರಾಣಿ ಎಂಬ ಧೀರ ವನಿತೆ, ದೋಣಿಯೊಳಗೇ ಮನೆ ನಿರ್ಮಿಸಿಕೊಂಡು, ಪ್ರಯಾಣ ಮಾಡುತ್ತ ಸಣ್ಣ ಸಣ್ಣ ದೋಣಿಗಳಲ್ಲಿರುವ ವೀರರಿಗೆ ನಾಯಕಳಾಗಿ ಅಸಮಾನವಾದ ಧೈರ್ಯ ಸಾಹಸಗಳನ್ನು ಪ್ರದರ್ಶಿಸಿದಳು.






ದೇವೀ ಚೌಧುರಾಣಿಯ ಅನುಚರರು ಹಠಾತ್ತಾಗಿ ಕಂಪೆನೀ ಹಡಗುಗಳ ಮೇಲೆ ದಾಳಿ ಮಾಡಿ, ಅವುಗಳನ್ನು ಮುಳುಗಿಸಿ ಮರು ಕ್ಷಣದಲ್ಲಿ, ಮಿಂಚಿನಂತೆ ಅಡವಿಗಳ ಮೂಲಕ ಪ್ರವಹಿಸುವ ನದಿಗಳ ಮೇಲೆ ಓಡಿಬಿಡುತ್ತಿದ್ದರು.

ಸಾಧುಗಳ ಬಂಡಾಯದ ಅನಂತರ ಪೂರ್ವ ಹಾಗು ಮಧ್ಯ ಭಾರತ ದೇಶದ ರೈತರು ಕಂಪೆನೀ ದೊರೆತನದ ಮೇಲೆ ತಿರುಗಿ ಬೀಳಲು ಪ್ರಾರಂಭಿಸಿದರು. ಆದರೂ ತುಪಾಕಿಗಳ ಸಹಾಯದಿಂದ ಕಂಪೆನೀ, ಆ ಬಂಡಾಯವನ್ನು ದಾರುಣವಾದ ರೀತಿಯಲ್ಲಿ ಅಡಗಿಸಿಬಿಟ್ಟಿತು. ಕಂಪೆನಿಯ ಅಧಿಕಾರವು ಹಳ್ಳಿಗಳವರೆಗೂ ಬೇರು ಹರಡಿಸಿತು.





ಹಾಗಾದರೂ ಕಂಪೆನಿಯ ಅಧಿಕಾರವು ವಿಸ್ತರಿಸಿ ಅಷ್ಟೇನೂ ಅಧಿಕಾರ ಸಾಗಿಸಲಾಗಲಿಲ್ಲ. ಕರ್ನಾಟಕ ಪ್ರಾಂತದ ಕಿತ್ತೂರು ರಾಜನು ಇಬ್ಬರು ಕುಮಾರರನ್ನು ವಾರಸುದಾರರಾಗಿ ಬಿಟ್ಟು ತೀರಿಹೋದನು. ಕುಮಾರರ ಪರವಾಗಿ ರಾಣಿ ಚೆನ್ನಮ್ಮ ಸಮರ್ಥತೆಯಿಂದ ರಾಜ್ಯ ಪಾಲನೆ ಮಾಡತೊಡಗಿದಳು.

ದುರದೃಷ್ಟದಿಂದ ರಾಜಕುಮಾರರಿಬ್ಬರೂ ಸತ್ತು ಹೋದರು. ಹಿರಿಯ ಯುವರಾಜನು ದತ್ತ ಪುತ್ರನನ್ನು ಬಿಟ್ಟು ತೀರಿಹೋಗಿದ್ದರೂ, ಕಿತ್ತೂರು ರಾಜ್ಯವನ್ನು ವಾರಸರಿಲ್ಲದ ರಾಜ್ಯವೆಂದು ಕಂಪೆನೀ ಪ್ರಭುತ್ವವು ಪ್ರಕಟಿಸಿತು. ಆ ರಾಜ್ಯವನ್ನು ವಶಪಡಿಸಿಕೊಳ್ಳಲು ಕಂಪೆನೀ ಸೈನಿಕರು ಬಂದರು. ಆದರೂ ರಾಣೀ ಚೆನ್ನಮ್ಮ ಸ್ವತಃ ತನ್ನ ಸೈನ್ಯಕ್ಕೆ ನಾಯಕತ್ವ ವಹಿಸಿ, ಬ್ರಿಟಿಷ್ ಕಂಪೆನೀ ಸೈನ್ಯವನ್ನು ಇದಿರಿಸಿದಳು.





ರಾಣಿಯ ಸೈನಿಕರು ಕೋಟೆಯ ಮೇಲಿನಿಂದ ಫಿರಂಗಿಗಳನ್ನು ಸುಡಿಸಿ, ಬ್ಲಾಕ್, ಡಿಪ್ಟನ್ ಎಂಬ ಬ್ರಿಟಿಷ್ ಸೇನಾನಾಯಕರನ್ನೂ, ಥಾಕರೇ ಎಂಬ ಕಂಪೆನಿಯ ಪ್ರತಿನಿಧಿಯನ್ನೂ ಕೊಂದರು. ೧೮೨೪ ನೇ ವರ್ಷದಲ್ಲಿ ನಡೆದ ಆ ಯುದ್ಧದಲ್ಲಿ, ಮೊದಲು ಕಂಪೆನೀ ಸೈನಿಕರು ಸೋತುಹೋದರೂ, ಆಮೇಲೆ ದೊಡ್ಡ ಸೈನ್ಯದೊಂದಿಗೆ ಬಂದು, ರಾಣಿ ಚೆನ್ನಮ್ಮನನ್ನು ಸೋಲಿಸಿ, ಖೈದಿನಲ್ಲಿಟ್ಟರು. ಆದರೂ ಅವಳು ಪ್ರಾರಂಭಿಸಿದ ವಿಪ್ಲವೋದ್ಯಮವು ತಣಿಯಲಿಲ್ಲ.



# ಟಿಪ್ಪು ಸುಲ್ತಾನ್

ಮೈಸೂರಿನ ಪಾಲಕನಾಗಿದ್ದ ಹೈದರಾಲಿ, ಭಾರತ ದೇಶದಲ್ಲಿ ಬೆಳೆಯುತ್ತಿರುವ ಬ್ರಿಟಿಷ್ ಅಧಿಕಾರಕ್ಕೆ ತಲೆ ತಗ್ಗಿಸಲು ನಿರಾಕರಿಸಿದನು. ಬ್ರಿಟಿಷ್ ಈಸ್ಟಿಂಡಿಯಾ ಕಂಪೆನಿಗೂ, ಅವನಿಗೂ ನಡುವೆ ವೈರವು ಕ್ರಮವಾಗಿ ತೀವ್ರವಾಗುತ್ತ, ಯುದ್ಧವು ಪ್ರಾರಂಭವಾಯಿತು. ೧೭೮೨ ನೇ ವರ್ಷದಲ್ಲಿ ಕ್ಯಾನ್ಸರ್ ವ್ಯಾಧಿಯಿಂದ ಸಾಯುವವರೆಗೂ ಹೈದರಾಲಿ, ಕಂಪೆನೀ ಸೈನ್ಯದೊಂದಿಗೆ ಹೋರಾಡಿದನು.

ಹೈದರಾಲಿಯ ಅನಂತರ ಧೈರ್ಯಶಾಲಿಯೂ, ಬುದ್ಧಿವಂತನೂ ಆದ ಅವನ ಕುಮಾರ ಟಿಪ್ಪು ಸುಲ್ತಾನ್, ಸೇನೆಗಳಿಗೆ ನಾಯಕತ್ವ ವಹಿಸಿ ಯುದ್ಧವನ್ನು ಮುಂದುವರಿಸಿದನು. ಟಿಪ್ಪು ಸುಲ್ತಾನ್ ತೋರಿಸಿದ ಧೈರ್ಯ ಸಾಹಸಗಳು ಶತ್ರು ಶಿಬಿರಗಳಲ್ಲಿ ಭಯಾಂದೋಳನೆಯನ್ನುಂಟು ಮಾಡಿದುವು.





ಯುದ್ಧದಲ್ಲಿ ಬ್ರಿಟಿಷ್ ಸೇನೆಗಳು ಸೋತವು. ಕಂಪೆನೀ ಸೇನಾನಾಯಕ ಬ್ರಿಗೇಡರ್ ಮೇಥ್ಯೂಸ್ ಟಿಪ್ಪುಸುಲ್ತಾನನ ಬಂದಿಯಾದನು. ೧೭೮೪ ನೇ ವರ್ಷದಲ್ಲಿ ಬ್ರಿಟಿಷ್ ಕಂಪೆನಿ ಟಿಪ್ಪುಸುಲ್ತಾನನೊಂದಿಗೆ ಸಂಧಿ ಮಾಡಿಕೊಳ್ಳಲು ಒಪ್ಪಿಕೊಂಡಿತು.



ಟಿಪ್ಪುಸುಲ್ತಾನನಿಗೂ ಕಂಪೆನಿಗೂ ನಡುವೆ ಸ್ವಲ್ಪ ಕಾಲದವರೆಗೆ ಶಾಂತಿ ನೆಲೆಸಿತು. ಆದರೆ ಬ್ರಿಟಿಷ್ ಇಂಡಿಯಾ ಗವರ್ನರ್ ಜನರಲ್ ಕಾರನ್‌ವಾಲಿಸ್, ಮೈಸೂರು ವೀರನನ್ನು ಒಳ ಪಡಿಸಿಕೊಳ್ಳಲು ಸರಿಯಾದ ಸಮಯಕ್ಕಾಗಿ ಇದಿರು ನೋಡತೊಡಗಿದನು. ಮೂರುಸಾರಿ ಮೈಸೂರಿನ ಮೇಲೆ ತನ್ನ ಸೇನೆಗಳನ್ನು ಕಳುಹಿಸಿದನು. ಕಡೆಯ ಎರಡುಸಾರಿ ತಾನೇ ಸ್ವತಃ ಸೈನ್ಯಕ್ಕೆ ನಾಯಕತ್ವ ವಹಿಸಿಕೊಂಡನು.

ಬ್ರಿಟಿಷ್ ಸೈನ್ಯವು ಶ್ರೀರಂಗಪಟ್ಟಣವನ್ನು ಹಿಡಿದುಕೊಂಡಿತು. ತನ್ನ ರಾಜ್ಯದೊಳಗಿನ ಹೆಚ್ಚಿನ ಭಾಗವನ್ನು ಕಂಪೆನೀಗೆ ಕೊಡುವುದಾಗಿ ೧೭೯೨ನೇ ವರ್ಷದಲ್ಲಿ ಟಿಪ್ಪುಸುಲ್ತಾನ್ ಒಂದು ಒಪ್ಪಂದವನ್ನು ಕುದುರಿಸಿಕೊಂಡನು. ಆದರೂ ಟಿಪ್ಪುಸುಲ್ತಾನನ ಕುಮಾರರಿಬ್ಬರನ್ನು ತಮ್ಮ ಹತ್ತಿರ ಒತ್ತೆಯಾಗಿ ಇರಿಸಬೇಕೆಂದು ಬ್ರಿಟಿಷ್ ಪ್ರಭುತ್ವವು ನಿರ್ಬಂಧಿಸಿತು.





ಈ ದುಸ್ಥಿತಿಯನ್ನು ಸಹಿಸಲು ಟಿಪ್ಪುಸುಲ್ತಾನ ನಿಂದಾಗಲಿಲ್ಲ. ಹೈದ್ರಾಬಾದು ನಿಜಾಮ ನೊಂದಿಗೆ ಸಂಬಂಧ ನಡೆಸಲು ಟಿಪ್ಪುಸುಲ್ತಾನ್ ಪ್ರಯತ್ನಿಸಿದನು. ತನ್ನ ಕುಮಾರನಿಗೆ ನಿಜಾಮನ ಮಗಳೊಂದಿಗೆ ಮದುವೆ ಮಾಡಿಸೋಣವೆಂದು ಹೈದ್ರಾಬಾದು ನಿಜಾಮನಿಗೆ ಪ್ರತ್ಯೇಕ ದೂತನ ಮೂಲಕ ಸುದ್ದಿ ಕಳುಹಿಸಿದನು.

ಆದರೆ ಅದಕ್ಕೆ ಮೊದಲೇ ನಿಜಾಮನು ಕಂಪೆನಿಯೊಂದಿಗೆ ಮೈತ್ರಿಯ ಒಪ್ಪಂದ ಮಾಡಿಕೊಂಡಿದ್ದನು. ಆಮೇಲೆ ಟಿಪ್ಪುಸುಲ್ತಾನ್ ಬ್ರಿಟಿಷರನ್ನು ಇದಿರಿಸಲು ಸಹಾಯ ಕೇಳುತ್ತ, ಅರೇಬಿಯಾ, ಅಫ್‌ಘನಿಸ್ತಾನ್, ಟರ್ಕಿ, ಫ್ರಾನ್ಸ್ ದೇಶಗಳಿಗೆ ತನ್ನ ದೂತರನ್ನು ಕಳುಹಿಸಿದನು. ಆದರೆ ಯಾರಿಂದಲೂ ಸಹಾಯ ಲಭಿಸಲಿಲ್ಲ.





ಮಾರಿಷಸ್ ದ್ವೀಪದಲ್ಲಿ ಫ್ರೆಂಚ್ ಸೇನೆಗಳಿರುವುದೆಂದು ಯಾರೋ ಹೇಳಲು, ಟಿಪ್ಪುಸುಲ್ತಾನ್ ನಿಜವೆಂದುಕೊಂಡು ಅಲ್ಲಿಯ ಫ್ರೆಂಚ್ ಗವರ್ನರ್ ಮಲಾರ್‌ಟಿಕ್ಕನಿಗೆ ಸೇನೆಗಳನ್ನು ಕಳುಹಿಸುವಂತೆ ರಹಸ್ಯವಾಗಿ ಸುದ್ದಿ ಕಳುಹಿಸಿದನು. ಆದರೆ ಅಲ್ಲಿ ಫ್ರೆಂಚ್ ಸೇನೆಗಳು ಇರಲಿಲ್ಲ. ಆದರೂ ಟಿಪ್ಪುಸುಲ್ತಾನನ ಮೇಲೆ ತನಗಿರುವ ಸದಭಿಪ್ರಾಯದಿಂದ ಫ್ರೆಂಚ್ ಗವರ್ನರ್, ಬ್ರಿಟಿಷರನ್ನು ಇದಿರಿಸಬೇಕೆಂಬ ಇಚ್ಛೆಯುಳ್ಳ ಯಾರಾದರೂ ಸರಿಯೆ, ಟಿಪ್ಪುಸುಲ್ತಾನನ ಸೈನ್ಯದೊಂದಿಗೆ ಸೇರಬಹುದೆಂದು ಬಹಿರಂಗವಾಗಿ ಡಂಗುರ ಹಾಕಿಸಿದನು.

ಈ ಸಂಗತಿ ಭಾರತ ದೇಶಕ್ಕೆ ಹೊಸತಾಗಿ ಗವರ್ನರ್ ಜನರಲ್ ಆಗಿ ಬಂದ ವೆಲ್ಲೆಸ್ಲೀಗೆ ಗೊತ್ತಾಯಿತು. ಟಿಪ್ಪುಸುಲ್ತಾನ್ ಯುದ್ಧಕ್ಕಾಗಿ ಸಿದ್ಧನಾಗುತ್ತಿರುವನೆಂದು ತಿಳಿಯುತ್ತಲೇ ೧೭೯೮ನೇ ವರ್ಷದಲ್ಲಿ ವೆಲ್ಲೆಸ್ಲೀ ಯುದ್ಧವನ್ನು ಪ್ರಕಟಿಸಿದನು. ಬ್ರಿಟಿಷ್ ಕಂಪೆನಿಯೊಂದಿಗೆ ನಿಜಾಮನೂ, ಮಹಾರಾಷ್ಟ್ರರು ಕೂಡಾ ಕಲೆತುಕೊಂಡರು. ಈ ರೀತಿಯಾಗಿ ಟಿಪ್ಪುಸುಲ್ತಾನನ ಶತ್ರುಗಳು ಬಲಿಷ್ಠರಾದರು.





ಶತ್ರುಗಳು ಒಂದೇಸಾರಿ ಮೂರು ದಿಕ್ಕುಗಳಿಂದಲೂ ಶ್ರೀರಂಗಪಟ್ಟಣವನ್ನು ಮುತ್ತಿದರು. ಬರಿಯ ಕಂಪೆನಿಯ ಸೈನ್ಯವೇ ೩೫ ಸಾವಿರಕ್ಕೆ ಮೇಲೆಯೇ ಇದ್ದಿತು. ಅದರೊಂದಿಗೆ ಇತರರ ಸಹಾಯ ಕೂಡಾ ಜತೆಗೂಡಿದುದರಿಂದ ಟಿಪ್ಪು ಸುಲ್ತಾನನ ವಿಜಯದ ಅವಕಾಶ ಸಣ್ಣಗಾಯಿತು.

ಟಿಪ್ಪುಸುಲ್ತಾನನು ಬಾಗಿ ವಶನಾಗಿ ಕಂಪೆನಿಯವರು ಕೊಡುವ ಭರಣದಿಂದ ಸುಖವಾಗಿ ಜೀವಿಸಬಹುದೆಂದು ಕಂಪೆನಿ ಸಂಧಾನಮಾಡಿತು. ಟಿಪ್ಪುಸುಲ್ತಾನ್ ಅದಕ್ಕೆ ಒಪ್ಪಲಿಲ್ಲ. ಅದ್ಭುತವಾದ ಧೈರ್ಯ ಸಾಹಸಗಳಿಂದ ಮರಣಾಂತದವರೆಗೂ ಯುದ್ಧ ಮಾಡಿದನು.





ತನ್ನ ದೇಶದೊಳಗಿನ ಇತರ ಪಾಲಕರು ತನಗೆ ವ್ಯತಿರೇಕವಾಗಿ ಕಂಪೆನಿಯವರೊಂದಿಗೆ ಕೂಡಿಕೊಂಡರೂ, ತಾನು ಮಾತ್ರ ಕೊನೆಯ ಕ್ಷಣದವರೆಗೂ ಕಂಪೆನಿಯ ಅಧಿಕಾರವನ್ನು ಇದಿರಿಸಿ ಟಿಪ್ಪುಸುಲ್ತಾನ್ ಚರಿತ್ರೆಯಲ್ಲಿ ಅಮರನಾಗಿರುವನು. ಅವನು ತನ್ನ ಪ್ರಜೆಗಳಾದ ಹಿಂದುಗಳನ್ನು ತುಂಬಾ ಗೌರವದಿಂದ ನೋಡಿದನು. ರಾಣಾಪ್ರತಾಪ್ ಮೊಗಲರನ್ನು ಇದಿರಿಸಿ ಹೋರಾಡಿದಂತೆಯೇ ಟಿಪ್ಪುಸುಲ್ತಾನ್ ಬ್ರಿಟಿಷ್ ಅಧಿಕಾರವನ್ನು ವಿರೋಧಿಸಿದನು.

# ಬೆಂಟಿಂಕ್, ಡಲ್ಹೌಸೀ



ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಬ್ರಿಟಿಷರು ಭಾರತದೇಶದಲ್ಲಿ ತಮ್ಮ ಅಧಿಕಾರವನ್ನು ಸುಸ್ಥಿರ ಮಾಡಿಕೊಳ್ಳಲು ಗಟ್ಟಿ ಪ್ರಯತ್ನಕ್ಕೆ ತೊಡಗಿದರು. ಸ್ವದೇಶ ಪಾಲಕರ ಅಧಿಪತ್ಯವು ಸಣ್ಣದಾಗುತ್ತಾ ಬಂದಿತು. ಮಧ್ಯ ಭಾರತದೇಶದಲ್ಲಿ ಪಿಂಡಾರಿಗಳೆಂಬ ದರೋಡೆ ಕಳ್ಳರು ಊರುಗಳ ಮೇಲೆ ಬಿದ್ದು ದೋಚಿಕೊಂಡು ಅಲ್ಲಕಲ್ಲೋಲ ಸೃಷ್ಟಿಸುತ್ತಿದ್ದರು.

ಪಿಂಡಾರಿಗಳನ್ನು ಅಡಗಿಸಲಿಕ್ಕೆ ಬ್ರಿಟಿಷ್ ಸೈನ್ಯವು ಗಟ್ಟಿಯಾಗಿ ಹಟತೊಟ್ಟಿತು. ಕಡೆಗೆ ಪಿಂಡಾರಿಗಳ ನಾಯಕನಾದ ಪಠಾಣ್ ಅಮೀರ್‌ಖಾನ್, ಆಂಗ್ಲೇಯರ ಅಧಿಕಾರವನ್ನು ಅಂಗೀಕರಿಸಿಕೊಂಡನು. ಅವನು ಟೋಂಕ್‌ಗೆ ನವಾಬನಾದನು. ಚಿಟ್ಟೂ ಎಂಬ ಮತ್ತೊಬ್ಬ ನಾಯಕನು ಅಡವಿಯೊಳಗೆ ಓಡಿ ಹೋಗಿ, ಅಲ್ಲಿ ಹೆಬ್ಬುಲಿಯ ಬಾಯಿಗೆ ಬಿದ್ದನು.





ಗಂಡನು ಸತ್ತು ಹೋದರೆ ಹೆಂಡತಿ ಅದೇ ಚಿತಿಯ ಮೇಲೆ ಸಹಗಮನ ಮಾಡುವ ಆಚಾರವು ಅಲ್ಲಲ್ಲಿ ಇದ್ದಿತು. ಮೊದಲು ಭಕ್ತಿಯಿಂದ, ವಿಶ್ವಾಸದಿಂದ ಪ್ರಾರಂಭವಾದ ಈ ಆಚಾರವು ಕ್ರಮವಾಗಿ ಒಂದು ನಿರ್ಬಂಧವಾಗಿ, ಸಾಮಾಜಿಕ ದುರಾಚಾರವಾಗಿ ಮಾರ್ಪಟ್ಟಿತು. ಈ ದುರಾಚಾರವನ್ನು ನಿಷೇಧಿಸುವ ಶಾಸನವನ್ನು ತಂದನು ಬೆಂಟಿಂಕ್ ಪ್ರಭು.



ದೇಶದೊಳಗಿನ ವಿವಿಧ ಪ್ರಾಂತಗಳಲ್ಲಿ ಥಗ್ಗರು ಎಂಬ ಡಕಾಯಿತರ ಗುಂಪು ಪ್ರಬಲಿಸಿ, ದಾರಿಹೋಕರ ಮೇಲೆ ದಾಳಿ ನಡೆಸಿ ದೋಚಿಕೊಳ್ಳುತ್ತಿದ್ದರು. ಬೆಂಟಿಂಕ್ ಪ್ರಭು ಥಗ್ಗರನ್ನು ಕೂಡಾ ಜಯಪ್ರದವಾಗಿ ಅಡಗಿಸಿ ಬಿಟ್ಟನು.

ಕೆಲವು ಪ್ರಾಂತಗಳಲ್ಲಿ ಪೈರು ಚೆನ್ನಾಗಿ ಬರಬೇಕೆಂದು ನರಬಲಿ ಕೊಡುವ ದುರಾಚಾರವಿದ್ದಿತು. ಈ ದುರಾಚಾರವನ್ನು ಕೂಡಾ ನಿರ್ನಾಮ ಮಾಡಲು ಬೆಂಟಿಂಕ್ ಪ್ರಭು ಕಠಿಣವಾದ ಪ್ರವರ್ತನೆಯನ್ನು ಕೈಕೊಂಡು ದೊಡ್ಡದೊಂದು ಸಂಸ್ಕರಣವನ್ನು ತಂದವನೆಂದು ಹೆಸರು ಪಡೆದನು.





ಭಾರತೀಯ ಪರಿಪಾಲಕರೆಲ್ಲರೂ ತಮ್ಮ ಅಧಿಕಾರವನ್ನು ಕಳೆದುಕೊಳ್ಳುತ್ತಿದ್ದ ಸಮಯದಲ್ಲಿ, ಪಂಜಾಬಿನಲ್ಲಿ ಮಹಾರಾಜಾ ರಂಜಿತ್ ಸಿಂಗ್ ಚೆನ್ನಾಗಿ ಬಲಿಷ್ಠನಾಗ ತೊಡಗಿದನು. ಅವನ ನಾಯಕತ್ವದಲ್ಲಿ ಸಿಕ್ಖರೆಲ್ಲರೂ ಐಕಮತ್ಯದಿಂದ ಪ್ರವರ್ತಿಸುತ್ತಿದ್ದರು. ದೂರದೃಷ್ಟಿಯುಳ್ಳ ರಂಜಿತ್‌ಸಿಂಗ್ ಬ್ರಿಟಿಷರೊಂದಿಗೆ ಸ್ನೇಹಬಂಧಗಳನ್ನು ಹೆಚ್ಚುಗೊಳಿಸುತ್ತಾ ಬಂದನು.

೧೮೪೮ ನೆಯ ವರ್ಷದಲ್ಲಿ ಡಲ್ಹೌಸೀ ಪ್ರಭು ಭಾರತ ದೇಶಕ್ಕೆ ಗವರ್ನರ್ ಜನರಲ್ ಆದನು. ರಂಜಿತ್‌ಸಿಂಗ್ ತೀರಿಹೋದಮೇಲೆ, ಸಿಕ್ಖರಿಗೂ ಬ್ರಿಟಿಷ್‌ರಿಗೂ ನಡುವೆ ಯುದ್ಧಗಳು ಪ್ರಾರಂಭ ವಾದುವು. ಡಲ್ಹೌಸೀ ಪಂಜಾಬನ್ನು ಬ್ರಿಟಿಷ್ ಇಂಡಿಯಾ ದೊಂದಿಗೆ ಸೇರಿಸಿ, ಪೇಷಾವರಿನಿಂದ ಬರ್ಮಾದವರೆಗೆ ಬ್ರಿಟಿಷ್ ಸಾಮ್ರಾಜ್ಯವನ್ನು ವಿಸ್ತರಿಸಿದನು.





ಪುತ್ರರಿಲ್ಲದ ಪರಿಪಾಲಕರ ರಾಜ್ಯಗಳು ಈಸ್ಟ್ ಇಂಡಿಯಾ ಕಂಪೆನಿಗೇ ಸೇರುತ್ತವೆಂಬ ಶಾಸನ ವನ್ನು ಮಾಡಿದನು ಡಲ್ಹೌಸಿ. ಈ ಶಾಸನವು ಭಾರತೀಯ ಸಂಪ್ರದಾಯಕ್ಕೆ ವಿರುದ್ಧವಾದು ದೆಂದೂ, ಅದು ಪರಿಪಾಲಕರನ್ನು ಅವಮಾನ ಪಡಿಸುವಂತಹುದೆಂದೂ. ಅ ವ ನು ತಿಳಿದು ಕೊಳ್ಳಲು ತಪ್ಪಿದನು.

ಈ ನಿರಂಕುಶ ಶಾಸನದ ಮೂಲಕ ನಾಗಪೂರ್, ಸಂಬಲ್‌ಪೂರ್, ಸತಾರಾ ರಾಜ್ಯಗಳು ಬ್ರಿಟಿಷರ ಹಸ್ತಗತವಾದುವು. ೧೮೫೩ ನೇ ವರ್ಷದಲ್ಲಿ ಝಾನ್ಸಿ ರಾಜನಾದ ಗಂಗಾಧರರಾವ್ ರಾಣಿ ಲಕ್ಷ್ಮೀಬಾಯಿಯ ಸಮಕ್ಷಮದಲ್ಲಿ ಪುತ್ರನನ್ನು ದತ್ತಕ್ಕೆ ತೆಗೆದುಕೊಂಡಮೇಲೆ ಕಣ್ಣು ಮುಚ್ಚಿದನು. ಆದರೂ ಝಾನ್ಸೀ ರಾಜ್ಯವು ಬ್ರಿಟಿಷರಿಗೆ ಸೇರುತ್ತದೆಂದು ಡಲ್ಹೌಸೀ ಪ್ರಕಟಿಸಿದನು.





ಅದೇ ಸಂವತ್ಸರದಲ್ಲಿ ಮಹಾರಾಷ್ಟ್ರದ ಪಾಲಕನಾದ ಎರಡನೆಯ ಪೇಷ್ವಾಬಾಜೀರಾವ್‌ನ ದತ್ತ ಪುತ್ರನಾದ ನಾನಾಸಾಹೇಬನನ್ನು ಮಹಾರಾಷ್ಟ್ರ ರಾಜ್ಯದ ವಾರಸುದಾರನೆಂದು ಒಪ್ಪಿಕೊಳ್ಳಲಿಕ್ಕೆ ಡಲ್ಹೌಸೀ ನಿರಾಕರಿಸಿದನು. ಆ ಕಾರಣದಿಂದ ನಾನಾಸಾಹೇಬನು ಬ್ರಿಟಿಷರಿಗೆ ಪ್ರಬಲ ಶತ್ರುವಾದನು.

ಡಲ್ಹೌಸೀ ತೀವ್ರವಾದ ಸಾಮ್ರಾಜ್ಯವಾದಿಯಾಗಿದ್ದರೂ ದೇಶದ ಅಭಿವೃದ್ಧಿಯ ಬಗೆಗೆ ಬಹಳ ಉತ್ಸಾಹವನ್ನು ತೋರಿಸಿದನು. ಅವನ ಕಾರ್ಯಗಳ ಫಲಿತವಾಗಿಯೇ ಭಾರತದೇಶದಲ್ಲಿ ಮೊತ್ತಮೊದಲು ೧೮೫೩ ರಲ್ಲಿ ಬೊಂಬಾಯಿಯಿಂದ ಥಾನಾದ ನಡುವಿನಲ್ಲಿ ರೈಲುದಾರಿ ಹಾಕಲಾಯಿತು.






ನಮ್ಮ ದೇಶದಲ್ಲಿ ತಂತೀ ವಿಧಾನವನ್ನು ಪ್ರವೇಶ ಮಾಡಿಸಿದುದು ಮಾತ್ರವಲ್ಲದೆ, ದೇಶವೆಲ್ಲಕ್ಕೂ ವರ್ತಿಸುವಹಾಗೆ ಅಧಾಣೆಯ ಅಂಚೆಯರುಸುಮನ್ನು ಅಮಲುಗೊಳಿಸಿದನು ಡಲ್ಹೌಸೀ. ಕಲಕತ್ತಾ, ಬೊಂಬಾಯಿ, ಮದ್ರಾಸು ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಕೂಡಾ ಡಲ್ಹೌಸೀ ಬಹಳ ಕೆಲಸ ಮಾಡಿದನು.



# ಸಿಪಾಯಿಗಳ ದಂಗೆ

ಹೊಸ ಪ್ರಾಂತಗಳನ್ನು ಜಯಿಸಿ, ರಕ್ಷಣೆಮಾಡಲು ಈಸ್ಟಿಂಡಿಯಾ ಕಂಪೆನೀಗೆ ದೊಡ್ಡ ಸೈನ್ಯ ಬೇಕಾಯಿತು. ಭಾರತೀಯರನ್ನು ಕ್ರಮವಾಗಿ ಸೈನ್ಯದಲ್ಲಿ ಸೇರಿಸಿಕೊಳ್ಳತೊಡಗಿದರು. ಆದರೆ ಭಾರತೀಯ ಸಿಪಾಯಿಗಳಿಗೆ ಬ್ರಿಟಿಷ್ ಸಿಪಾಯಿಗಳಿಗಿಂತ ಸಂಬಳ, ಭತ್ಯೆಗಳು ಕಡಿಮೆ. ಅದರ ಮೇಲೆ ಬಗೆ ಬಗೆಯಾಗಿ ಅವಮಾನಿಸುತ್ತಿದ್ದರು. ಆಂಗ್ಲೇಯ ಸೈನಿಕನು ಕುದುರೆ ಸವಾರಿ ಮಾಡುವಾಗ ಭಾರತೀಯ ಸಿಪಾಯಿ ಅವನ ಸಾಮಗ್ರಿಗಳನ್ನು ಹೊತ್ತುಕೊಂಡು ಹೋಗಬೇಕಿತ್ತು.

ಆಂಗ್ಲೇಯರು ಸೈನಿಕರಿಗೆ ಹೊಸ ತುಪಾಕಿಗಳನ್ನು ಸರಬರಾಯಿ ಮಾಡಿದರು. ಆ ತುಪಾಕಿಗಳ ಸಿಡಿಮದ್ದಿನ ಮೇಲೆ ಪ್ರಾಣಿಗಳ ಕೊಬ್ಬನ್ನು ಅಂಟಿಸಿದ್ದರು. ಅವುಗಳನ್ನು ಸೈನಿಕರು ಹಲ್ಲಿನಿಂದ ಕಚ್ಚಿ ಉಪಯೋಗಿಸಬೇಕು. ತಮ್ಮ ಮತ ವಿಶ್ವಾಸಗಳಿಗೆ ಅವಮಾನ ಪಡಿಸುವ ಉದ್ದೇಶದಿಂದ ಕೊಬ್ಬನ್ನು ಹಚ್ಚಿರುವರೆಂದು ಹಿಂದೂ ಮುಸ್ಲಿಂ ಸೈನಿಕರು ಕುದಿಯ ತೊಡಗಿದರು.





ಅದರ ಫಲಿತವಾಗಿ ೧೮೫೭ ನೇ ವರ್ಷದ, ಮೇ ಹತ್ತನೇ ತಾರೀಕಿನ ದಿನ ಮೀರಟ್‌ನಲ್ಲಿ ಸೈನಿಕರು ಬ್ರಿಟಿಷ್ ಅಧಿಕಾರಿಗಳ ಮೇಲೆ ಬಂಡಾಯವೆದ್ದು ಅವರನ್ನು ಬಂದೀಗಳಾಗಿ ಹಿಡಿದುಕೊಂಡರು.



ಭಾರತೀಯ ಸೈನಿಕರು ಅಮಿತೋತ್ಸಾಹದಿಂದ ಢಿಲ್ಲಿಯ ಕಡೆಗೆ ಸಾಗಿದರು. ದಾರಿಯಲ್ಲಿ ಕೆಲವರು ಸೈನಿಕರು ಅಲ್ಲಲ್ಲಿದ್ದ ಸೈನಿಕ ಶಿಬಿರಗಳಲ್ಲಿ ಪ್ರವೇಶಿಸಿ ತಮ್ಮ ದಂಗೆಯನ್ನು ಕುರಿತು ತಿಳಿಯಪಡಿಸಿದರು. ಸೈನಿಕರೆಲ್ಲರಲ್ಲಿಯೂ ಅಸಂತೃಪ್ತಿಯೂ, ಅವೇದನೆಯೂ ಇದ್ದುದರಿಂದ ಸಿಪಾಯಿಗಳ ದಂಗೆ ಕಾಡುಗಿಚ್ಚಿನ ಹಾಗೆ ವಿಜೃಂಭಿಸಿ ಹರಡಿತು.

ಭಾರತೀಯ ಸೈನಿಕರು ಸುಪ್ರಸಿದ್ಧವಾದ ಕೆಂಪು ಕೋಟೆಯನ್ನು ವಶಪಡಿಸಿಕೊಂಡು, ಮೊಗಲ್ ವಂಶದವನಾದ ಬಹದ್ದೂರ್ ಷಾನನ್ನು ಚಕ್ರವರ್ತಿಯಾಗಿ ಪ್ರಕಟಿಸಿದರು. ಢಿಲ್ಲಿಯಲ್ಲಿದ್ದ ಬ್ರಿಟಿಷ್ ಸೈನ್ಯವು ಸೋತು ಓಡಿತು. ಢಿಲ್ಲೀ ಬಂಡಾಯಗಾರರ ವಶವಾಯಿತು.





ಬಿತ್ತೂರಿನಲ್ಲಿ ಎರಡನೇ ಪೀಷ್ವಾ ಬಾಜೀರಾವಿನ ದತ್ತಪುತ್ರನಾದ ನಾನಾಸಾಹೇಬನನ್ನು ಪೀಷ್ವಾ ವಾರಸುದಾರನೆಂದು ಬ್ರಿಟಿಷ್ ಪ್ರಭುತ್ವವು ಅಂಗೀಕರಿಸಲಿಲ್ಲ. ಆದರೆ ಅಚಂಚಲವಾದ ಧೈರ್ಯ ಸಾಹಸಗಳಿರುವ ಸೇನಾನಾಯಕನಾದ ತಾಂತಿಯಾತೋಪೇ ನಾನಾಸಾಹೇಬನಿಗೆ ಪಟ್ಟಾಭಿಷೇಕ ಮಾಡಿದನು. ನಾನಾಸಾಹೇಬನೂ, ತಾಂತಿಯಾತೋಪೆಯೂ ಸಿಪಾಯಿಗಳ ದಂಗೆಯೊಂದಿಗೆ ಕೂಡಿಕೊಂಡರು.

ಝಾನ್ಸೀರಾಣಿ ಲಕ್ಷ್ಮೀಬಾಯಿ ಮಗನನ್ನು ದತ್ತಕ್ಕೆ ತೆಗೆದುಕೊಂಡಿದ್ದರೂ, ಆಕೆಯ ರಾಜ್ಯವನ್ನು ವಾರಸರಿಲ್ಲದ ರಾಜ್ಯವೆಂದು ಪ್ರಕಟಿಸಿ ಬ್ರಿಟಿಷರು ಅದನ್ನು ಆಕ್ರಮಿಸಲು ತಮ್ಮ ಸೈನ್ಯವನ್ನು ತಂದು ಇಳಿಸಿದರು. ಲಕ್ಷ್ಮೀಬಾಯಿ ತನ್ನ ಸೇನೆಗಳಿಗೆ ತಾನೇ ಸ್ವತಃ ನಾಯಕತ್ವ ವಹಿಸಿ, ಧೈರ್ಯ ಸಾಹಸಗಳಿಂದ ಹೋರಾಡಿ, ಬ್ರಿಟಿಷ್ ಸೈನ್ಯವನ್ನು ಸೋಲಿಸಿ, ಸೇನಾಧಿಪತಿಗಳನ್ನು ಬಂದಿಗಳಾಗಿ ಹಿಡಿದುಕೊಂಡಳು.





ಬಂದಿಗಳಾದ ಸೈನಿಕರನ್ನು ಅವಳು ಗೌರವ ದಿಂದಲೇ ನೋಡಿದಳು. "ನಿಮ್ಮನ್ನು ನಮ್ಮ ಅತಿಥಿಗಳಾಗಿ ನೋಡಿಕೊಳ್ಳುತ್ತೇವೆ. ಆದರೆ ನಮ್ಮ ಆಚಾರ ವ್ಯವಹಾರಗಳನ್ನು ನಿಂದಿಸುವ ಅಧಿಕಾರ ನಿಮ್ಮ ಒಡೆಯರಿಗೆ ಇಲ್ಲವೆಂದು ನೀವು ಅವರಿಗೆ ತಿಳಿಸಬೇಕು" ಎಂದು ಬ್ರಿಟಿಷ್ ಸೈನಿಕರನ್ನು ಎಚ್ಚರಿಸಿದಳು. ಅಷ್ಟರಲ್ಲಿ ಹಠಾತ್ತಾಗಿ, ಸಮರ್ಥನೆಂದು ಹೆಸರು ಪಡೆದ ಸರ್ ಹಗ್ರೋಜ್‌ನ ನಾಯಕತ್ವದಲ್ಲಿ ಹೊಸ ಬ್ರಿಟಿಷ್ ಸೈನ್ಯವು ಬಂದು ಝಾನ್ಸೀ ರಾಜ್ಯವನ್ನು ಮುತ್ತಿಗೆ ಹಾಕಿತು.

ಲಕ್ಷ್ಮೀಬಾಯಿ ಸೈನಿಕನಂತೆ ನಿಂತು ಅಪೂರ್ವವಾದ ಧೈರ್ಯದಿಂದ ಹೋರಾಡಿ, ಕೋಟೆಯನ್ನು ರಕ್ಷಿಸಿಕೊಂಡಳು. ಆಮೇಲೆ ಅಧಿಕ ಸಂಖ್ಯೆಯಲ್ಲಿ ಬಂದ ಬ್ರಿಟಿಷ್ ಸೈನ್ಯವೂ, ಅವರಲ್ಲಿದ್ದ ಆಧುನಿಕ ಆಯುಧಗಳೂ ತಡೆಯಲಾಗದಂತಾದುವು. ಕೊನೆಗೆ ತನ್ನ ದತ್ತ ಕುಮಾರನಾದ ಶಿಶುವನ್ನು ಸುರಕ್ಷಿತವಾಗಿ ಎತ್ತಿಕೊಂಡು ಅಲ್ಲಿಂದ ತಪ್ಪಿಸಿಕೊಂಡಳು ಲಕ್ಷ್ಮೀಬಾಯಿ.





ನಾನಾಸಾಹೇಬನೂ, ತಾಂತಿಯಾತೋಪೆಯೂ ಝಾನ್ಸೀರಾಣಿಯನ್ನು ಕಲೆತುಕೊಂಡರು. ಅವರು ಸೈನ್ಯವನ್ನು ಸೇರಿಸಿಕೊಂಡು ಗ್ವಾಲಿಯರ್‌ನ ಮೇಲೆ ಧಾಳಿ ನಡೆಸಿದರು. ಬ್ರಿಟಿಷರ ಪಕ್ಷ ವಹಿಸಿದ ಗ್ವಾಲಿಯರ್ ಸಿಂಧಿಯಾ ಕೋಟೆಯನ್ನು ಬಿಟ್ಟು ಓಡಿಹೋದನು. ಗ್ವಾಲಿಯರ್ ಸೈನ್ಯವು ಲಕ್ಷ್ಮೀಬಾಯಿಯ ಸೈನ್ಯದೊಂದಿಗೆ ಕೂಡಿ, ಅಲ್ಲಿದ್ದ ಬ್ರಿಟಿಷ್ ಸೇನೆಗಳನ್ನು ನಿರ್ನಾಮ ಮಾಡಿದುವು.

ಬಲುಬೇಗನೇ ಸರ್‌ಹ್ಯಗ್‌ರೋಜ್ ದೊಡ್ಡ ಸೈನ್ಯ ದೊಂದಿಗೆ ಗ್ವಾಲಿಯರಿಗೆ ಬಂದು ಮುಟ್ಟಿದನು. ಎರಡು ಸಾರಿ ಭಯಂಕರ ಯುದ್ಧಗಳು ನಡೆದ ಮೇಲೆ, ಝಾನ್ಸೀರಾಣಿ ಅಲ್ಲಿಂದ ತಪ್ಪಿಸಿಕೊಳ್ಳ ಬೇಕಾಗಿ ಬಂದಿತು. ಬ್ರಿಟಿಷ್ ಸೈನಿಕರು ಅವಳನ್ನು ಬೆಂಬತ್ತಿ ಹೋದರು. ದಾರಿಯಲ್ಲಿ ಅವಳನ್ನು ಆಟಕಾಯಿಸಿ ಗಾಯಪಡಿಸಿದರಷ್ಟೇ ಹೊರತು ಅವಳನ್ನು ಹಿಡಿಯಲು ಅವರಿಂದಾಗಲಿಲ್ಲ.





ಗಾಯಗೊಂಡ ಝಾನ್ಸೀರಾಣಿ ತನ್ನ ಉದ್ಯಾನ ವನವನ್ನು ಸೇರಿ, ೧೮೫೮ನೇ ವರ್ಷ ಮೇ ೧೭ನೇ ತಾರೀಕಿನ ದಿನ ಮರಣಗೊಂಡಳು. ಅವಳ ಮರಣ ವಾರ್ತೆಯನ್ನು ಕೇಳಿ ಬ್ರಿಟಿಷ್ ಸೇನೆಗಳು ಅಲ್ಲಿಗೆ ಬರುವುದಕ್ಕೆ ಮೊದಲೇ ರಾಣಿಯ ಮಿತ್ರರೂ ಪರಿಚಾರಿಕೆಯರೂ ಅವಳ ಭೌತಿಕ ಕಾಯವನ್ನು ದಹನ ಮಾಡಿದರು. ಪ್ರಪಂಚ ಚರಿತ್ರೆಯಲ್ಲಿ ಝಾನ್ಸೀರಾಣಿ ಲಕ್ಷ್ಮೀಬಾಯಿ ಮರೆಯಲಾಗದ ವೀರ ವನಿತೆಯಾಗಿ ನಿಂತು ಕೊಂಡಿರುವಳು !



# ತಾಂತಿಯಾ ತೋಪೀ, ಕುನ್ವರ್ ಸಿಂಗ್

ಸಿಪಾಯಿಗಳ ದಂಗೆಯಲ್ಲಿ ತಾಂತಿಯಾ ತೋಪೀ ಅಪೂರ್ವ ಧೈರ್ಯ ಸಾಹಸ ಯುದ್ಧ ನೈಪುಣ್ಯತೆಗಳನ್ನು ಪ್ರಕಟಪಡಿಸಿದನು. ಸಂಪ್ರದಾಯದ ಕುಟುಂಬದಲ್ಲಿ ಹುಟ್ಟಿ, ನಾನಾಸಾಹೇಬನ ಆಸ್ಥಾನದಲ್ಲಿ ಗುಮಾಸ್ತನಾಗಿದ್ದರೂ, ತಾಂತಿಯಾತೋಪೀ ತನ್ನ ಯಜಮಾನನ ಹಕ್ಕುಗಳನ್ನು ರಕ್ಷಿಸಲು ಆಯುಧ ಧರಿಸಿದನು. ಸಾಮಾನ್ಯನನ್ನು ಸಹಾ ಒಳ್ಳೆಯ ಸೈನಿಕನನ್ನಾಗಿ ಮಾರ್ಪಡಿಸುವಂತಹ ಅದ್ಭುತ ಶಕ್ತಿ ಅವನಲ್ಲಿತ್ತು.

ಒಂದು ಸಾರಿ ತಾಂತಿಯಾ ತೋಪೀ ಬ್ರಿಟಿಷ್ ಸೇನೆಗಳನ್ನು ಪೂರ್ತಿ ಸೋಲಿಸಿ ಕಾನ್ಪೂರದಿಂದ ಕೆಲವು ಮೈಲು ದೂರದ ವರೆಗೆ ಓಡಿಸಿಕೊಂಡು ಹೋದನು. ಆಗ ಸೂರ್ಯಾಸ್ತಮಾನವಾದುದರಿಂದ ಅಲ್ಲಿಗೆ ಬಿಟ್ಟನು. ಬ್ರಿಟಿಷ್ ಸೇನಾನಾಯಕನು ತನ್ನ ದಯನೀಯವಾಗಿ ಹೋದ ಸ್ಥಿತಿಯನ್ನು ಕುರಿತು, ಭಾರತ ದೇಶದ ಬ್ರಿಟಿಷ್ ಸರ್ವ ಸೇನಾ ನಾನಾಯಕ ಸರ್ ಕೋಲಿನ್ ಕಾಂಬೆಲ್ಲಿಗೆ ಸುದ್ದಿ ಕಳುಹಿಸಿದನು.





ಆ ಸುದ್ದಿ ಕೇಳಿದ ಕೂಡಲೇ ಸರ್ ಕೋಲಿನ್ ಕಾಂಬೆಲ್ ದೊಡ್ಡ ಸೈನ್ಯದೊಂದಿಗೆ ಕಾನ್ಪೂರಕ್ಕೆ ಬಂದನು. ಆಗ ತಾಂತಿಯಾತೋಪೀ ಕಾಲ್ಪಿಯಾ ಪಟ್ಟಣದಲ್ಲಿದ್ದನು. ಅವನು ಅನೇಕ ಬಾರಿ ಕೋಲಿನ್ ಕಾಂಬೆಲ್ಲಿನ ಸೈನ್ಯವನ್ನು ಇದಿರಿಸಿ ಯುದ್ಧ ಮಾಡಿದನು. ಅವನ ಧೈರ್ಯವೂ, ಯುದ್ಧ ನೈಪುಣ್ಯತೆಯೂ ಬ್ರಿಟಿಷರನ್ನು ಬಹಳವಾಗಿ ದಂಗುಬಡಿಸಿತು.



ಒಂದು ಸಾರಿ ತಾಂತಿಯಾ ತೋಪೀಗೆ ಸ್ವಲ್ಪ ಕಾಯಿಲೆ ಬಂತು. ಆಗ ಅವನು ಒಬ್ಬ ಚಿಕ್ಕ ರಾಜನ ಆಶ್ರಯವನ್ನು ಕೇಳಿದನು. ಆ ರಾಜನು ಅವನನ್ನು ಅತ್ಯಂತ ಗೌರವದಿಂದ ಆದರಿಸಿದನು. ತಾನು ಭಾರತೀಯ ಪಾಲಕರ ಗೌರವ ಸ್ವಾತಂತ್ರ್ಯಗಳನ್ನು ರಕ್ಷಿಸಲಿಕ್ಕೇ ಹೋರಾಡುವವನಾದುದರಿಂದ, ಅಂತಹ ಭಾರತೀಯ ರಾಜನು ತನಗೆ ದ್ರೋಹ ಬಗೆಯಲಾರನೆಂದು ತಾಂತಿಯಾ ತೋಪೀ ನಂಬಿದನು.

ಆದರೆ ಅವನ ನಂಬುಗೆ ಸುಳ್ಳಾಯಿತು. ಅವನಿಗೆ ಆಶ್ರಯವಿತ್ತ ರಾಜನು ದುಷ್ಟನು. ತಾಂತಿಯಾ ತೋಪೀ ತನ್ನ ಬಳಿಯಲ್ಲಿರುವ ಸಂಗತಿಯನ್ನು ಅವನು ರಹಸ್ಯವಾಗಿ ಬ್ರಿಟಿಷರಿಗೆ ಮುಟ್ಟಿಸಿದನು. ತಾಂತಿಯಾತೋಪೀ ಉದ್ಯಾನವನದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ, ಬ್ರಿಟಿಷ್ ಸೈನಿಕರು ತೋಟ ಮಾಲಿಗಳ ವೇಷದಲ್ಲಿ ಬಂದು, ಅವನನ್ನು ಮುತ್ತಿ ಹಿಡಿದರು.





"ನನ್ನ ಮೇಲೆ ವಿಚಾರಣೆ ನಡೆಸುವ ಹಕ್ಕು ನಿಮಗಿಲ್ಲ. ನಾನು ಬ್ರಿಟಿಷ್ ಅಧಿಕಾರಕ್ಕೆ ಒಳಪಟ್ಟವನಲ್ಲ. ಮನೆಯೊಳಗೆ ನುಗ್ಗಿ ಕೊಳ್ಳೆ ಹೊಡೆಯುವ ಕಳ್ಳರು, ಮನೆಯ ಯಜಮಾನನನ್ನು ಹಿಡಿದು, ನ್ಯಾಯಶಾಸನಗಳೆಂದು ಅವನ ಮೇಲೆಯೇ ವಿಚಾರಣೆ ನಡೆಸುವುದು ನ್ಯಾಯ ವ್ಯವಸ್ಥೆಯನ್ನೇ ಗೇಲಿಮಾಡುವಂತೆ" ಎಂದು ಬ್ರಿಟಿಷರಿಗೆ ಇದಿರು ತಿರುಗಿ ಗರ್ಜಿಸಿದನು ತಾಂತಿಯಾ ತೋಪೀ.

ತಾಂತಿಯಾ ತೋಪೀಯನ್ನು ಗಲ್ಲಿಗೇರಿಸಿದುದನ್ನು ನೋಡಿ ನಾನಾಸಾಹೇಬನಿಗೆ ತುಂಬಾ ವಿಷಾದವಾಯಿತು. ಆ ಸ್ಥಿತಿಯಲ್ಲಿ ಕೂಡಾ ಅವನು ಬ್ರಿಟಿಷರನ್ನು ಇದಿರಿಸಿ ಹೋರಾಡಿದನು. ಕಟ್ಟ ಕಡೆಗೆ ನಾನಾಸಾಹೇಬನು ನೇಪಾಳದ ಕಾಡಿನೊಳಗೆ ಓಡಿ ಹೋದನು. ಅವನನ್ನು ಹಿಡಿಯಲು ಬ್ರಿಟಿಷರು ಬಹಳ ಪ್ರಯತ್ನ ಪಟ್ಟರು. ಆದರೆ ಅವನು ಸಿಗಲೇ ಇಲ್ಲ.





ಸಿಪಾಯಿ ದಂಗೆಯಲ್ಲಿ ಭಾಗವಹಿಸಿದ ಮತ್ತೊಬ್ಬ ಸಾಹಸದ ವೀರಪುಂಗವನೆಂದರೆ, ಜಗದೀಶ್‌ಪುರ ಪಾಲಕನಾದ ರಾಜಾ ಕುನ್ವರ್‌ಸಿಂಗ್. ಎಪ್ಪತ್ತೈದು ವಯಸ್ಸಿನವನಾದ ಕುನ್ವರ್ ಸಿಂಗ್ ಸ್ವತಃ ಆಯುಧಗಳನ್ನು ಹಿಡಿದು ಹೋರಾಡಿದನು. ತನ್ನ ಸೈನಿಕರಿಗೆ ಗೆರಿಲ್ಲಾ ಯುದ್ಧ ವಿಧಾನದಲ್ಲಿ ಶಿಕ್ಷಣ ಕೊಟ್ಟನು. ಮರಗಳ ಮೇಲಿನಿಂದ, ಪೊದೆಗಳ ಮರೆಯಿಂದ ಅವರು ಬ್ರಿಟಿಷ್ ಸೇನೆಗಳೊಂದಿಗೆ ಹೋರಾಡಿದರು.

ಮಿಂಚಿನಂತಹ ಬಿಳೀ ಕುದುರೆಯ ಮೇಲೆ ಅಧಿರೋಹಿಸಿ ಯುವಕ ವೀರನಂತೆ ಹೋರಾಡಿದನು ಕುನ್ವರ್‌ಸಿಂಗ್. ಒಮ್ಮೆ ಯುದ್ಧದಲ್ಲಿ ಬ್ರಿಟಿಷ್ ಸೇನೆಗಳು ಸಿಡಿಸಿದ ತುಪಾಕೀಗುಂಡು ಕುನ್ವರ್ ಸಿಂಗನ ಬಲಗೈಗೆ ತಾಗಿತು. ಆದರೂ ಅವನು ಗಾಯಗೊಂಡ ಆ ಕೈಯಲ್ಲಿ ಕಡಿವಾಣ ಹಿಡಿದುಕೊಂಡು, ಎಡಗೈಯಲ್ಲಿ ಕತ್ತಿ ತಿರುಗಿಸುತ್ತ ಶತ್ರುಗಳನ್ನು ಹತಮಾಡಿದನು.





ಕೆಲವು ದಿನಗಳ ಮೇಲೆ ಗಾಯವಾದ ಕೈಯ ವಿಷವು ಶರೀರವೆಲ್ಲಾ ವ್ಯಾಪಿಸುವಂತೆ ಕುನ್ವರ್ ಸಿಂಗಿಗೆ ಗೊತ್ತಾಯಿತು. ಅವನು ಗಂಗಾನದಿಯ ಬದಿಗೆ ಹೋಗಿ, "ಹೇ ಗಂಗಾಮಾತಾ ! ಇಕೋ ನಿನಗೆ ನನ್ನ ಕಾಣಿಕೆ !" ಎಂದು ಎಡಗೈಯ ಕತ್ತಿಯಿಂದ ಬಲಗೈಯನ್ನು ಕಡಿದು ಗಂಗಾನದಿಗೆ ಬೀಳಿಸಿದನು !

ಸ್ವಲ್ಪ ಹೊತ್ತಿನ ಮೇಲೆ ಮೂರ್ಛೆ ಹೋಗಿ ಬಿದ್ದ ಕುನ್ವರ್‌ಸಿಂಗ್ ಮರುದಿನ ಸತ್ತೂ ಹೋದನು. ಅವನ ಅನಂತರ ತಮ್ಮನಾದ ಅಮರಸಿಂಗ್ ಸೇನೆಗಳಿಗೆ ನಾಯಕನಾಗಿ ಕೋಟೆ ಬಿದ್ದು ಹೋಗುವವರೆಗೂ ಹೋರಾಡಿದನು.





ಜಗದೀಶಪುರದ ರಾಜಭವನದೊಳಗಿನ ಸ್ತ್ರೀಯರು ಫಿರಂಗಿಗಳ ಮುಂದೆ ನಿಂತು, ಅವುಗಳಿಗೆ ಬೆಂಕಿಹಚ್ಚಿಸಿ ತಮ್ಮ ಪ್ರಾಣಗಳನ್ನು ಆಹುತಿಕೊಟ್ಟರು. ಅಮರಸಿಂಗ್ ಅಲ್ಲಿಂದ ತಪ್ಪಿಸಿಕೊಂಡು ಹೋದನು. ಸಿಪಾಯಿದಂಗೆ ಅಂತ್ಯವಾಗತೊಡಗಿತು.



# ಅಧಿಕಾರದ ಮಾರ್ಪಾಡು

ಬ್ರಿಟಿಷ್ ಸೇನೆಗಳು ದಿಲ್ಲಿಯನ್ನು ಹಿಡಿದುಕೊಂಡ ಮೇಲೆ ಸಿಪಾಯಿಗಳ ಬಂಡಾಯವು ಅಂತಿಮ ದಶೆಗೆ ಬಂತು. ಬ್ರಿಟಿಷ್ ಸೇನೆಗಳು ದಿಲ್ಲಿಯನ್ನು ಮುತ್ತಿಗೆ ಹಾಕಿದ ಕೆಲವು ಗಂಟೆಗಳೊಳಗೆ ಜಾನ್ ನಿಕಲ್‌ಸನ್ ಎಂಬ ಬ್ರಿಟಿಷ್ ಸೇನಾ ನಾಯಕನು ಬಂಡಾಯಗಾರರ ತುಪಾಕಿಗೆ ಬಲಿಯಾಗಿಬಿದ್ದನು.

ಬಂಡಾಯಗಾರರು ತಮ್ಮ ಚಕ್ರವರ್ತಿಯಾಗಿ ಗುರುತಿಸಿದ ವೃದ್ಧನಾದ ಆಖೈರಿಯ ಮೊಗಲ್ ಪಾಲಕ ಬಹದ್ದೂರ್ ಷಾ ನಿಃಸಹಾಯಕನಾದನು. ತಮ್ಮ ಪೂರ್ವಿಕನಾದ ಹುಮಾಯೂನನ ಗೋರಿಯ ಸಮೀಪದಲ್ಲಿ ಬಹದ್ದೂರ್ ಷಾ, ದುಷ್ಟನಾದ ಮೇಜರ್ ಹಡ್ಸನ್ನನ ಮುಂದೆ ಶರಣಾಗತನಾದನು.





ಗೋರಿಯ ಹಿಂದೆ ಅಡಗಿಕೊಂಡಿದ್ದ ಬಹದ್ದೂರ್ ಷಾನ ಮಗಂದಿರಿಬ್ಬರನ್ನೂ ಕಂಡು ಹಿಡಿದ ಮೇಜರ್ ಹಡ್ಸನ್, ಅವರನ್ನು ಹಿಡಿದು ವಿವಸ್ತ್ರರನ್ನಾಗಿ ಮಾಡಿ, ಭಯಭ್ರಾಂತರಾದ ಪ್ರಜೆಗಳ ಸಮಕ್ಷಮದಲ್ಲಿ ನಿರ್ದಾಕ್ಷಿಣ್ಯದಿಂದ ಸ್ವತಃ ಗುಂಡು ಹೊಡೆದು ಕೊಂದನು.



ಬಹದ್ದೂರ್ ಷಾ ರಂಗೂನಿಗೆ ಸಾಗಿಸಲ್ಪಟ್ಟು ಅಲ್ಲಿ ೧೮೬೨ನೇ ವರ್ಷದಲ್ಲಿ ಸೆರೆಯಲ್ಲಿಯೇ ಸತ್ತನು. ಅಲ್ಲಿಗೆ ಮೊಗಲ್ ಸಾಮ್ರಾಜ್ಯವು ಅಂತರಿಸಿತು. ಕೊಟ್ಟಕೊನೆಗೆ ಉಳಿದ ಅವನ ಮಗಂದಿರಿಬ್ಬರೂ ಬಡತನದಲ್ಲಿ ನರಳ ಕೊಂಡಿದ್ದರು.

ಸಿಪಾಯಿಗಳ ದಂಗೆ ಬಂಡಾಯಗಳೆಲ್ಲ ವಿಫಲ ವಾದ ಮೇಲೆ ಕಂಪೆನಿಯ ಸೈನಿಕರು ಭಾರತೀ ಯರ ಮೇಲೆ ಹಗೆ ಹಿಡಿದು ಹಿಂಸಿಸ ತೊಡಗಿ ದರು. ವಿನೂ ಅರಿಯದ ಗ್ರಾಮ ಪ್ರಜೆಗಳನ್ನು ಕೊಂದು ಮರಗಳಲ್ಲಿ ನೇತಾಡ ಕಟ್ಟಿದರು. ಗುಂಡು ಹೊಡೆದು ಕೊಂದರು. ಲೆಕ್ಕವಿಲ್ಲದಷ್ಟು ಗ್ರಾಮಗಳನ್ನು ಸುಟ್ಟರು.






ಭಾರತದೇಶದಲ್ಲಿ ಕಂಪೆನಿಯ ಪಾಲನೆಯನ್ನು ಕುರಿತು ಇಂಗ್ಲಾಂಡಿನಲ್ಲಿ ವಿಮರ್ಶೆಗಳು ಹೊರ ಟವು. ಭಾರತದೇಶದ ಪರಿಪಾಲನೆಯ ಅಧಿಕಾರ ವನ್ನು ವಿಕ್ಟೋರಿಯಾ ರಾಣಿಯ ಹೆಸರಿನ ಮೇಲೆ ತಾನೇ ವಶಪಡಿಸಿಕೊಳ್ಳಬೇಕೆಂದು ಪ್ರಭುತ್ವದ ನಿರ್ಣಯವಾಯಿತು. ವಿಕ್ಟೋರಿಯಾ ರಾಣಿ 'ಕೈಜಾರ್-ಇ-ಹಿಂದ್' ಬಿರುದನ್ನು ಸ್ವೀಕರಿಸ ಬೇಕಾಗಿ ಬಂತು.

ಕಂಪೆನಿಯಿಂದ ನಿಯಮಿಸಲ್ಪಟ್ಟ ಗವರ್ನರ್ ಜನರಲ್ (ರಾಣಿಯ ಪ್ರತಿನಿಧಿ) ವೈಸ್ರಾಯ್ ಆದನು. ೧೮೫೮ ನೇ ವರ್ಷ ನವಂಬರ್ ಒಂದನೇ ತಾರೀಕಿನ ದಿನ ಅಲಹಾಬಾದಿನಲ್ಲಿ ಸಭೆ ನಡೆಸಿ, ವೈಸ್ರಾಯ್ ಕಾನಿಂಗ್ ಪ್ರಭು ಅಧಿಕಾರದ ಮಾರ್ಪಾಡನ್ನು ಪ್ರಕಟಿಸಿದನು.





ಆದಾದನಂತರ ಪರಿಪಾಲನೆಯ ವ್ಯವಹಾರಗಳಲ್ಲಿ ಅನೇಕ ಮಾರ್ಪಾಡುಗಳನ್ನು ಪ್ರವೇಶಗೊಳಿಸ ಲಾಯಿತು. ಕಲಕತ್ತಾ, ಮದ್ರಾಸು, ಬೊಂಬಾಯಿ ಪಟ್ಟಣಗಳಲ್ಲಿ ಉನ್ನತ ನ್ಯಾಯಸ್ಥಾನಗಳು ಸ್ಥಾಪಿ ಸಲ್ಪಟ್ಟುವು. ವಿದ್ಯೆಗೆ ಪ್ರಮುಖ ಸ್ಥಾನ ನೀಡ ಲಾಯಿತು. ವಿದ್ಯೆಗಳ ವ್ಯಾಪ್ತಿಗಾಗಿ ವಿವಿಧ ಪ್ರಾಂತಗಳಲ್ಲಿ ವಿದ್ಯಾಶಾಖೆಗಳು ಏರ್ಪಡಿ ಸಲ್ಪಟ್ಟವು.

೧೮೮೦ ನೇ ವರ್ಷದಲ್ಲಿ ರಿಪ್ಪನ್ ಪ್ರಭು ಹೊಸ ವೈಸ್ರಾಯ್ ಆಗಿ ಬಂದನು. ಅವನು ಒಳ್ಳೆಯ ಮನಸ್ಸಿನ, ಆದರ್ಶಭಾವನೆಗಳುಳ್ಳ, ಸಂಸ್ಕೃತ ನಾಗಿದ್ದ. ಅವನು ಬಂದ ಮೇಲೆ ಪ್ರಾಂತೀಯ ಸಂಘಗಳು, ಪುರಪಾಲಕ ಸಂಘಗಳು ಏರ್ಪಟ್ಟುವು. ಪರಿಪಾಲನೆಯ ವ್ಯವಹಾರಗಳಲ್ಲಿ ಭಾರತೀಯರಿಗೆ ಕೂಡಾ ಕೆಲವು ಚಿಕ್ಕ ಚಿಕ್ಕ ಹಕ್ಕುಗಳನ್ನು ನೀಡ ಲಾಯಿತು.





ಅದಕ್ಕೆ ಮೊದಲು ಆರೋಪಿಯಾದ ಆಂಗ್ಲೇಯನನ್ನು ವಿಚಾರಣೆ ಮಾಡುವ ಅಧಿಕಾರವು ಭಾರತೀಯರಿಗೆ ಇರಲಿಲ್ಲ. ಈ ಪಕ್ಷಪಾತದ ವೈಖರಿ ರಿಪ್ಪನ್ ಪ್ರಭುವಿಗೆ ಹಿಡಿಸಲಿಲ್ಲ. ಅವನು ಬ್ರಿಟಿಷ್ ನ್ಯಾಯಾಧಿಕಾರಿಗಳಿಗೂ ಭಾರತೀಯ ನ್ಯಾಯಮೂರ್ತಿಗಳಿಗೂ ಸಮಾನ ಹಕ್ಕು ಕೊಡಲು ನಿಶ್ಚಯಿಸಿದನು. ಇದು ಭಾರತದಲ್ಲಿರುವ ಆಂಗ್ಲೇಯರ ಕೋಪಕ್ಕೆ ಕಾರಣವಾಯಿತು.

ವಿರಕ್ತಿಗೊಂಡ ರಿಪ್ಪನ್ ಪ್ರಭು ತನ್ನ ಪದವಿಗೆ ರಾಜೀನಾಮೆ ಕೊಟ್ಟು ಇಂಗ್ಲೆಂಡಿಗೆ ಹೊರಟನು. ಆತನಲ್ಲಿದ್ದ ಪ್ರಾಮಾಣಿಕತೆಗೂ, ಸ್ನೇಹಭಾವನೆಗಳಿಗೂ ಆನಂದಿಸಿದ ಭಾರತೀಯರು ಅವನಿಗೆ ಘನ ರೀತಿಯಲ್ಲಿ ಬೀಳ್ಕೊಡುಗೆ ಕೊಟ್ಟರು. ಅನಂತರ ಭಾರತೀಯರು ಒಂದು ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಬೇಕಾದ ಅಗತ್ಯವನ್ನು ಕ್ರಮವಾಗಿ ತಿಳಿಯ ತೊಡಗಿದರು.





೧೮೮೫ನೇ ವರ್ಷದಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿಸಲ್ಪಟ್ಟಿತು. ಕಾಂಗ್ರೆಸ್ಸಿನ ಪ್ರಥಮ ಮಹಾಸಭೆ ಕಲಕತ್ತಕ್ಕೆ ಸೇರಿದ ಸುಪ್ರಸಿದ್ಧ ನ್ಯಾಯವಾದಿಯಾದ ಡಬ್ಲ್ಯು. ಸಿ. ಬೆನರ್ಜೀಯ ಅಧ್ಯಕ್ಷತೆಯಲ್ಲಿ ಬೊಂಬಾಯಿಯಲ್ಲಿ ಸಮಾವೇಶವಾಯಿತು. ಪದವಿಯಿಂದ ವಿರಮಿಸಿದ ಬ್ರಿಟಿಷ್ ಅಧಿಕಾರಿ ಅಲನ್ ಅಕ್ಟಾವಿಯನ್ ಹ್ಯೂಮ್, ರಾಷ್ಟ್ರೀಯ ಕಾಂಗ್ರೆಸ್ ಆವಿರ್ಭವಿಸಲು ತುಂಬಾ ಪ್ರೇರಣೆಯನ್ನುಂಟು ಮಾಡಿದನು.



# ಭಾರತ ಪುನರುಜ್ಜೀವನ

ಭಾರತೀಯ ಚೈತನ್ಯವು ೧೮೫೭ ನೇ ಸಂವತ್ಸರದ ಸಿಪಾಯಿಗಳ ಬಂಡಾಯಕ್ಕೆ ದಾರಿ ಮಾಡಿದಂತೆಯೇ ಭಾರತದ ಪುನರುಜ್ಜೀವನಕ್ಕೆ ಪೋಷಕವಾದ ನೂತನ ಭಾವಗಳೂ, ರಾಷ್ಟ್ರೀಯ ಚೈತನ್ಯವೂ ಸಂಸ್ಕರಣೆಗಳೂ ದೇಶದೊಳಗೆಲ್ಲಾ ಅರಳಲು ತೊಡಗಿದುವು. ಆಗಿನ ಸಾಮಾಜಿಕ ಸಂಸ್ಕರ್ತರಲ್ಲಿ ಮುನ್ನೆಣಿಗೆ ಬರುವವರು ರಾಜಾರಾಮ್ ಮೋಹನ್ ರಾಯ್.

ಬಂಗಾಳದ ಹೂಗ್ಲೀ ಜಿಲ್ಲೆಯಲ್ಲಿ ೧೭೭೨ ರಲ್ಲಿ ಜನಿಸಿದ ರಾಮ್ ಮೋಹನ್ ರಾಯ್ ಸಮಾಜದಲ್ಲಿ ಹೂತು ಬೇರುಬಿಟ್ಟ ಸತೀಸಹಗಮನ, ವರ್ಣವಿಭೇದ ಮೊದಲಾದ ದುರಾಚಾರಗಳನ್ನು ನಾಶಗೊಳಿಸಲು ಪ್ರಯತ್ನ ಮಾಡಿದರು. ೧೮೨೮ ನೇ ವರ್ಷದಲ್ಲಿ ಬ್ರಹ್ಮ ಸಮಾಜವನ್ನು ಸ್ಥಾಪಿಸಿ ಒಬ್ಬನೇ ದೇವನೆಂದು, ಜಾತಿಭೇದಗಳು ಕೂಡದೆಂದು, ಸ್ತ್ರೀಯರಿಗೆ ವಿಮೋಚನೆ ಕೊಡಬೇಕೆಂದು ಬಹು ದೀಕ್ಷೆಯಿಂದ ಪ್ರಚಾರ ಮಾಡಿದರು.





ಆಂಗ್ಲೇಯರಿಗೆ ಸರಿಸಮಾನವಾಗಿ ಭಾರತೀಯರನ್ನೂ ನೋಡಬೇಕೆಂದು ಅವರು ಕೇಳಿಕೊಂಡರು. ಭಾರತ ದೇಶದಲ್ಲಿ ಇಂಗ್ಲೀಷು ವಿದ್ಯಾಬೋಧನೆಯ ಅಗತ್ಯವನ್ನು ಗುರುತಿಸಿ, ಅದಕ್ಕಾಗಿ ಕಾರ್ಯ ಮಾಡಿದರು. ಢಿಲ್ಲಿಯ ಪಾಲಕನಾದ ಎರಡನೇ ಅಕ್ಬರ್ ಚಕ್ರವರ್ತಿ ರಾಮ್‌ಮೋಹನ್ ರಾಯ್‌ಗೆ 'ರಾಜಾ' ಬಿರುದನ್ನಿತ್ತು, ಸತ್ಕರಿಸಿ ಭಾರತ ದೇಶದ ಸ್ಥಿತಿಗತಿಗಳನ್ನು ಆಂಗ್ಲೇಯರಿಗೆ ತಿಳಿಯ ಪಡಿಸಲು ಅವರನ್ನು ಇಂಗ್ಲೆಂಡಿಗೆ ಕಳುಹಿಸಿದನು.



ರಾಜಾರಾಮ್ ಮೋಹನ್ ರಾಯ್ ಇಂಗ್ಲೆಂಡಿನಲ್ಲಿಯೇ ೧೮೩೩ ರಲ್ಲಿ ತೀರಿಹೋದರು. ರಾಮ್ ಮೋಹನ್ ರಾಯ್‌ಯ ತರುವಾಯ ಹೇಳಿಕೊಳ್ಳತಕ್ಕ ಪಂಡಿತರೂ, ಸಂಸ್ಕರ್ತರೂ ಆದವರು ಸ್ವಾಮಿ ದಯಾನಂದ ಸರಸ್ವತಿಯವರೇ. ಅವರು ಗುಜರಾತಿನ ಮೋರ್ವಿಯಲ್ಲಿ ೧೮೨೪ ನೇ ವರ್ಷದಲ್ಲಿ ಹುಟ್ಟಿದರು, ಅವರು ವೇದಗಳಿಗೆ ನೂತನ ವ್ಯಾಖ್ಯಾನ ಬರೆದರು. ಆರ್ಯ ಸಮಾಜವನ್ನು ಸ್ಥಾಪಿಸಿ ಅನೇಕ ಸಂಸ್ಕರಣೆಗಳನ್ನು ಪ್ರವೇಶಗೊಳಿಸಿದರು.

ಸ್ವಾಮಿ ದಯಾನಂದ ಸರಸ್ವತಿಯವರು ದೊಡ್ಡ ವಿದ್ವಾಂಸರು. ಅವರ ಆಲೋಚನೆಗಳು ಹರಿದ್ವಾರದ ಗುರುಕುಲ ವಿದ್ಯಾಲಯಕ್ಕೆ ಎಷ್ಟೋ ಪ್ರೇರಣೆಗಳನ್ನು ಕೊಟ್ಟಿವೆ. ಕೇವಲ ವಿಷಯಗಳನ್ನು ತಿಳಿಯ ಪಡಿಸುವುದು ಮಾತ್ರವಲ್ಲದೆ ಗುರುಕುಲದ ವಿದ್ಯಾವಿಧಾನ, ವಿದ್ಯಾರ್ಥಿಗಳಲ್ಲಿ ನಮ್ಮ ಸಂಸ್ಕೃತಿ, ವಾರಸತ್ವದ ತೂಕಗಳನ್ನು ಗ್ರಹಿಸುವಂತೆ ಮಾಡುವಹಾಗೆ ರೂಪಿಸಲ್ಪಟ್ಟಿತು.





೧೮೩೬ ನೇ ವರ್ಷದಲ್ಲಿ ಬಂಗಾಳದಲ್ಲಿಯ ಕಮರ್‌ಪೂರ್ ಎಂಬ ಗ್ರಾಮದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಹುಟ್ಟಿದರು. ಅವರು ಆರು ವರ್ಷ ಪ್ರಾಯದಲ್ಲಿ, ಕಪ್ಪಗಿನ ಮೇಘಗಳ ಮೇಲೆ ಹಾರುವ ಬೆಳ್ಳಗಿನ ಕೊಕ್ಕರೆಗಳನ್ನು ನೋಡಿ, ತನ್ಮಯರಾಗಿ ಸರ್ವವನ್ನೂ ಮರೆತು ಧ್ಯಾನ ಸಮಾಧಿ ಸ್ಥಿತಿಯಲ್ಲಿ ಆಧ್ಯಾತ್ಮಿಕಾನಂದವನ್ನು ಹೊಂದುವಂತಾಗಿದ್ದರು.

ರಾಣಿ ರಸ್ಮಯಿ ಕಟ್ಟಿಸಿದ ಕಾಳಿಕಾಲಯದಲ್ಲಿ ರಾಮಕೃಷ್ಣರು ಅರ್ಚಕರಾದರು. ಅವರು ದೇವಿಯ ದರ್ಶನ ಪಡೆದು ಆಕೆಯೊಂದಿಗೆ ಮುಖಾಮುಖೀ ಮಾತಾಡಬಲ್ಲವರು. ಅವರು ಬೇರೆ ಬೇರೆ ಭಕ್ತಿ ಮಾರ್ಗಗಳನ್ನು ಆಚರಿಸಿ ನೋಡಿ, ಎಲ್ಲಾ ಮಾರ್ಗಗಳೂ ಒಂದೇ ದೈವ ಗಮ್ಯವನ್ನು ತಲಪುವುದೆಂದು ಕಂಡುಕೊಂಡರು.





ರಾಮಕೃಷ್ಣ ಪರಮಹಂಸರಿಂದ ಹಲವರು ಆಕರ್ಷಿಸಲ್ಪಟ್ಟು ಅವರ ಭಕ್ತರಾದರು. ಗಾಢವಾದ ಆಧ್ಯಾತ್ಮಿಕ ಸತ್ಯಗಳನ್ನು ಅವರು ಸರಳವಾಗಿ ನೇರವಾಗಿ ತಿಳಿಯಪಡಿಸುವ ರೀತಿ ಭಕ್ತರನ್ನು ಮುಗ್ಧಗೊಳಿಸಿತು. ಕ್ರಮವಾಗಿ ರಾಮಕೃಷ್ಣ ಪರಮಹಂಸರ ಭಕ್ತರು ಅವರನ್ನು ಭಗವದವತಾರವೆಂದೇ ಭಾವಿಸತೊಡಗಿದರು.

ರಾಮಕೃಷ್ಣ ಪರಮಹಂಸರಿಂದ ಆಕರ್ಷಿಸಲ್ಪಟ್ಟವರಲ್ಲಿ ನರೇಂದ್ರನೆಂಬ ಯುವಕನು ಅವರನ್ನು ಆಶ್ರಯಿಸಿ, ಸ್ವಾಮಿ ವಿವೇಕಾನಂದರೆನಿಸಿದನು. ೧೮೬೩ ನೇ ವರ್ಷದಲ್ಲಿ ಜನಿಸಿದ ಸ್ವಾಮಿ ವಿವೇಕಾನಂದರು ೧೮೮೧ ನೇ ವರ್ಷದಲ್ಲಿ ರಾಮಕೃಷ್ಣ ಪರಮಹಂಸರನ್ನು ಮೊತ್ತಮೊದಲು ದರ್ಶನ ಮಾಡಿ ಶಿಷ್ಯರಾದರು.





೧೮೯೩ನೇ ವರ್ಷದಲ್ಲಿ ಅಮೇರಿಕದ ಚಿಕಾಗೋ ನಗರದಲ್ಲಿ ನಡೆದ ಪ್ರಪಂಚ ಸರ್ವಮತ ಸಮಾವೇಶದಲ್ಲಿ ಸ್ವಾಮಿ ವಿವೇಕಾನಂದರು ಭಾಗವಹಿಸಿದರು. ಅಲ್ಲಿ ಆಧ್ಯಾತ್ಮಿಕ ವಿಷಯಗಳನ್ನು ಅದ್ಭುತವಾಗಿ ವಿಮರ್ಶಿಸುತ್ತ. ಸ್ವಾಮಿ ವಿವೇಕಾನಂದರು ಮಾಡಿದ ಅನರ್ಗಳವಾದ ಉಪನ್ಯಾಸವನ್ನು ಕೇಳಿ ಪಾಶ್ಚಾತ್ಯ ಜಿಜ್ಞಾಸುಗಳು ಆಶ್ಚರ್ಯಪಟ್ಟರು.

೧೮೯೩ನೇ ವರ್ಷದಲ್ಲೇ ಇಂಗ್ಲೆಂಡಿನಲ್ಲಿ ವಿದ್ಯೆಯನ್ನು ಪೂರ್ತಿ ಮಾಡಿ ಯುವಕರಾದ ಅರವಿಂದರು ಭಾರತ ದೇಶಕ್ಕೆ ಹಿಂದಿರುಗಿ ಬಂದರು. ಉತ್ತರೋತ್ತರವಾಗಿ ಅರವಿಂದರು 'ಭಾರತ ರಾಷ್ಟ್ರೀಯ ಪ್ರವರ್ತ'ರೆನಿಸಿ ಪ್ರಖ್ಯಾತರಾದರು.






ಆ ಕಾಲಘಟ್ಟದಲ್ಲಿಯೇ ಪ್ರಮುಖ ಕಾದಂಬರೀಕಾರರೂ ಕವಿಯೂ ಆದ ಬಂಕಿಂಚಂದ್ರ ಚಟರ್ಜೀ ಸುಪ್ರಸಿದ್ಧವಾದ 'ವಂದೇಮಾತರಂ' ಗೀತವನ್ನು ರಚಿಸಿದರು. 'ವಂದೇಮಾತರಂ' ದೇಶಭಕ್ತಿಯ ಗೀತೆ. ಸ್ವಾತಂತ್ರ್ಯ ಸಮರಯೋಧರಿಗೆ ಅದು ತಾರಕ ಮಂತ್ರವಾಗಿ ಉತ್ತೇಜನಗೊಳಿಸಿತು.



# ಸ್ವಾತಂತ್ರ್ಯ ಸಮರ

ಪ್ರಾಚೀನವಾದ ಸಂಸ್ಕೃತಿ ಸಂಪ್ರದಾಯಗಳಿಗೆ ಪ್ರಸಿದ್ಧಿ ಪಡೆದ ಸುವಿಶಾಲವಾದ ಭಾರತ ದೇಶವನ್ನು ಕೆಲಮಂದಿ ವಿದೇಶೀಯರು, ಪಾಲಿಸುವುದಕ್ಕೆ ವ್ಯತಿರೇಕವಾಗಿ, ದೇಶದಲ್ಲೆಲ್ಲಾ ನವಚೈತನ್ಯವು ಎದ್ದು ವ್ಯಾಪಿಸತೊಡಗಿತು. ಇಂಗ್ಲೇಂಡಿನಲ್ಲಿ ಓದಿಕೊಳ್ಳುತ್ತಿದ್ದ ಭಾರತೀಯ ಯುವಕರು ಕೆಲವರು 'ಲೋಟಸ್ ಅಂಡ್ ದಿ ಡಾಗರ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಸ್ವತಂತ್ರಕ್ಕಾಗಿ ಕಾರ್ಯ ಮಾಡತೊಡಗಿದರು.

ಮಹಾರಾಷ್ಟ್ರದಲ್ಲಿ ಪ್ಲೇಗುವ್ಯಾಧಿ ಸಂಭವಿಸಿದಾಗ ಬ್ರಿಟಿಷ್ ಪೋಲೀಸರು ಪ್ರಜೆಗಳನ್ನು ಹಿಂಸಿಸಿ, ಅವಮಾನಿಸುವುದನ್ನು ಸಹಿಸಲಾಗದೆ ಬಾಲ ಗಂಗಾಧರ ತಿಲಕರು (೧೮೫೬-೧೯೨೦) ತೀವ್ರವಾದ ವ್ಯತಿರೇಕೋದ್ಯಮವನ್ನು ಪ್ರಾರಂಭಿಸಿದರು. ಬಹುಬೇಗದಲ್ಲೇ ಅವರು ಭಾರತೀಯರ ಗೌರವಾದರಗಳಿಗೆ ಪಾತ್ರರಾಗಿ ಬಹು ದೊಡ್ಡ ನಾಯಕರಾದರು.





೧೯೦೭ ರಲ್ಲಿ ಸೂರತ್ತಿನಲ್ಲಿ ನಡೆದ ದೇಶೀಯ ಕಾಂಗ್ರೆಸ್ ಮಹಾಸಭೆಯಲ್ಲಿ ಸಂಪೂರ್ಣ ಸ್ವಯಂ ಪರಿಪಾಲನೆಯೇ ಕಾಂಗ್ರೆಸ್ಸಿನ ಲಕ್ಷ್ಯವೆಂದು ಪ್ರಕಟಿಸಬೇಕೆಂದು ತಿಲಕರೂ, ಅರವಿಂದರೂ ಕೇಳಿಕೊಂಡರು. ಅದಕ್ಕೆ ಕೆಲವು ನಾಯಕರು ಹಿಂಜರಿದುದರಿಂದ, ಅರವಿಂದರ ಅಧ್ಯಕ್ಷತೆಯಲ್ಲಿ ಬೇರೆಯಾಗಿ ಒಂದು ಸಭೆ ನಡೆಯಿತು. ಆ ಸಭೆಯಲ್ಲಿ ತಿಲಕರು ತಮ್ಮ ತೀರ್ಮಾನವನ್ನು ಪ್ರತಿಪಾದಿಸಿದರು.



ಬೇಗದಲ್ಲೇ ಅರವಿಂದರು ಅತಿವಾದ ಪಕ್ಷಕ್ಕೆ ನಾಯಕರಾದರು. ಬ್ರಿಟಿಷ್ ವಸ್ತುಗಳನ್ನು ಬಹಿಷ್ಕರಿಸುವುದು, ಪಂಚಾಯಿತಿಗಳ ಮೂಲಕ ತಗಾದೆಗಳನ್ನು ಪರಿಷ್ಕರಿಸಿಕೊಳ್ಳುವುದು, ದೇಶೀಯ ವಿದ್ಯಾವಿಧಾನ, ಪ್ರಜೆಗಳ ಸೈನ್ಯ ಮೊದಲಾದುವುಗಳನ್ನು ಸಂಘಟಿಸಿಕೊಳ್ಳುವುದು, ಇಂತಹವುಗಳಿಗೆ ಸಂಬಂಧಿಸಿದ ನಿನಾದಗಳಿಂದ ಬ್ರಿಟಿಷ್ ಅಧಿಕಾರವನ್ನು ಅವರು ತೀವ್ರವಾಗಿ ವ್ಯತಿರೇಕಿಸಿದರು. ಬ್ರಿಟಿಷ್ ಪೋಲೀಸರು ಅತಿವಾದಿಗಳ ಮೇಲೆ ದಾಳಿ ನಡೆಸಿ ತೀವ್ರವಾಗಿ ಹಿಂಸಿಸತೊಡಗಿದರು.

೧೯೧೦ನೇ ಸಂವತ್ಸರದಲ್ಲಿ ಅರವಿಂದರು ರಾಜಕೀಯ ರಂಗವನ್ನು ಬಿಟ್ಟು, ಆಧ್ಯಾತ್ಮಿಕ ಜೀವನವನ್ನು ಗ್ರಹಿಸಿಕೊಂಡರು. ಆದರೂ ಅವರಿಂದ ಪ್ರಾರಂಭಿಸಲ್ಪಟ್ಟ ಸಿದ್ಧಾಂತಗಳು, ವಿಪ್ಲವ ಚೈತನ್ಯವು ಸ್ವಾತಂತ್ರ್ಯದ ಉದ್ಯಮವನ್ನು ಮುಂದೆ ಮುಂದೆ ನಡೆಸಿಕೊಂಡೇ ಹೋದುವು. ವಿಪ್ಲವನಾಯಕನಾದ ಬಾಘಾ ಜಾಟಿನ್ ಅವನ ಅನುಚರರು ಬಾಲಾಸೋರ್ ಹತ್ತಿರದಲ್ಲಿ ಬ್ರಿಟಿಷರೊಂದಿಗೆ ಹೋರಾಡಿ ಪ್ರಾಣ ಸಮರ್ಪಣೆ ಮಾಡಿದರು.





ಕೆನಡಾದಲ್ಲಿದ್ದ ಪಂಜಾಬಿಗಳು ಸ್ವತಂತ್ರ ಹೋರಾಟಕ್ಕಾಗಿ "ಘದರ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ೩೭೬ ಮಂದಿ ಭಾರತೀಯ ಪ್ರಯಾಣಿಕರೊಂದಿಗೆ ಕೋಮಗಟ ಮಾರೂ ಎಂಬ ನೌಕೆ, ವಾವಾಂಕ್ಯೂರ್‌ರೇವಿನೊಳಗೆ ಬರಲಿರುವಾಗ, ಅದರಲ್ಲಿ ಘದರ್‌ಪಕ್ಷದವರಿರುವರೆಂಬ ಅನುಮಾನದಲ್ಲಿ ಅದನ್ನು ಬರಲು ಬಿಡಲಿಲ್ಲ. ಕಲಕತ್ತೆಗೆ ತಿರುಗಿ ಬಂದ ನೌಕೆಯಿಂದ ಇಳಿದ ಪ್ರಯಾಣಿಕರ ಮೇಲೆ ಬ್ರಿಟಿಷ್ ಪೋಲೀಸರು ಗುಂಡು ಹಾರಿಸಿದರು.

ದಕ್ಷಿಣಾಫ್ರಿಕಾದಲ್ಲಿ ಬ್ರಿಟಿಷರ ದುರನ್ಯಾಯಗಳನ್ನು ವ್ಯತಿರೇಕಿಸಿ ಹೋರಾಡಿದ ಗಾಂಧೀಜೀ ೧೯೧೫ ನೇ ಸಂವತ್ಸರದಲ್ಲಿ ಭಾರತ ದೇಶಕ್ಕೆ ತಿರುಗಿ ಬಂದರು. ಅಹಿಂಸಾ ಮಾರ್ಗದಿಂದ ಸ್ವಾತಂತ್ರ್ಯವನ್ನು ಸಿದ್ಧಿಸಿಕೊಳ್ಳಲು ಹೋರಾಡುವ 'ಸತ್ಯಾಗ್ರಹ' ವಿಧಾನವನ್ನು ಗಾಂಧೀಜೀ ಪ್ರವೇಶಗೊಳಿಸಿದರು. ಬಿಹಾರಿನ ಚಂಪಾರಣ್ ರೈತ ಕೂಲಿಗಳನ್ನು ಸಮೈಕ್ಯಪಡಿಸಿ ಅಲ್ಲಿಯ ಬ್ರಿಟಿಷ್ ನೀಲಿವರ್ತಕರ ದುಷ್ಟತನವನ್ನು ವ್ಯತಿರೇಕಿಸಿದರು.





ಸ್ವಾತಂತ್ರ್ಯ ಉದ್ಯಮದ ನಾಯಕರು ಕೆಲವರನ್ನು ಖೈದಿನಲ್ಲಿರಿಸಿದುದಕ್ಕೆ ಶಾಂತಿಯುತವಾಗಿ ಆಕ್ಷೇಪಣೆ ತಿಳಿಸಬೇಕೆಂದು ೧೯೧೯ ನೇ ವರ್ಷ ಏಪ್ರಿಲ್ ೧೩ ರಂದು ಅಮೃತಸರದ ಸಮೀಪವಿದ್ದ ಜಲಿಯನ್‌ವಾಲಾಬಾಗ್‌ನ ಹತ್ತಿರ ಸಾವಿರಾರು ಮಂದಿ ಕೂಡಿದರು. ಅಲ್ಲಿ ಸ್ತ್ರೀಯರೂ ಮಕ್ಕಳೂ ಸಹ ಅನೇಕರು ಸೇರಿದ್ದರು. ಆಗ ಜನರಲ್ ಡಯ್ಯಾರ್ ಎಂಬ ಬ್ರಿಟಿಷ್ ಸೈನ್ಯಾಧಿಕಾರಿಯ ಪರಿಪಾಲನೆಯಲ್ಲಿ ಅಮೃತಸರ್ ಇದ್ದಿತು.

ಅಲ್ಲಿ ಸೇರಿದವರಿಗೆ ಮೊದಲು ಸಭೆ ನಡೆಸಲು ಯಾವ ಅಭ್ಯಂತರವನ್ನೂ ಹೇಳಲಿಲ್ಲ. ಜನರಲ್ ಡಯ್ಯರ್ ಆಯುಧಪಾಣಿಗಳಾದ ತೊಂಬತ್ತು ಮಂದಿ ಸೈನಿಕರೊಂದಿಗೆ ಥಕ್ಕನೆ ಅಲ್ಲಿಗೆ ಬಂದನು. ಎಂತಹ ಮುನ್ನೆಚ್ಚರಿಕೆಯೂ ಇಲ್ಲದೆ ಗುಂಡುಗಳನ್ನು ಹಾರಿಸಿದನು. ಅದರಿಂದ ೩೭೯ ಮಂದಿ ಸತ್ತರೆಂದೂ ೧೨೦೮ ಮಂದಿ ಗಾಯಗೊಂಡರೆಂದೂ ಅಧಿಕಾರವರ್ಗದ ವಾರ್ತೆಗಳು ತಿಳಿಯಪಡಿಸಿದುವು.





ಜಲಿಯನ್‌ವಾಲಾಬಾಗ್ ಹಿಂಸಾಕಾಂಡ ನಡೆದ ಸ್ಥಳದಲ್ಲಿ ಪ್ರಸ್ತುತ ತ್ಯಾಗಿಗಳ ಸ್ಮಾರಕ ಚಿಹ್ನೆ ಇದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಎಲ್ಲಾ ಮತಗಳ, ಎಲ್ಲಾ ಪ್ರಾಂತಗಳ ಸಾವಿರಾರು ವೀರರ ಮಹಾತ್ಯಾಗಗಳಿಗೆ ನಾವು ತೋರಿಸುವ ಗೌರವ ಮರ್ಯಾದೆಗಳ ಚಿಹ್ನೆಯಾಗಿ ಅದು ಬೆಳಗಿಕೊಂಡಿದೆ.

ತೀವ್ರವಾದಿಗಳಾದ ಸ್ವಾತಂತ್ರ್ಯ ಯೋಧರು ಅನೇಕ ಮಂದಿ ಆ ದಿನಗಳಲ್ಲಿ, ಅನಾರೋಗ್ಯಕರವಾದ ವಾತಾವರಣಕ್ಕೆ ಹೆಸರು ಹೋದ ಅಂಡಮಾನ್ ದ್ವೀಪಗಳಿಗೆ ಕಳುಹಿಸಲ್ಪಟ್ಟರು. ಅಲ್ಲಿ ಅವರು ಅನೇಕ ವ್ಯಾಧಿಗಳಿಗೆ ಗುರಿಯಾಗಿ ಪ್ರಾಣ ಕಳೆದುಕೊಂಡರು.





ಗಾಂಧೀಜೀ ಸ್ವಾತಂತ್ರ್ಯೋದ್ಯಮಕ್ಕೆ ನಾಯಕರಾಗಿ ಬಂದುದರಿಂದ ಹೋರಾಟಕ್ಕೆ ಹೊಸ ತಿರುವು ಬಂದಿತು. ಉಪ್ಪನ್ನು ತಯಾರಿಸುವ ಬಡವರ ಮೇಲೆ ಕೂಡಾ ಬ್ರಿಟಿಷ್ ಪ್ರಭುತ್ವವು ತೆರಿಗೆ ವಿಧಿಸಿತ್ತು. ಗಾಂಧೀಜೀಯ ಆದೇಶದಂತೆ ಪ್ರಜೆಗಳು ಉಪ್ಪಿನ ತೆರಿಗೆಯನ್ನು ವ್ಯತಿರೇಕಿಸಿ ಹಲವು ಕಡೆಗಳಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ' ಖೈದಿಗಳಾಗಿ ನಾನಾ ಹಿಂಸೆಗಳಿಗೆ ಗುರಿಯಾದರು'




# ಸ್ವಾತಂತ್ರ್ಯಸಿದ್ಧಿ

೧೯೩೯ ನೇ ಸಂವತ್ಸರದಲ್ಲಿ ಪಶ್ಚಿಮ ದೇಶಗಳಲ್ಲಿ ಪ್ರಾರಂಭವಾದ ಯುದ್ಧವು ಕ್ರಮವಾಗಿ ಪೂರ್ವ ದೇಶಗಳಿಗೆ ವ್ಯಾಪಿಸತೊಡಗಿತು. ಅಜೇಯವಾದ ದೇಶವೆಂದು ಹೆಸರು ಪಡೆದ ಇಂಗ್ಲಾಂಡು, ಹಠಾತ್ತಾಗಿ ಬಲೀಯವಾಗಿ ಹೋದ ಶತ್ರುದೇಶ ಜರ್ಮನಿಯನ್ನು ಇದಿರಿಸಬೇಕಾಯಿತು. ವಿಮಾನಗಳಿಂದ ಬಾಂಬು ತೂರುವುದು ಸುಲಭವಾದುದರಿಂದ ಯುದ್ಧಗಳು ಹೆಚ್ಚು ಭೀಕರವಾಗಿ ಮಾರ್ಪಟ್ಟವು.

ಜರ್ಮನಿಯ ನಿಯಂತ್ರಕಾರ ಹಿಟ್ಲರ್ ಕಂಡು ಕೇಳಿ ಅರಿಯದ ಹಿಂಸಾಕಾಂಡಕ್ಕೆ, ಕ್ರೂರಕೃತ್ಯಗಳಿಗೆ ಕೈಹಾಕಲಾರಂಭಿಸಿದನು. ಅವನು ಸ್ಟಾಲಿನ್ ಆಧಿಪತ್ಯದಲ್ಲಿದ್ದ ರಷ್ಯಾದೊಂದಿಗೆ ಮೊದಲು ಮೈತ್ರಿಯಾಗಿದ್ದು, ಹಠಾತ್ತಾಗಿ ತಿರುಗಿ ಬಿದ್ದನು. ಹಿಟ್ಲರ್ ಯೂಧರನ್ನು ತೀವ್ರವಾಗಿ ದ್ವೇಷಿಸಿದನು. ತನ್ನ ದೇಶದಲ್ಲಿಯೂ, ತಾನು ವಶಪಡಿಸಿಕೊಂಡ ದೇಶಗಳಲ್ಲಿಯೂ ಇದ್ದ ಲಕ್ಷಗಟ್ಟಲೆಯ ಯೂಧರನ್ನು ಅವನು ಹತಮಾಡಿಸಿ ಹಾಕಿದನು.





ಏಷ್ಯಾ ಖಂಡದೊಳಗಿನ ಜಪಾನು ಹಿಟ್ಲರ್‌ನೊಂದಿಗೆ ಕೈಸೇರಿಸಿಕೊಂಡಿತು. ಜಪಾನ್ ಚಕ್ರವರ್ತಿ ಹಿರೋಹಿಟೋ ಶಾಂತಿಕಾಮಿಯೇ ಆದರೂ, ರಾಜಕೀಯ ನಾಯಕರೂ ಸೈನ್ಯಾಧಿಪತಿಗಳೂ ದುರಾಶಾಪರರು. ಮುಸೋಲಿನಿಯ ನಿಯಂತ್ರಣದಲ್ಲಿರುವ ಇಟಲೀ ಕೂಡಾ ಜರ್ಮನ್, ಜಪಾನ್ ದೇಶಗಳೊಂದಿಗೆ ಜತೆ ಸೇರಿಕೊಂಡಿತು.



ದುರಾಕ್ರಮಣದಾರರಿಗೆ ವ್ಯತಿರೇಕವಾಗಿ ಬ್ರಿಟನ್ ಮೊದಲಾದ ದೇಶಗಳೊಂದಿಗೆ ಅಮೆರಿಕಾ ಸೇರಿದುದರಿಂದ, ಯುದ್ಧವು ದ್ವಿತೀಯ ಪ್ರಪಂಚ ಸಂಗ್ರಾಮವೆಂದು ಪ್ರಸಿದ್ಧವಾಯಿತು. ಭಾರತ ದೇಶಕ್ಕೆ ಸ್ವಾತಂತ್ರ್ಯವನ್ನು ಕೊಡುವೆವೆಂದು ಮಾತು ಕೊಟ್ಟರೆ, ತಾವು ಬ್ರಿಟನ್ನಿನೊಂದಿಗೆ ಸಹಕರಿಸುವುದಾಗಿ ಗಾಂಧೀಜಿ ತಿಳಿಯಪಡಿಸಿದರು. ಆದರೆ ಎಂತಹ ಭರವಸೆಯೂ ಬರಲಿಲ್ಲ. ಬ್ರಿಟಿಷ ರನ್ನು ದೇಶಬಿಟ್ಟು ಹೋಗುವಂತೆ "ಕ್ವಿಟ್ ಇಂಡಿಯಾ" ಚಳವಳಿ ೧೯೪೨ ನೇ ಸಂವತ್ಸರದಲ್ಲಿ ಪ್ರಾರಂಭವಾಯಿತು. ಸ್ವಾತಂತ್ರ್ಯ ವೀರರನ್ನು ಬ್ರಿಟಿಷ್ ಪ್ರಭುತ್ವವು ಸೆರೆ ಹಿಡಿದು ಹಿಂಸಿಸ ತೊಡಗಿತು.

ಅದೇ ಸಮಯದಲ್ಲಿ ಬ್ರಿಟಿಷ್ ಪರಿಪಾಲನೆಯ ಲ್ಲಿದ್ದ ಮಲಯ, ಸಿಂಗಪೂರ್‌ಗಳ ಮೇಲೆ ಜಪಾನ್ ದಾಳಿ ಮಾಡಿತು. ಬ್ರಿಟಿಷರ ಕೋಟೆಯಾಗಿ ಪರಿಗಣಿಸಲ್ಪಟ್ಟ ಸಿಂಗಪೂರ್ ಪತನವು ಎಲ್ಲ ರನ್ನೂ ಆಶ್ಚರ್ಯಪಡಿಸಿತು. ಜರ್ಮನೀ ಜಪಾನ್ ಸೇರಿಕೊಂಡ (ಯಾಕ್ಸಿಸ್) ದೇಶಗಳ ಕೈಯಲ್ಲಿ ಬ್ರಿಟನ್ ಅಮೆರಿಕಾ ಮಿತ್ರದೇಶಗಳು ಸೋತು ಹೋಗುವಂತಹ ಸಮಯವು ಆಸನ್ನವಾಯಿತು.





ಬ್ರಿಟಿಷರಿಂದ ಖೈದು ಮಾಡಲ್ಪಟ್ಟ ಭಾರತ ನೇತಾರ ಸುಭಾಷಚಂದ್ರಬೋಸ್, ತಪ್ಪಿಸಿ ಕೊಂಡು ಕಾಬೂಲಿಗೆ ಹೋಗಿ ಅಲ್ಲಿಂದ ೧೯೪೩ ನೇ ಸಂವತ್ಸರದಲ್ಲಿ ಸಿಂಗಪೂರನ್ನು ತಲುಪಿದರು. ಸೋತು ಹೋದ ಬ್ರಿಟಿಷ್ ಸೈನ್ಯ ದೊಳಗಿನ ಭಾರತೀಯ ಸೈನಿಕರನ್ನು ಒಂದು ಗೂಡಿಸಿ ಭಾರತ ರಾಷ್ಟ್ರೀಯ ಸೈನ್ಯದ ಹೆಸರಿನಲ್ಲಿ ಸ್ವಾತಂತ್ರ್ಯ ವೀರರಿಗೆ ಶಿಕ್ಷಣ ಕೊಡತೊಡಗಿದರು. ಜರ್ಮನೀ, ಜಪಾನ್ ಸೇರಿಕೆಯ ದೇಶಗಳ ಸಹಾಯದಿಂದ, ಆಂಗ್ಲೇಯರನ್ನು ಓಡಿಸುವುದು ಅವರ ಪಥಕವಾಗಿತ್ತು.

ಭಾರತೀಯ ರಾಷ್ಟ್ರೀಯ ಸೇನೆಗಳು ಅನೇಕ ಅಡ್ಡಿ ಆತಂಕಗಳನ್ನು ದಾಟಿ ಭಾರತ ದೇಶದ ಕಡೆಗೆ ಪ್ರಯಾಣಿಸುತ್ತ ಮಣಿಪೂರ್‌ನಲ್ಲಿಯ ಕೋಹಿಮಾನ್ ಎಂಬಲ್ಲಿಗೆ ಬಂದು ಸೇರಿದುವು. ಆಮೇಲೆ ಸಾಕಷ್ಟು ಆಯುಧಗಳಿಲ್ಲದ್ದರಿಂದ, ಅಲ್ಲಿಂದ ಮುಂದೆ ಸಾಗಲಾಗಲಿಲ್ಲ. ಜಪಾನು ಕೂಡಾ ವಿಜಯದ ಅವಕಾಶವನ್ನು ಕಳೆದು ಕೊಂಡಿತು. ೧೯೪೫ ನೇ ಸಂವತ್ಸರದ ಆಗಸ್ಟ್‌ನಲ್ಲಿ ಸುಭಾಷ್ ಚಂದ್ರ ಬೋಸ್ ರಹಸ್ಯದಲ್ಲೇ ಮರೆಯಾದರು.





ಆ ಸಮಯದಲ್ಲಿಯೇ ಮುಸ್ಲಿಂಲೀಗ್ ನಾಯಕ ಮಹಮ್ಮದಾಲಿ ಜಿನ್ನಾ ಮಹ್ಮದೀಯರಿಗೆ ಪಾಕಿಸ್ತಾನ್ ಹೆಸರಿನಲ್ಲಿ ಪ್ರತ್ಯೇಕ ಪ್ರಾಂತ ಬೇಕೆಂದರು. ಅವರ ಕೋರಿಕೆ ಒಳ್ಳೆಯದಲ್ಲವೆಂದು ತಿಳಿಹೇಳಲು, ಎಷ್ಟೋ ಮಂದಿ ದೇಶ ನಾಯಕರು ಪ್ರಯತ್ನಿಸಿದರು. ಆದರೂ ಬ್ರಿಟಿಷರು ಪರೋಕ್ಷವಾಗಿ ನೀಡುತ್ತಿದ್ದ ಪ್ರೋದ್ಬಲದಿಂದ ಜಿನ್ನಾ ತನ್ನ ಹಟವನ್ನು ಬಿಡಲಿಲ್ಲ.

ಎಷ್ಟೋ ಕಾಲದಿಂದ ಸೋದರಭಾವದಲ್ಲಿ ಸ್ನೇಹವಾಗಿ ನಡೆದುಕೊಂಡಿದ್ದ ಹಿಂದು ಮುಸ್ಲಿಂ ಪ್ರಜೆಗಳ ಹೃದಯಗಳಲ್ಲಿ ಪಾಕಿಸ್ತಾನ್ ಏರ್ಪಾಟಿನ ವಾದವು ವಿಷಬೀಜ ಬಿತ್ತಿತು. ತಮ್ಮ ಕೋರಿಕೆಯನ್ನು ಒತ್ತಿ ಹೇಳಬೇಕೆಂಬ ಉದ್ದೇಶದಿಂದ ಮುಸ್ಲಿಂಲೀಗ್ ೧೯೪೬ ನೇ ಸಂವತ್ಸರ ಆಗಸ್ಟ್ ೧೬ ನೇ ದಿನ ಪ್ರತ್ಯೇಕ ಚರ್ಯೆಯನ್ನು ಪ್ರಕಟಿಸಿತು. ಕಲಕತ್ತಾ, ಢಿಲ್ಲೀ ಮೊದಲಾದ ಹಲವು ಪ್ರಾಂತಗಳಲ್ಲಿ ಮತ ಕಲಹಗಳಿಂದ ತೀವ್ರ ರಕ್ತಪಾತ ನಡೆಯಿತು. ಸಾವಿರಾರು. ಪಾಪದ ಪ್ರಜೆಗಳು ಪ್ರಾಣಗಳನ್ನು ಕಳೆದುಕೊಂಡರು.






ಸ್ವಾತಂತ್ರ್ಯೋದ್ಯಮದ ನಾಯಕರೂ ದೊಡ್ಡ ರಾಜಕೀಯವೇತ್ತರೂ ಆದ ಜವಹರ್‌ಲಾಲ್ ನೆಹ್ರೂ ೧೯೪೬ ನೇ ಸಂವತ್ಸರದಲ್ಲಿ ಏರ್ಪಟ್ಟ ತಾತ್ಕಾಲಿಕ ಪ್ರಭುತ್ವಕ್ಕೆ ನಾಯಕತ್ವ ವಹಿಸಿಕೊಂಡರು. ವಿಭಜನೆಯ ವಾದವನ್ನು ಬಿಟ್ಟುಕೊಟ್ಟು, ಪ್ರಭುತ್ವದಲ್ಲಿ ಭಾಗವಹಿಸಿಕೊಳ್ಳುವಂತೆ ಮುಸ್ಲಿಂ ಲೀಗನ್ನು ಒಪ್ಪಿಸಲು ನೆಹ್ರೂ ಬಹಳ ಪ್ರಯತ್ನಪಟ್ಟರು. ಆದರೂ ಮುಸ್ಲಿಂ ಲೀಗ್ ಅಂಗೀಕರಿಸಲಿಲ್ಲ. ಸ್ವಾತಂತ್ರ್ಯಕ್ಕಾಗಿ ದೊಡ್ಡ ತ್ಯಾಗವನ್ನು ಮಾಡಲು ಭಾರತ ದೇಶವು ಸಿದ್ಧವಾಗತೊಡಗಿತು.

ಪ್ರಪಂಚ ಯುದ್ಧದಲ್ಲಿ ದೊಡ್ಡ ಸೇನಾನಾಯಕನಾಗಿ ಪ್ರಸಿದ್ಧಿ ಪಡೆದ ಮೌಂಟ್‌ಬಾಟನ್ ಪ್ರಭು ೧೯೪೭ ನೇ ಸಂವತ್ಸರದಲ್ಲಿ ಭಾರತ ದೇಶಕ್ಕೆ ಗವರ್ನರ್ ಜನರಲ್ ಆದರು. ಅವರೊಂದಿಗೆ ಚರ್ಚೆ ನಡೆಸಿದ ಮೇಲೆ ಭಾರತ ವಿಭಜನೆಗೆ ಭಾರತ ರಾಷ್ಟ್ರೀಯ ಕಾಂಗ್ರೆಸ್ ಒಪ್ಪಿಕೊಳ್ಳುವುದಾಗಿ ನೆಹ್ರೂ ೧೯೪೭ ನೇ ಸಂವತ್ಸರ ಜೂನ್ ೩ ನೇ ದಿನದಂದು ಪ್ರಕಟಿಸಿದರು. ಆಗಸ್ಟ್ ೧೫ ರಂದು ದೇಶಕ್ಕೆ ಸ್ವಾತಂತ್ರ್ಯವು ಬಂದಿತು.





ಭಾರತ ವಿಭಜನೆಯ ಪರ್ಯವಸಾನವಾಗಿ ಮತಕಲಹಗಳು, ಯುದ್ಧಗಳು, ನಿರಾಶ್ರಿತರು ಮೊದಲಾದ ಸಮಸ್ಯೆಗಳು ತಲೆ ಎತ್ತಿದುವು. ಆದರೂ ಭಾರತೀಯರೆಲ್ಲರೂ ಐಕಮತ್ಯವೇ ತಮ್ಮ ಬಲವೆಂದು ಮನಗಂಡು ಅವರೋಧಗಳೆಲ್ಲವನ್ನೂ ಅಧಿಗಮಿಸುತ್ತ, ಹಿಂದೆ ಎಷ್ಟೋ ಶಕ್ತಿಶಾಲಿಯಾಗಿದ್ದ ದೇಶದ, ಒಳ್ಳೆಯ ತನದ ಉಜ್ವಲ ಭವಿಷ್ಯತ್ತಿಗಾಗಿ ಒಟ್ಟು ಕೂಡಿ ಮುಂದಕ್ಕೆ ಸಾಗುತ್ತಿದ್ದಾರೆ.



ನಮ್ಮ ನದಿಗಳು :

## ನರ್ಮದಾ

ನರ್ಮದಾ ನದಿಯ ಜನ್ಮಕ್ಕೆ ಸಂಬಂಧಿಸಿದ ಕಥೆ ಪುರಾಣದಲ್ಲಿದೆ. ಮೈಕಾಲ್ ಪರ್ವತ ಪ್ರಾಂತವು ಅದ್ಭುತವಾದ ಪ್ರಕೃತಿ ಸೌಂದರ್ಯಕ್ಕೆ ತೌರು ಮನೆಯಾಗಿದೆ. ಅದರ ಪರಿಸರಗಳಲ್ಲಿ ಮಾನವ ಸಂಚಾರವಿರಲಿಲ್ಲ. ದೇವತೆಗಳೂ ಯಕ್ಷರೂ ಆಗಾಗ ಅಲ್ಲಿಗೆ ಬರುತ್ತಿದ್ದರು. ಅಲ್ಲಿ ಪ್ರಕೃತಿದೇವಿ ಪ್ರತಿ ಋತುಗಳಲ್ಲಿ ನವನೂತನ ಸೌಂದರ್ಯದಿಂದ ರಾರಾಜಿಸುವಳು.

ಒಂದು ಸಾರಿ ಪರಮಶಿವನು ಆ ಬೆಟ್ಟದ ಮೇಲಕ್ಕೆ ಬಂದನು. ಅಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಮುಗ್ಧನಾಗಿ ಅಲ್ಲಿಯೇ ಕುಳಿತು ಧ್ಯಾನಮಗ್ನನಾದನು. ಅನೇಕ ಸಂವತ್ಸರಗಳು ಕಳೆದರೂ ಶಿವನು ಕದಲಲಿಲ್ಲ. ಶಿವನ ದಿವ್ಯ ಸುಂದರ ರೂಪವನ್ನು ನೋಡಿ ಪ್ರಕೃತಿಯೂ ಪರವಶಳಾದಳು.





ಪರಮಶಿವನ ಮುಖದಿಂದ ಹೊರಟ ಅದ್ಭುತವಾದ ದಿವ್ಯ ತೇಜಸ್ಸು ದಿವ್ಯ ಸುಂದರಿಯಾದ ಕನ್ಯಕಾ ರೂಪವನ್ನು ತಾಳಿತು. ಆ ಕನ್ಯೆ ಶಿವನಿಗೆ ನಮಸ್ಕಾರ ಮಾಡಿ, "ತಂದೆಯೇ. ನಾನು ಯಾವಾಗಲೂ ಸ್ವೇಚ್ಛೆಯಾಗಿ ಆನಂದವಾಗಿ ಇರುವ ಹಾಗೆ ವರವನ್ನು ಕೊಡು !" ಎಂದು ಪ್ರಾರ್ಥಿಸಿದಳು.



"ಹಾಗೆಯೇ ಆಗಲಿ !" ಎಂದು ಪರಮಶಿವನು ಅವಳಿಗೆ ವರವನ್ನು ಕೊಟ್ಟು "ನರ್ಮದಾ" (ಮೃದುಹೃದಯಿ) ಎಂದು ನಾಮಕರಣವನ್ನೂ ಮಾಡಿದನು. ಆಗಿನಿಂದ ಅವಳು ಬಗೆಬಗೆಯ ಪುಷ್ಪ ವನಗಳಿಂದ ತುಂಬಿದ ಗಿರಿವನಗಳಲ್ಲಿ ವನದೇವತೆಯಾಗಿ ಮಲಯ ಮಾರುತದಂತೆ ವಿಹರಿಸಿಕೊಂಡಿದ್ದಳು.

ಜಿಂಕೆ, ನವಿಲು ಮೊದಲಾದ ವನ್ಯ ಪ್ರಾಣಿಗಳು ಅವಳ ಸ್ನೇಹಿತವಾದುವು. ಅವುಗಳೊಂದಿಗೆ ಅವಳು ಕೂಡಿಯಾಡಿ ಆನಂದವಾಗಿ ಕಾಲಕಳೆಯುತ್ತಿದ್ದಳು. ಮೊದಲೇ ಅಂದವಾದ ಆ ಪರ್ವತ ಪ್ರಾಂತಗಳಿಗೆ ಅವಳ ಆಟಪಾಟಗಳು ಇನ್ನಷ್ಟು ಶೋಭೆಯನ್ನು ಹೆಚ್ಚಿಸಿದುವು.





ಅಲ್ಲಿಗೆ ಬಂದ ದೇವತೆಗಳು ನರ್ಮದೆಯನ್ನು ನೋಡಿ, ಅವಳ ಅಂದಚಂದಗಳನ್ನು ನೋಡಿ ಆಶ್ಚರ್ಯದಿಂದ ಮುಗ್ಧರಾದರು. ಅವಳು ವನ್ಯ ಮೃಗಗಳೊಂದಿಗೆ ಆಡಿಕೊಳ್ಳುತ್ತಿರುವಾಗ ಅವಳನ್ನು ಗುಡ್ಡಗಳ ಮರೆಯಲ್ಲಿ ಗಮನಿಸ ತೊಡಗಿದರು. ಅವಳು ಎಲ್ಲಿಗೆ ಹೋದರೂ ದೇವತೆಗಳು ಮರೆಯಲ್ಲಿ ಅವಳನ್ನು ಅನುಸರಿಸಿಕೊಂಡೇ ಇದ್ದರು.

ಸ್ವಲ್ಪ ಕಾಲ ಕಳೆದಮೇಲೆ ದೇವತೆಗಳು ಅವಳಿಂದ ದೂರವಿರಲಾಗದೆ, ಮಾತಾಡಿಸಿ ಸ್ನೇಹ ಮಾಡಿಕೊಳ್ಳಬೇಕೆಂದುಕೊಂಡರು. ಅವಳಿಂದ ಆಕರ್ಷಿಸಲ್ಪಟ್ಟು ಸಮೀಪಿಸಿದರು. ಆದರೆ ಅವರಲ್ಲಿ ಯಾರೊಂದಿಗೂ ಮಾತಾಡಲು ನರ್ಮದೆಗೆ ಇಷ್ಟವಿರಲಿಲ್ಲ. ಅವರಲ್ಲೊಬ್ಬನನ್ನು ಮದುವೆಯಾಗಲಿಕ್ಕೂ ಮನಸ್ಸಿರಲಿಲ್ಲ. ಸ್ವೇಚ್ಛೆಯೇ ಅವಳಿಗೆ ಇಷ್ಟವಾಗಿದ್ದಿತು.





ದೇವತೆಗಳು ಬಿಡದೆ ಅವಳನ್ನು ಬೆನ್ನಟ್ಟಿಕೊಂಡೇ ಇದ್ದರು. ಅವಳು ಮಿಂಚಿನಂತೆ ಅವರನ್ನು ತಪ್ಪಿಸಿಕೊಳ್ಳುತ್ತಲೇ ಹೋದಳು. ಪರ್ವತಗಳಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋದರೂ ದೇವತೆಗಳು ಹಿಂದೆಯೇ ಇದ್ದರು. ಅವಳು ಅವರಿಗೆ ಸಿಗದಂತೆ ಸಾಗುತ್ತಲೇ ಇದ್ದಳು.

ಹೀಗೆ ಸ್ವಲ್ಪ ಕಾಲ ನಡೆದ ಮೇಲೆ ನರ್ಮದಾ ಪರ್ವತಶಿಖರದ ಮೇಲೆ ಹತ್ತಿದಳು. ಇನ್ನು ಅಲ್ಲಿಂದ ತಪ್ಪಿಸಿಕೊಳ್ಳಲಾರಳೆಂದು ಭಾವಿಸಿದ ದೇವತೆಗಳು, ಬಹಳ ಉತ್ಸಾಹದಿಂದ ಮೇಲೆ ಹೋದರು. ನರ್ಮದೆ ಅವರ ಕಡೆಗೆ ಒಂದು ಸಾರಿ ನೋಡಿ, ಆಮೇಲೆ ಬೆಟ್ಟದ ಆಚೆಯ ಬದಿಯನ್ನೂ ನೋಡಿದಳು. ಕ್ಷಣಕಾಲ ಹಾಗೆಯೇ ನಿಂತಿದ್ದಳು.





ಅಕಸ್ಮಾತ್ತಾಗಿ ಅವಳು ನೀರಾಗಿ ಮಾರ್ಪಟ್ಟು ನೆಲದೊಳಗೆ ಇಂಗಿ ಬೆಟ್ಟದ ಆಚೆಯಬದಿಯಿಂದ ಪ್ರವಾಹವಾಗಿ ಸಾಗತೊಡಗಿದಳು. ದೇವತೆಗಳು ಏನೂ ತೋರದೆ ಹಾಗೆಯೇ ನಿಂತು ನೋಡುತ್ತಿದ್ದರು. ಅವಳು ನರ್ಮದಾ ನದಿಯಾಗಿ ಮಾರ್ಪಟ್ಟು ಬೆಟ್ಟಗಳನ್ನೂ ಕಣಿವೆಗಳನ್ನೂ ದಾಟಿ ಮೈದಾನ ಭೂಮಿಯಲ್ಲಿ ಪ್ರವಹಿಸಿ, ಬ್ರೋಚ್ ಎಂಬಲ್ಲಿಯ ಹತ್ತಿರ ಸಮುದ್ರವನ್ನು ಕೂಡಿದಳು.

ಪ್ರಾಚೀನ ಕಾಲದಿಂದಲೂ ನರ್ಮದಾ ನದಿ ಅತಿ ಪವಿತ್ರವಾಗಿ ಭಾವಿಸಲ್ಪಡುತ್ತಿತ್ತು. ಆ ನದಿಯ ತೀರದಲ್ಲಿ ಋಷಿಗಳು ತಪಸ್ಸು ಮಾಡಿದರು. ಭಕ್ತರು ಆ ನದಿಯನ್ನು ಪರಿಕ್ರಮಣ ಮಾಡುವರು. ಅಂದರೆ, ನರ್ಮದಾ ನದಿ ಉದ್ಭವಿಸುವ ಅಮರ್‌ಕಂಟಕ್ಕಿನಿಂದ ತೀರದಲ್ಲಿಯೇ ಬ್ರೋಚ್ ವರೆಗೆ ಯಾತ್ರೆ ಮಾಡಿ, ಅಲ್ಲಿ ನದಿಯನ್ನು ದಾಟಿ, ಮತ್ತೊಂದು ತೀರದ ದಾರಿಯಾಗಿ ಅಮರ್ ಕಂಟಕ್ಕಿಗೆ ಹಿಂದಿರುಗುವುದು.





ಅಮರ್‌ಕಂಟಕ್ಕಿನ ಹತ್ತಿರ ನರ್ಮದಾ ಮಾತೆಯ ಆಲಯವಿದೆ. ಸಾವಿರಾರು ಮಂದಿ ಭಕ್ತರು ಆಲಯವನ್ನು ದರ್ಶಿಸುತ್ತಿರುತ್ತಾರೆ. ಆದುದರಿಂದ ಅದು ದೊಡ್ಡ ಯಾತ್ರಾ ಸ್ಥಳವಾಗಿ ಬೆಳಗಿಕೊಂಡಿರುತ್ತದೆ.




ನಮ್ಮ ನದಿಗಳು :

# ಯಮುನೆ

ಮಹಾಕವಿ ಕಾಳಿದಾಸನು 'ದೇವತಾತ್ಮ' ನೆಂದೂ, 'ಪರ್ವತರಾಜ'ನೆಂದೂ ಅಭಿವರ್ಣಿಸಿದ ಹಿಮಾಲಯ ಪರ್ವತ ಶಿಖರಗಳಿಂದಲೇ ಅನೇಕವಾದ ನಮ್ಮ ಜೀವ ನದಿಗಳು ಹುಟ್ಟಿ ಪ್ರವಹಿಸುತ್ತವೆ. ನಮ್ಮ ಪೂರ್ವಜರು ನದಿಗಳನ್ನು ಕೇವಲ ಪ್ರಕೃತಿ ಸಹಜವೆಂದು ಭಾವಿಸಿಲ್ಲ. ನದಿಗಳಲ್ಲಿ ಸಜೀವ ಆತ್ಮಗಳನ್ನು ಸಂದರ್ಶಿಸಿದ್ದಾರೆ.

ಉದಾಹರಣೆಗೆ ಯಮುನಾನದಿಯನ್ನು ನಮ್ಮ ಪುರಾಣಗಳು, ಸೂರ್ಯನಿಗೂ ಸಂಧ್ಯಾದೇವಿಗೂ ಜನ್ಮಿಸಿದ ಕುಮಾರಿಯಾಗಿ ಹೇಳುತ್ತವೆ. ಯಮನು ಅವಳ ಸಹೋದರನೆನ್ನುವುದರಿಂದ ಅವಳಿಗೂ ಅದೇ ಹೆಸರು ಬಂದಿತು. ಭೂತಲದ ಮೇಲೆ ಸೃಷ್ಟಿಯಲ್ಲಿ ಭಾಗ ಹಂಚಿಕೊಳ್ಳಬೇಕೆಂಬ ಉತ್ಸಾಹದಲ್ಲಿ ಅವಳು ಕರಗಿ ನದೀ ರೂಪವನ್ನು ತಾಳಿದಳಂತೆ !





ಕಾಳಿಂದ ಪರ್ವತದ ಪದತಲದಲ್ಲಿ ಹಿಮಾಲಯಗಳ ಮೇಲೆ ಯಮುನೋತ್ರಿಯ ಬಳಿಯಲ್ಲಿ ಯಮುನೆ ನಮಗೆ ದರ್ಶನ ಕೊಡುತ್ತಾಳೆ. ಸಮುದ್ರಮಟ್ಟಕ್ಕೆ ಹತ್ತು ಸಾವಿರದ ಎಂಟು ನೂರು ಅಡಿ ಎತ್ತರದಲ್ಲಿರುವ ಯಮುನೋತ್ರಿ ಅದ್ಭುತವಾದ ಪ್ರದೇಶವಾಗಿದೆ. ಆ ಪವಿತ್ರವಾದ ಪ್ರದೇಶದಲ್ಲಿ ಯಮುನಾದೇವಿಯ ಆಲಯವೂ ಇದೆ.




ಪ್ರಾರಂಭದಲ್ಲಿ ಯಮುನೆಯ ಪ್ರವಾಹವು ಸುಳಿಗುಂಡಿಗಳಿಂದ ಮಹಾ ಅದ್ಭುತವಾಗಿರುತ್ತದೆ. ಅದನ್ನು ಸಮೀಪಿಸಲು ಯಾವ ಪ್ರಾಣಿಗೂ ಸಾಹಸಬಾರದು. ಜಲಪಾತಧ್ವನಿ ಸಾವಿರ ಸಿಂಹಗಳ ಗರ್ಜನೆಯ ಹಾಗೆ ಭಯವನ್ನು ಹುಟ್ಟಿಸುವಂತಹುದು. ಜಲಪಾತದಿಂದ ಬೀಳುವ ನೀರಿನ ತುಂತುರುಗಳು ಹೊಗೆಗಳ ಮೋಡಗಳಾಗಿ ನೋಡುವವರಿಗೆ ಆಶ್ಚರ್ಯವನ್ನುಂಟು ಮಾಡುತ್ತದೆ.

ಒಂದು ದಿನ ಕೃಷ್ಣನ ಸಹೋದರನಾದ ಬಲರಾಮನು ಬೆಟ್ಟಗಳ ಮೇಲೆ ತಿರುಗುತ್ತ, ಯಮುನಾ ನದಿಯ ಜಲಪಾತವನ್ನು ನೋಡಿ, ಅದರಲ್ಲಿ ಸ್ನಾನಮಾಡಬೇಕೆಂದುಕೊಂಡನು. ಜಲಪಾತದ ಬಳಿಯಲ್ಲಿದ್ದ ದೊಡ್ಡದೊಂದು ಬಂಡೆಯ ಮೇಲೆ ನಿಂತು ನದಿಯನ್ನು ತನ್ನ ಹತ್ತಿರ ಬರುವಂತೆ ಕರೆದನು.





ಬಲರಾಮನ ಕರೆಯನ್ನು ಯಮುನೆ ಸ್ವಲ್ಪವೂ ಲಕ್ಷಿಸಲಿಲ್ಲ. ಅವನು ಮತ್ತೆ ಮತ್ತೆ ಬರುವಂತೆ ಆಜ್ಞೆ ಮಾಡಿದನು. ಆದರೂ ಪ್ರಯೋಜನವಿಲ್ಲದೆ ಹೋಯಿತು. ಕೂಡಲೇ ಅವನು ಜಲಪ್ರವಾಹಕ್ಕೆ ಹಾರಿದನು. ಪ್ರವಾಹವು ಅವನನ್ನು ದೂರಕ್ಕೆ ತಳ್ಳಿ ಹಾಕಲು ನೋಡಿತು. ಬಲರಾಮನಿಗೆ ದೊಡ್ಡ ಸಿಟ್ಟು ಬಂದಿತು.

ಅವನು ದಡದ ಮೇಲೆ ಬಂದು ತನ್ನ ನೇಗಿಲನ್ನು ಯಮುನಾ ನದಿಯಲ್ಲಿ ಚುಚ್ಚಿ, ಗುಡ್ಡಗಳ ನಡುವೆ, ಕಣಿವೆಗಳ ಎಡೆಯಿಂದ, ಮೈದಾನಗಳ ಮೇಲೆ, ಹೀಗೆ ತನ್ನ ಇಷ್ಟ ಬಂದ ಹಾಗೆ ವಾರೆಕೋರೆಯಾಗಿ ಎಳೆದುಕೊಂಡು ಹೋದನು. ಯಮುನೆ ಅವನ ನೇಗಿಲಿನ ಓಳಿ ಹಿಡಿದು ಸಾಗದೆ ಗತ್ಯಂತರವಿಲ್ಲದಾಯಿತು.





ಕಡೆಗೆ ಯಮುನೆಯ ಆತ್ಮ ಸ್ತ್ರೀ ರೂಪವನ್ನು ಧರಿಸಿ ಇಷ್ಟಕ್ಕೆ ತನ್ನನ್ನು ಬಿಡುವಂತೆ ಉಗ್ರನಾದ ಬಲರಾಮನನ್ನು ಪ್ರಾರ್ಥಿಸಿದಳು. ಬಲರಾಮನು ಶಾಂತನಾಗಿ, ಯಮುನೆಯನ್ನು ಅಷ್ಟಕ್ಕೆ ಬಿಟ್ಟು ಬಿಟ್ಟನು. ಈ ಅನುಭವದಿಂದ ಯಮುನೆ ಸ್ವಲ್ಪ ನಿಧಾನವಾಗಿ ಪ್ರವಹಿಸಲು ತೊಡಗಿದಳು.

ಪುರಾಣದ ನಗರಗಳಾದ ಹಸ್ತಿನಾಪುರ, ಇಂದ್ರ ಪ್ರಸ್ಥಗಳ ಮೂಲಕ ಯಮುನಾನದಿ ಪ್ರವಹಿಸ ತೊಡಗಿತು. ಕಾಲಗತಿಯಲ್ಲಿ ಕಣ್ಮರೆಯಾದ ಆ ಎರಡು ನಗರಗಳ ಪರಿಸರಗಳಲ್ಲಿಯೇ ಈ ದಿನಗಳ ಹೊಸದಿಲ್ಲಿ ಏರ್ಪಟ್ಟಿದೆ. ಚಾರಿತ್ರಿಕವಾಗಿ ಪ್ರಸಿದ್ಧಿ ಪಡೆದ ಕೆಂಪುಕೋಟೆಯ ಸಮೀಪ ದಲ್ಲಿಯೇ ಯಮುನಾ ನದಿ ಪ್ರವಹಿಸುತ್ತದೆ.





ಪುರಾತನ ನಗರವಾದ ಮಥುರೆಯನ್ನು ತಾಗಿಕೊಂಡೂ ಯಮುನಾನದಿ ಪ್ರವಹಿಸುತ್ತದೆ. ಮಥುರಾನಗರದ ರಾಕ್ಷಸರಾಜನಾದ ಕಂಸನ ಸೆರೆ ಮನೆಯಲ್ಲಿಯೇ ಶ್ರೀಕೃಷ್ಣನು ಜನ್ಮಿಸಿದನು. ಶಿಶುವಾಗಿದ್ದ ಕೃಷ್ಣನನ್ನು ಅವನ ತಂದೆ ವಸುದೇವನು ಮಥುರೆಯಿಂದ ಗೋಕುಲಕ್ಕೆ ಯಮುನಾ ನದಿಯನ್ನು ದಾಟಿ ಒಯ್ಯುವಾಗ, ಸರ್ಪರಾಜ ವಾಸುಕಿ ಹೆಡೆ ಬಿಚ್ಚಿ ಅವರು ಮಳೆಗೆ ನೆನೆಯದಂತೆ ಕೊಡೆ ಹಿಡಿದನು.

ಯಮುನಾ ತೀರದ ಬೃಂದಾವನದಲ್ಲಿಯೇ ಕೃಷ್ಣನು ತನ್ನ ವೇಣುಗಾನದಿಂದ ಪಶುಪಕ್ಷ್ಯಾದಿಗಳನ್ನೂ, ಭಕ್ತರನ್ನೂ ಪರವಶಗೊಳಿಸಿದನು. ಕೃಷ್ಣನ ಬಾಲಕ್ರೀಡೆಗಳ ಅತ್ಯಂತ ಸಂಬಂಧವಿದ್ದ ನದಿ ಯಮುನೆ.





ಗಂಗಾ ಯಮುನೆಗಳ ಸಂಗಮ ಸ್ಥಳವಾದ ಪವಿತ್ರ ಪ್ರಯಾಗದ ಬಳಿಯಲ್ಲಿಯೇ ಅಂತರ್ವಾಹಿನಿಯಾಗಿ ಪ್ರವಹಿಸುವ ಸರಸ್ವತೀ ನದಿ ಕೂಡಾ ಗಂಗಾನದಿಯೊಂದಿಗೆ ಕೂಡುತ್ತದೆ. ಹೀಗೆ ತ್ರಿವೇಣೀ ಸಂಗಮವೆನಿಸಿದ ಪ್ರಯಾಗದಲ್ಲಿ ಸ್ನಾನ ಮಾಡುವುದು ಶುಭಪ್ರದವೆಂದು ಭಕ್ತರು ಭಾವಿಸುವರು.



**ನಮ್ಮ ನದಿಗಳು :**

# ಕಾವೇರಿ

ಚೋಳಮಂಡಲವನ್ನು ತೊಂಡಮಾನನು ಪಾಲಿಸಿಕೊಂಡಿದ್ದ ಕಾಲದಲ್ಲಿ ಒಂದು ಸಾರಿ ತೀವ್ರವಾದ ಬರಗಾಲವು ಬಂದುಬಿಟ್ಟಿತು. ಒಂದು ಹನಿಯೂ ಉದುರದೆ ವರ್ಷರ್ತು ಕಳೆದು ಹೋಯಿತು. ನದಿ, ತಟಾಕಗಳೆಲ್ಲ ಒಣಗಿಹೋದುವು. ಜನರೆಲ್ಲ ಹೇಳಲಾಗದಷ್ಟು ಕಷ್ಟಕ್ಕೆ ಬಿದ್ದರು.

ಪ್ರಜೆಗಳ ಸಂಕಟಗಳನ್ನು ನೋಡಲಾಗದೆ, ರಾಜನಾದ ತೊಂಡಮಾನನು ಏನೂ ತೋರದೆ ಬಹಳ ಚಿಂತೆಗೆ ಬಿದ್ದನು. ರಾಜಭೋಗಗಳಲ್ಲಿ ಸ್ವಲ್ಪವೂ ಆಸಕ್ತಿ ಇಲ್ಲದೆ, ಹಗಲೂ ರಾತ್ರಿಯೂ ಕ್ಷಾಮದ ಕಾಟವನ್ನು ಕುರಿತೇ ಆಲೋಚಿಸುತ್ತಿದ್ದನು ರಾಜ.





ಬರಗಾಲದ ಸಮಸ್ಯೆಯನ್ನು ಹೇಗಾದರೂ ಹೋಗಲಾಡಿಸಬೇಕೆಂದುಕೊಂಡು ಆ ರಾಜನು ಸಾಧಾರಣ ಪೌರನ ವೇಷದಲ್ಲಿ ರಾಜ್ಯದಲ್ಲೆಲ್ಲಾ ತಿರುಗಾಡಿ ನೋಡಿದನು. ಆದರೂ ಸಮಸ್ಯೆಯ ಪರಿಹಾರಕ್ಕೆ ದಾರಿ ಕಾಣಲಿಲ್ಲ. ಕಣ್ಣಿಗೆ ಬಿದ್ದ ದಾರುಣ ದೃಶ್ಯಗಳಿಂದ ಮತ್ತಿಷ್ಟು ವಿಷಾದಕ್ಕೀಡಾದನು ರಾಜ.



ಆ ಸಮಯದಲ್ಲಿ ಅಗಸ್ತ್ಯ ಮಹಾಮುನಿ ಸಹ್ಯಾದ್ರಿ ಪರ್ವತದಲ್ಲಿ ಸ್ವಲ್ಪ ಕಾಲದವರೆಗೆ ತಪಸ್ಸು ಮಾಡಿಕೊಂಡಿದ್ದನು. ಆತನು ತಪಸ್ಸನ್ನು ಮುಗಿಸಿ ಪ್ರಜೆಗಳಿಗೆ ಏನಾದರೂ ಒಳಿತು ಮಾಡಬೇಕೆಂಬ ಉದ್ದೇಶದಲ್ಲಿ ಪರ್ವತ ಪ್ರದೇಶದಿಂದ ಸಾನುಭೂಮಿಗೆ ಬಂದನು.

ಚೋಳ ಮತ್ತು ಕೊಡಗು ರಾಜ್ಯಗಳ ಸರಿಹದ್ದಿನಲ್ಲಿ ರಾಜಾ ತೊಂಡಮಾನನು ಅಗಸ್ತ್ಯಮುನಿಯ ದರ್ಶನ ಮಾಡಿದನು. ಪ್ರಜೆಗಳ ಕಷ್ಟಗಳನ್ನು ನೋಡಿ ರಾಜನಿಗಿರುವ ಚಿಂತೆಯನ್ನು ಅಗಸ್ತ್ಯನು ತಿಳಿದು, ಅದಕ್ಕೆ ಏನಾದರೂ ಪರಿಹಾರ ತೋರಿಸಬೇಕೆಂದು ಅಂದುಕೊಂಡನು.





ಆ ಕಾಲದಲ್ಲಿ ಕೊಡಗು ರಾಜ್ಯವನ್ನು ಕಾವೇರನೆಂಬ ರಾಜನು ಪಾಲಿಸುತ್ತಿದ್ದನು. ಅಗಸ್ತ್ಯನು ತೊಂಡಮಾನನನ್ನು ಕಾವೇರ ರಾಜನ ಆಸ್ಥಾನಕ್ಕೆ ಕರೆದುಕೊಂಡು ಹೋಗಿ, ಸಹ್ಯಾದ್ರಿ ಪರ್ವತದ ಕಡೆಯಿಂದ ಒಂದು ನದಿ ಆವಿರ್ಭವಿಸುವುದೆಂದು ರಾಜನಿಗೆ ತಿಳಿಯಪಡಿಸಿದನು.

ಹುಟ್ಟಲಿರುವ ನದಿಯ ಪ್ರವಾಹವನ್ನು ಚೋಳ ರಾಜ್ಯಕ್ಕೆ ತಿರುಗಿಸಬೇಕೆಂದು ಅಗಸ್ತ್ಯನ ಆಶಯ. ಅದಕ್ಕೆ ಕಾವೇರ ರಾಜನು ಒಪ್ಪಿಕೊಂಡನು. ಮುನಿಯ ಆದೇಶದಂತೆ ರಾಜನು ಅನೇಕ ಮಂದಿ ಕಾರ್ಮಿಕರನ್ನು ಸಹ್ಯಾದ್ರಿ ಪರ್ವತಗಳ ಕಡೆಗೆ ನಡೆಯಿಸಿದನು.





ಅಗಸ್ತ್ಯನು ಧ್ಯಾನದಲ್ಲಿ ಕುಳಿತನು. ನೆಲದೊಳಗೆ ರೂಪಿಸಿಕೊಂಡು ಬರುವ ನದೀ ಪ್ರವಾಹ ವನ್ನು ಬೇಗನೆ ಉಕ್ಕಿ ಹೊರಗೆ ಬರುವಂತೆ ಪ್ರಾರ್ಥಿಸಿದನು.

ಆ ಸಮಯದಲ್ಲಿಯೇ ಅಗಸ್ತ್ಯನು ಹೇಳಿದ ಹಾಗೆ ಕಾರ್ಮಿಕರು ನದಿಯ ಪ್ರವಾಹವು ಚೋಳ ರಾಜ್ಯದ ಕಡೆಗೆ ಪಯಣಿಸುವ ವಿಧದಲ್ಲಿ, ದೊಡ್ಡ ದೊಡ್ಡ ಬಂಡೆಗಳನ್ನು ಪೇರಿಸಿ ಮಾರ್ಗವನ್ನು ರೂಪಿಸಿಕೊಂಡಿದ್ದರು.





ನಿರೀಕ್ಷಿಸುತ್ತಿದ್ದ ನೀರಿನ ಬುಗ್ಗೆ ಶುಭ ಘಳಿಗೆಯಲ್ಲಿ ಮೇಲಕ್ಕೆ ಚಿಮ್ಮಿ ಹಳ್ಳ ಕೊಳ್ಳ ಗುಡ್ಡ ಬೆಟ್ಟಗಳ ಎಡೆಯಿಂದಾಗಿ ಚೋಳ ರಾಜ್ಯದ ಕಡೆಗೆ ಪ್ರವಹಿಸ ತೊಡಗಿತು. ತೊಂಡಮಾನ ರಾಜನಿಗೆ ಪರಮಾನಂದವಾಯಿತು.

ಕಾವೇರ ರಾಜನಿಗೆ ಕಾವೇರಿ ಎಂಬ ಸುಂದರಿಯಾದ ಕುಮಾರಿಯೊಬ್ಬಳಿದ್ದಳು. ಅಗಸ್ತ್ಯನು ಹೊಸದಾಗಿ ಆವಿರ್ಭವಿಸಿದ ನದಿಗೆ ಯುವರಾಣಿಯ ಹೆಸರನ್ನೇ ಇಟ್ಟನು. ಆಗಿನಿಂದ ಆ ನದಿಗೆ ಕಾವೇರಿ ನದಿ ಎಂದು ಹೆಸರು ಬಂತು.






ಭಾರತ ದೇಶದೊಳಗಿನ ಎರಡು ಪ್ರಾಚೀನ ರಾಜ್ಯಗಳ ಸ್ನೇಹಕ್ಕೆ ಚಿಹ್ನೆಯಾಗಿ ಕಾವೇರಿ ನದಿ ಹರಿಯುತ್ತಿದೆ. ನಮ್ಮ ದೇಶದೊಳಗಿನ ಪವಿತ್ರವಾದ ನದಿಗಳಲ್ಲಿ ಒಂದಾದ ಕಾವೇರಿಯನ್ನು ದಕ್ಷಿಣ ಗಂಗೆ ಎಂದು ಕೂಡಾ ಹೇಳುತ್ತಾರೆ.




## ನಮ್ಮ ನದಿಗಳು :

# ತಮಸಾ

ಪೂರ್ವಕಾಲದಲ್ಲಿ ಶುಕ್ರಾಚಾರ್ಯನೆಂಬ ದೊಡ್ಡ ಮುನಿಯೊಬ್ಬನು ಒಂದು ವನದಲ್ಲಿ ವಾಸವಾಗಿದ್ದನು. ಅವನಿಗೆ ಅರಜಳೆಂಬ ಕುಮಾರಿಯೊಬ್ಬಳಿದ್ದಳು. ಅವರ ಕುಟೀರದ ಸಮೀಪದಲ್ಲಿರುವ ತಟಾಕದಲ್ಲಿ ಸ್ನಾನ ಮಾಡುವುದೆಂದರೆ ಅರಜಳಿಗೆ ಬಹಳ ಇಷ್ಟ.

ಒಂದು ದಿನ ಅರಜ ತಟಾಕದಲ್ಲಿ ಸ್ನಾನಮಾಡಿಕೊಂಡಿರುವಾಗ, ದಂಡಕನೆಂಬ ರಾಜನು ಆ ಕಡೆಗೆ ಬಂದು ಪೊದೆಯ ಮರೆಯಲ್ಲಿ ಅಡಗಿದ್ದುಕೊಂಡು, ಅವಳ ಅಂದ ಚೆಂದಗಳನ್ನು ನೋಡಿ ಮುಗ್ಧನಾಗಿ ಹೋದನು.





ಅರಜ ತಟಾಕದಿಂದ ತೀರದ ಮೇಲೆ ಬಂದಳು. ಆಗ ದಂಡಕನು ಅವಳ ಇದಿರಿಗೆ ಬಂದು, ತಾನು ಅವಳನ್ನು ಮದುವೆ ಮಾಡಿಕೊಳ್ಳುವೆನೆಂದೂ, ತನ್ನೊಂದಿಗೆ ಬರಬೇಕೆಂದೂ ಕೇಳಿದನು. ಅದಕ್ಕೆ ಅವಳು ಒಪ್ಪದಿರುವುದನ್ನು ನೋಡಿ, ಬಲವಂತದಿಂದ ಅವಳನ್ನು ಎಳೆದುಕೊಂಡು ಹೋಗಲು ಪ್ರಯತ್ನಿಸಿದನು.



ಅರಜ ಬಹಳ ಕಷ್ಟದಿಂದ ಅವನಿಂದ ತನ್ನನ್ನು ಬಿಡಿಸಿಕೊಂಡು ಕುಟೀರಕ್ಕೆ ಓಡಿ ಹೋದಳು. ದಂಡಕ ರಾಜನಿಂದ ತನಗೆ ಅವಮಾನವಾಯಿತೆಂದು ತಂದೆಯೊಂದಿಗೆ ಹೇಳಿ ವಿಲಪಿಸಿದಳು. ಮುನಿಗೆ ತಾಳಲಾಗದಷ್ಟು ಕೋಪ ಬಂದಿತು.

"ಈ ರಾಜ್ಯವು ಪಾಪಿಗಳಿಂದಲೇ ತುಂಬಿದೆ. ಅಸಹಾಯಕರನ್ನು ರಕ್ಷಿಸಬೇಕಾದ ರಾಜನೇ ಅವರನ್ನು ಪೀಡಿಸುತ್ತಾನೆ. ಈ ರಾಜ್ಯದಲ್ಲಿ ಸತ್ಯವಂತ ಸಾಧು ಸಜ್ಜನರ ಹೊರತು ಉಳಿದೆಲ್ಲರೂ ನಾಶವಾಗಲಿ" ಎಂದು ಶಾಪಕೊಟ್ಟನು.





ಮುನಿಯ ಶಾಪದ ಫಲಿತವಾಗಿ ಒಮ್ಮೆಗೇ ಅಗ್ನಿಜ್ವಾಲೆಗಳೆದ್ದು ರಾಜ್ಯದೊಳಗೆಲ್ಲಾ ಮುತ್ತಿಗೆ ಹಾಕಿದುವು. ಮುನಿಯ ವನವನ್ನು ಮಾತ್ರ ಅಗ್ನಿ ಉರಿಸಲಿಲ್ಲ. ಅವನ ಕುಮಾರಿ ಅಗ್ನಿ ಆರಿಹೋಗುವವರೆಗೂ ತಟಾಕದಲ್ಲೇ ಇದ್ದಳು. ರಾಜ್ಯದೊಳಗಿನ ನದಿ ಸರೋವರಗಳೆಲ್ಲ ಇಂಗಿಹೋದುವು. ಅರಜಳಿಂದ ಐಕ್ಯವಾದ ತಟಾಕವು ಮಾತ್ರ ನೀರಿನಿಂದ ತುಂಬಿಕೊಂಡೇ ಇದ್ದಿತು.

ಅಗ್ನಿಜ್ವಾಲೆಗೆ ಸಿಕ್ಕದೆ ಉಳಿದವರು ದೂರ ದೂರ ಪ್ರಾಂತ್ಯಗಳಿಗೆ ಓಡಿಹೋದರು. ದಂಡಕ ರಾಜ್ಯವು ಬೂದಿಯ ರಾಶಿಗಳಿಂದ ತುಂಬಿತು, ನಿರ್ಮಾನುಷ್ಯವಾಯಿತು. ಒಂದೆರಡು ಪಕ್ಷಿಗಳ ಹೊರತು ಯಾವ ಪ್ರಾಣಿಗೂ ರಾಜ್ಯವನ್ನು ಸಮೀಪಿಸಲಾಗಲಿಲ್ಲ.






ಬಹಳ ಕಾಲದ ಮೇಲೆ ಸುರಿದ ಮಳೆಯ ಕಾರಣದಿಂದ, ಅಲ್ಲಿಯ ತಟಾಕವು ಒಂದು ಬೆಟ್ಟದೊರೆಯೊಂದಿಗೆ ಕೂಡಿ ನದಿಯಾಗಿ ಮಾರ್ಪಟ್ಟಿತು. ಆ ನದಿ ಮರುಭೂಮಿಯಂತಹ ನೆಲದ ಮೇಲೆ ಪ್ರವಹಿಸಲು ತೊಡಗಿತು. ಪಕ್ಷಿಗಳು ತಿಂದು ಉದುರಿಸಿದ ಹಣ್ಣುಗಳ ಬೀಜಗಳಿಂದ ಗಿಡಗಳು ಹುಟ್ಟಿದುವು. ಆ ಗಿಡಗಳು ಮತ್ತಷ್ಟು ಗಿಡಗಳನ್ನು ಆಕರ್ಷಿಸುವಂತಾದುವು.

ಕ್ರಮಕ್ರಮವಾಗಿ ನದಿಯ ಇಕ್ಕೆಲಗಳಲ್ಲಿಯೂ ಅರಣ್ಯವು ಏರ್ಪಟ್ಟು. ದಟ್ಟವಾಗಿ ಹರಡಿ ವಿಸ್ತರಿಸ ತೊಡಗಿತು. ದಂಡಕ ರಾಜ್ಯದಲ್ಲಿ ಉಂಟಾದ ಆ ಅರಣ್ಯಕ್ಕೆ ದಂಡಕಾರಣ್ಯವೆಂದೂ, ನದಿಗೆ ತಮಸಾ ನದಿಯೆಂದೂ ಮುನಿಗಳು ಹೆಸರಿಟ್ಟರು.






ಭಾರತದೇಶದಲ್ಲಿ ದಂಡಕಾರಣ್ಯವು ಸುಪ್ರಸಿದ್ಧವಾಗಿದೆ. ಸೀತಾರಾಮಲಕ್ಷ್ಮಣರು ವನವಾಸದ ಕಾಲವನ್ನು ಅಲ್ಲಿಯೇ ಕಳೆದರು. ಒಂದು ಕಡೆ ರಾಕ್ಷಸರಿಗೂ, ಪಿಶಾಚಿಗಳಿಗೂ, ಮತ್ತೊಂದು ಕಡೆ ಮುನಿಗಳಿಗೂ, ಸಾಧುಗಳಿಗೂ ದಂಡಕಾರಣ್ಯವು ವಾಸಸ್ಥಳವಾಯಿತು.

ತಮಸಾ ನದಿಯ ತೀರದಲ್ಲಿಯೇ ಆದಿಕವಿ ವಾಲ್ಮೀಕಿ. ತನ್ನ ಆಶ್ರಮವನ್ನು ನಿರ್ಮಿಸಿಕೊಂಡಿದ್ದನು. ಆ ನದಿಯ ತೀರದಲ್ಲಿಯೇ ಆದಿಕಾವ್ಯವಾದ ರಾಮಾಯಣದ ರಚನೆ ನಡೆಯಿತು.






ತಮಸಾ ನದಿಯ ತೀರದಲ್ಲಿಯೇ ಸೀತೆ ತನ್ನ ಮಕ್ಕಳಾದ ಲವ ಕುಶರನ್ನು ಬೆಳೆಸಿಕೊಂಡಿದ್ದಳು. ವಾಲ್ಮೀಕಿ ಮಹರ್ಷಿ ಅವರಿಗೆ ರಾಮಾಯಣವನ್ನು ಗಾನ ಮಾಡುವ ವಿಧಾನವನ್ನು ಕಲಿಸಿದನು. ಈ ದಿನಗಳಲ್ಲಿ ಕೂಡಾ ತಮಸಾ ನದಿ ದಂಡಕಾರಣ್ಯದ ಮೂಲಕವಾಗಿಯೇ ಪ್ರವಹಿಸಿಕೊಂಡಿದೆ.




## ನಮ್ಮ ನದಿಗಳು :

# ಗಂಗಾ–೧

ನಾರದಮುನಿ ಒಂದು.ಸಾರಿ ಭೂಲೋಕದಿಂದ ದೇವಲೋಕದ ಕಡೆಗೆ ಹೊರಟನು. ತುಂಬಿದ ಹುಣ್ಣಿಮೆ ಚಂದ್ರನ ಬೆಳುದಿಂಗಳ ಕಾಂತಿಯಲ್ಲಿ ಹಿಮಾಲಯ ಪರ್ವತಗಳ ಮೇಲಿನಿಂದ ನಾರದನು ಆನಂದವಾಗಿ ವೀಣೆ ಮೀಟಿಕೊಂಡು ಹಾಡುತ್ತಾ ಸಾವಧಾನವಾಗಿ ನಡೆಯುತ್ತಿದ್ದನು.

ಒಂದು ಕಣಿವೆಯ ಸಮೀಪದಲ್ಲಿ ಅದ್ಭುತವಾದ ಅಂದ ಚೆಂದಗಳಿಂದ ಕೂಡಿದ ಕೆಲಮಂದಿ ಸ್ತ್ರೀ ಪುರುಷರು ನಾರದನಿಗೆ ಕಂಡು ಬಂದರು. " ಯಾರಾಗಿರಬಹುದು ? " ಎಂದು ತನ್ನೊಳಗೇ ಆಶ್ಚರ್ಯಪಡುತ್ತಾ, ನಾರದಮುನಿ ಅವರನ್ನು ಸಮೀಪಿಸಿದನು.





" ಯಾರು ನೀವು ? " ಎಂದು ಕೇಳುತ್ತ ನಾರದನು ಅವರ ಸಮೀಪ ಬಂದಾಗ, ಮತ್ತೊಂದು ವಿಷಯವನ್ನು ಕಂಡು ಹಿಡಿದನು. ಅಲ್ಲಿರುವವರಲ್ಲಿ ಪ್ರತಿಯೊಬ್ಬರಿಗೂ ಏನೋ ಒಂದು ಅವಯವದ ಲೋಪವಿದ್ದಿತು. ಒಬ್ಬನಿಗೆ ಒಂದು ಕಣ್ಣಾದರೆ, ಪಕ್ಕದಲ್ಲಿರುವವನಿಗೆ ಒಂದು ಕಿವಿ ಇರಲಿಲ್ಲ. ಇನ್ನೊಬ್ಬನಿಗೆ ಕೈ ಇಲ್ಲದಿದ್ದರೆ ಮತ್ತೊಬ್ಬನಿಗೆ ಕಾಲಿಲ್ಲ.







ನಾರದನ ಪ್ರಶ್ನೆಗೆ ಉತ್ತರ ಕೊಡಲು ಮೊದಲು ಶಂಕಿಸಿದರೂ ಆಮೇಲೆ ಅವರು ತಾವು ರಾಗಗಳ, ಸ್ವರಗಳ ಆತ್ಮಗಳಾದ ಗಂಧರ್ವರೆಂದು ತಿಳಿಯ ಪಡಿಸಿದರು. ಗಾಯಿನೀ ಗಾಯಕರು ರಾಗಗಳನ್ನು ರಾಗಯುಕ್ತವಾಗಿ ಆಲಾಪಿಸುವಾಗ, ಅದರ ದುಷ್ಫಲಿತಗಳು ತಮಗೆ ಪೆಟ್ಟುಗಳಾಗಿ ತಗಲುತ್ತವೆಂದೂ, ಆ ಕಾರಣದಿಂದ ಹೀಗೆ ಒಂದೊಂದು ಅವಯವವು ಹೋಗುತ್ತದೆಂದೂ ಅವರು ಹೇಳಿದರು.

ಆ ವಿಷಯವು ಸಹಜವಾಗಿಯೇ ನಾರದನನ್ನು ಚಿಂತೆಗೀಡು ಮಾಡಿತು. ಅವರ ಹತ್ತಿರ ಇನ್ನೂ ವಿಚಾರಿಸಿದಾಗ, ಪರಿಪೂರ್ಣ ಗಾಯಕನಾದ ಪರಮಶಿವನು ಹಾಡಿದನಾದರೆ, ಆ ಹಾಡನ್ನು ಕೇಳುವುದರ ಮೂಲಕ ತಾವು ಕಳೆದುಕೊಂಡ ಅವಯವಗಳು ಮತ್ತೆ ಬರುತ್ತವೆಂದು ತಿಳಿಯ ಪಡಿಸಿದರು. ಒಡನೆಯೇ ನಾರದನು ಕೈಲಾಸಕ್ಕೆ ಹೋಗಿ, ಶಿವನೊಂದಿಗೆ ಆ ವಿಷಯವನ್ನು ವಿನಂತಿಸಿಕೊಂಡನು.





ಅದನ್ನು ಕೇಳಿ ಪರಮಶಿವನು ಹಾಡಲು ಒಪ್ಪಿಕೊಂಡನು. ತನ್ನ ಹಾಡನ್ನು ಕೇಳಲು ಕಡೇಪಕ್ಷ ಒಬ್ಬನಾದರೂ ಪರಿಪೂರ್ಣ ಶ್ರೋತೃಜ್ಞಾನಿ ಇದ್ದು ತೀರಬೇಕೆಂದು ಶಿವನು ಷರತ್ತಿಟ್ಟನು. ಬ್ರಹ್ಮ ವಿಷ್ಣುಗಳಿಬ್ಬರೇ ಪರಿಪೂರ್ಣ ಶ್ರೋತೃಜ್ಞಾನಿಗಳೆಂದೂ ಶಿವನು ಸೂಚಿಸಿದನು. ನಾರದನು ಬ್ರಹ್ಮನ ಬಳಿಗೆ ಹೋಗಿ ಸಂಗತಿ ತಿಳಿಸಿ ಶಿವನ ಹಾಡನ್ನು ಕೇಳಲು ಬರಬೇಕೆಂದು ಪ್ರಾರ್ಥಿಸಿದನು.

ಬ್ರಹ್ಮನು ಶಿವನ ಗಾಯನವನ್ನು ಕೇಳಲು ಪರಮ ಸಂತೋಷದಿಂದ ಒಪ್ಪಿದನು. ಯಾವುದಕ್ಕೂ ಒಳ್ಳೆಯದೆಂದುಕೊಂಡು ನಾರದನು ಪರಿಪೂರ್ಣ ಶ್ರೋತೃಜ್ಞಾನಿಗಳಿಬ್ಬರನ್ನು ಕರೆದೊಯ್ಯಬೇಕೆಂದುಕೊಂಡನು. ಅಂತಲೇ ವಿಷ್ಣುವಿನ ಬಳಿಗೆ ಹೋಗಿ ವಿಷಯವನ್ನು ಹೇಳುತ್ತಲೇ ವಿಷ್ಣು ಅತ್ಯಾನಂದದಿಂದ ಅಂಗೀಕರಿಸಿದನು.





ಬ್ರಹ್ಮ ವಿಷ್ಣುಗಳೂ, ಗಂಧರ್ವರೂ ಶಿವನ ಸಮಕ್ಷಮಕ್ಕೆ ಬಂದರು. ಶಿವನು ಬಹಳ ಹೊತ್ತು ಮೌನವಹಿಸಿ, ಧ್ಯಾನ ನಿಷ್ಠೆಯಲ್ಲಿದ್ದು ಆಮೇಲೆ ಮೆಲ್ಲನೆ ಹಾಡಲು ತೊಡಗಿದನು. ಅದ್ಭುತವಾದ ಆ ಗಾನದಿಂದ ಎಲ್ಲರೂ ಪರವಶರಾಗಿ ಹೋದರು.

ಶಿವನ ಗಾನಕ್ಕೆ ಮುಗ್ಧರಾಗಿಹೋದ ಗಂಧರ್ವರು ನಾಟ್ಯವಾಡತೊಡಗಿದರು. ಆಗಲೇ ಅವರ ಶರೀರಗಳಲ್ಲಿ ಲೋಪಿಸಿದ ಅವಯವಗಳೆಲ್ಲ ಕ್ರಮವಾಗಿ ಮೊಳೆತು ಎದ್ದುವು. ಬಹಳ ಸಂತೋಷದಲ್ಲಿ ಅವರೆಲ್ಲಾ ಶಿವನಿಗೆ ಕೃತಜ್ಞತಾಪೂರ್ವಕವಾಗಿ ನಮಸ್ಕರಿಸಿದರು.





ಶಿವನ ಗಾನದೊಳಗಿನ ಸಂಗೀತ ತರಂಗಗಳು ಸುತ್ತುಮುತ್ತಲಿನ ಪ್ರಕೃತಿಯನ್ನು ಅದ್ಭುತವಾದ ಸೌಂದರ್ಯ ಸೀಮೆಯಾಗಿ ಮಾರ್ಪಡಿಸಿಬಿಟ್ಟವು. ಮರಗಿಡಗಳಲ್ಲೆಲ್ಲಾ ಬಣ್ಣ ಬಣ್ಣದ ಹೂಗಳು ಅರಳಿದುವು. ಹೊಸ ಚಿಗುರುಗಳಿಂದ ರಾರಾಜಿಸಿದುವು. ಗಾಳಿ ಮಲಯಮಾರುತವಾಗಿ ಬೀಸುತ್ತಿದ್ದಿತು. ಅಲ್ಲಿಯ ವಾತಾವರಣವು ಭುವಿಗೂ ದಿವಿಗೂ ನೂತನ ಶೋಭೆಯನ್ನು ಪ್ರಸಾದಿಸಿತ್ತು.

ಆಗ ಅಲ್ಲಿ ಮತ್ತೊಂದು ಅದ್ಭುತವೂ ನಡೆಯಿತು. ಶಿವನ ಮೃದುಮಧುರ ಗಾಯನದಲ್ಲಿ ತನ್ಮಯನಾಗಿ ಕೇಳುತ್ತಿದ್ದ ವಿಷ್ಣುವಿನ ಶರೀರದೊಂದು ಪೊರೆ ಕರಗಿ ಪ್ರವಹಿಸಲು ತೊಡಗಿತು. ಅದನ್ನು ಬ್ರಹ್ಮನೊಬ್ಬನು ಮಾತ್ರವೇ ನೋಡಿದನು.






ಕೂಡಲೇ ಬ್ರಹ್ಮನು ಆ ಜಲಧಾರೆಯನ್ನು ತನ್ನ ಕಮಂಡಲುವಿನಲ್ಲಿ ಹಿಡಿದುಕೊಂಡನು. ಆ ಜಲಧಾರೆಯೇ ಗಂಗಾನದಿಗೆ ಮೂಲ. ವಿಷ್ಣು ಶರೀರದ ಪೊರೆ ಕರಗಿ ಕಾಲಿನ ಮೂಲಕ ಪ್ರವಹಿಸಿದುದರಿಂದ ಗಂಗಾನದಿ ಪರಮ ಪವಿತ್ರವಾದುದೆಂದು ಖ್ಯಾತವಾಯಿತು.




**ನಮ್ಮ ನದಿಗಳು :**

## ಗಂಗಾ – ೧

ಆಯೋಧ್ಯೆಗೆ ರಾಜನಾದ ಸಗರನು ಒಂದು ಸಾರಿ ಯಜ್ಞ ಮಾಡಲು ಸಿದ್ಧನಾದನು. ಆಚಾರದಂತೆ ಅಲಂಕರಿಸಲ್ಪಟ್ಟ ಬಲಿಷ್ಠವಾದ ಕುದುರೆಯ ಮೇಲೆ ಧ್ವಜವನ್ನು ನಿಲ್ಲಿಸಿ, ಮುಂದೆ ಬಿಟ್ಟು ಅದರ ಹಿಂದೆ ರಾಜಕುಮಾರರೂ ಸೈನಿಕರೂ ಪ್ರಯಾಣ ಮಾಡಿದರು. ಯಜ್ಞಾಶ್ವವು ಅನೇಕ ರಾಜ್ಯಗಳಿಗೆ ಹೋಯಿತು.

ಅಶ್ವರಕ್ಷಕರು ಗಮನ ತಪ್ಪಿದ ಸಮಯ ನೋಡಿ ಇಂದ್ರನು ರಾಕ್ಷಸ ರೂಪದಲ್ಲಿ ಬಂದು ಆ ಕುದುರೆಯನ್ನು ಕದ್ದುಕೊಂಡು ಹೋಗಿ, ಪಾತಾಳದಲ್ಲಿರುವ ಕಪಿಲನ ಆಶ್ರಮದಲ್ಲಿ ಕಟ್ಟಿದನು.





ಸಗರನ ಅರುವತ್ತು ಸಾವಿರ ಕುಮಾರರು ನಾಲ್ಕು ದಿಕ್ಕುಗಳಲ್ಲಿ ತಿರುಗುತ್ತಾ, ಪಾತಾಳಕ್ಕೆ ಹೋಗಿ ಅಲ್ಲಿ ತಮ್ಮ ಕುದುರೆ ಇರುವುದನ್ನು ಕಂಡರು. ಕಪಿಲಮುನಿಯೇ ತಮ್ಮ ಕುದುರೆಯನ್ನು ಅಪಹರಿಸಿದನೆಂದುಕೊಂಡು, ಆ ರಾಜಕುಮಾರರು ನಿರ್ದೋಷಿಯಾದ ಕಪಿಲನನ್ನು ಅವಮಾನಿಸಿದರು.



ಅವರ ದುಡುಕತನವು ಕಪಿಲನಿಗೆ ಮಹಾ ಕೋಪವನ್ನುಂಟುಮಾಡಿತು. ದುರಹಂಕಾರಿಗಳಾದ ಅವರೆಲ್ಲರೂ ಭಸ್ಮವಾಗುವಂತೆ ಶಪಿಸಿದನು. ಮರುಕ್ಷಣದಲ್ಲಿ ರಾಜಕುಮಾರರೆಲ್ಲಾ ಸುಟ್ಟು ಹೋದರು.

ಮುಂದೆ ಅನೇಕ ವರ್ಷಗಳು ಕಳೆದ ಮೇಲೆ. ಸಗರನ ಮೊಮ್ಮಗನಾದ ಅಂಶುಮಂತನು ತಮ್ಮ ತಂದೆಯರನ್ನು ಬದುಕಿಸುವಂತೆ ಕಪಿಲನನ್ನು ಪ್ರಾರ್ಥಿಸಿದನು. ಬ್ರಹ್ಮ ಕಮಂಡಲುವಿನ ಪವಿತ್ರ ಗಂಗಾ ಜಲವು ಅಲ್ಲಿರುವ ಭಸ್ಮರಾಶಿಯನ್ನು ಸ್ಪರ್ಶಿಸಿದರೆ ಮಾತ್ರ ಸಗರ ಕುಮಾರರು ಪುನರುಜ್ಜೀವಿತರಾಗುವರೆಂದು ಕಪಿಲನು ಹೇಳಿದನು.






ಮತ್ತೆ ಕಾಲವು ಕ್ರಮಿಸಿದ ಮೇಲೆ ಸಗರನ ಮರಿಮೊಮ್ಮಗನಾದ ಭಗೀರಥನು ಭಸ್ಮರಾಶಿಯಾಗಿರುವ ತನ್ನ ಪೂರ್ವಿಕರನ್ನು ಬದುಕಿಸಿಕೊಳ್ಳಲು ಹಟಹಿಡಿದು ಬ್ರಹ್ಮನನ್ನು ಧ್ಯಾನಿಸಿ ದೊಡ್ಡ ತಪಸ್ಸು ಮಾಡಿದನು. ಬ್ರಹ್ಮನು ಸಂತೋಷಪಟ್ಟು, ತನ್ನ ಕಮಂಡಲುವಿನ ಗಂಗಾಜಲವನ್ನು ಹೊರಗೆ ಬಿಡಲು ಒಪ್ಪಿದನು.

ಆದರೂ ಉದ್ಧೃತವಾದ ಗಂಗಾ ಜಲದ ಪ್ರವಾಹ ವನ್ನು ತಡೆದುಕೊಳ್ಳುವ ಶಕ್ತಿ ಭೂಮಿಗೆ ಇಲ್ಲ. ಆ ವೇಗವನ್ನು ತಡೆದುಕೊಳ್ಳುವ ಶಕ್ತಿ ಶಿವನಿಗೆ ಮಾತ್ರವೇ ಇದೆ ಎಂದು ಭಗೀರಥನಿಗೆ ಗೊತ್ತಾ ಯಿತು. ಅಂತಲೇ ಅವನು ಶಿವನನ್ನು ಬೇಡಿ ಕೊಂಡನು. ಅವನ ಪ್ರಾರ್ಥನೆಗೆ ಶಿವನು ಒಪ್ಪಿ, ಗಂಗೆಯನ್ನು ತನ್ನ ತಲೆಯ ಮೇಲೆ ಇಳಿಸಿ ಕೊಂಡನು.






ಶಿವನ ತಲೆಯಿಂದ ಭೂಮಿಗಿಳಿದ ಗಂಗೆ, ಭಗೀರಥನ ಹಿಂದೆಯೇ ಹರಿದು ಹೋದಳು. ಹೀಗೆ ಭೂಮಿಯಲ್ಲಿ ತಿರುಗಿ ತಿರುಗಿ ಹರಿದ ಗಂಗೆ ಯಿಂದ ನೆಲವು ಸಸ್ಯಶ್ಯಾಮಲವಾಯಿತು.

ಭಗೀರಥನು ಗಂಗಾಪ್ರವಾಹವನ್ನು ಪಾತಾಳಕ್ಕೆ ನಡೆಸಿಕೊಂಡು ಹೋದನು. ಕಪಿಲನ ಆಶ್ರಮ ದಲ್ಲಿದ್ದ ಭಸ್ಮರಾಶಿಗಳು ಗಂಗಾ ಜಲದಲ್ಲಿ ಮುಳು ಗಿದುವು. ಕೂಡಲೇ ಅರುವತ್ತು ಸಾವಿರ ಮಂದಿ ಸಗರ ಪುತ್ರರು ಜೀವದೊಂದಿಗೆ ಎದ್ದು ಬಂದರು. ಭಗೀರಥನ ಪ್ರಯತ್ನವು ಸಫಲವಾಯಿತು.





ನಮ್ಮ ದೇಶದಲ್ಲಿ ಗಂಗಾ ನದಿ ಅತಿ ಪವಿತ್ರವೆಂದು ಪ್ರಸಿದ್ಧವಾಗಿದೆ. ಗೋಮುಖದಿಂದ ರೂಪ ಪಡೆದು ಗಂಗೋತ್ರಿಯಲ್ಲಿ ಆವಿರ್ಭವಿಸಿ ಪುರಾತನ ಪವಿತ್ರ ಕ್ಷೇತ್ರವಾಗಿರುವ ಹೃಷೀಕೇಶದಿಂದ ಸಾನುಭೂಮಿಗಳ ಮೇಲೆ ಗಂಗಾ ನದಿ ಹರಿಯುತ್ತದೆ.

ಗಂಗಾನದಿಯ ತೀರದಲ್ಲಿರುವ ಅನೇಕ ಪುಣ್ಯಕ್ಷೇತ್ರಗಳಲ್ಲಿ ಹರಿದ್ವಾರ, ವಾರಣಾಸಿಗಳು ಬಹಳ ಮುಖ್ಯವಾದುವು. ಈ ಎರಡು ಕ್ಷೇತ್ರಗಳೂ ಅತ್ಯಂತ ಪುರಾತನವಾದುವು. ಯುಗ ಯುಗಗಳಿಂದ ಭಕ್ತರನ್ನು ಆಕರ್ಷಿಸುವಂಥವು.






ಗಂಗಾತೀರದಲ್ಲಿ ಬೆಳಗುವ ಮತ್ತೊಂದು ಮುಖ್ಯ ನಗರವು ಕಲಕತ್ತಾ. ಈ ನಗರ ಪ್ರಾಂತ್ಯದಲ್ಲಿ ಈ ನದಿಯನ್ನು ಹುಗ್ಲೀನದಿ ಎನ್ನುತ್ತಾರೆ. ಕಲಕತ್ತದಿಂದ ಈ ನದಿ ಹಲವು ಭಾಗಗಳಾಗಿ ಸೀಳಿ, ಬಂಗಾಲದ ಹುಲಿಗಳಿಗೆ ನಿಲಯವಾದ ಸುಂದರ್ ಬಾನ್ಸ್ ಎಂಬ . ಕಾಡುಗಳ ಮೂಲಕ ಪ್ರವಹಿಸಿ ಸಮುದ್ರದಲ್ಲಿ ಕಲೆಯುತ್ತದೆ.



## ನಮ್ಮ ನದಿಗಳು :

# ವಿಪಾಶ

ಕಲ್ಮಾಷಪಾದನೆಂಬ ರಾಜನು ಒಂದು ದಿನ ಕುದುರೆಯ ಮೇಲೆ ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದನು. ಒಂದೆಡೆಯಲ್ಲಿ ದಾರಿ ಬಹಳ ಇಕ್ಕಟ್ಟಾಗಿದ್ದಿತು. ಆ ದಾರಿಯಲ್ಲಿ ಶಕ್ತಿ ಎಂಬ ಮುನಿಕುಮಾರನೊಬ್ಬನು ರಾಜನಿಗೆ ಇದಿರಾಗಿ ಬಂದನು. ರಾಜನು ಅವನನ್ನು ಬದಿಯಲ್ಲಿ ನಿಂತು ತನಗೆ ದಾರಿ ಬಿಡಲು ಹೇಳಿದನು.

"ಸಾಧುಗಳ ಸಮಕ್ಷಮದಲ್ಲಿ ವಿನಯ ವಿಧೇಯತೆ ತೋರಿಸಬೇಕಾದುದು ರಾಜರ ಧರ್ಮ. ಆದ್ದರಿಂದ ನೀನೇ ಬದಿಯಲ್ಲಿ ನಿಂತು ನನಗೆ ದಾರಿ ಬಿಡುವುದೇ ನ್ಯಾಯ" ಎಂದನು ಮುನಿಕುಮಾರ. ಆ ಮಾತಿನಿಂದ ಕೋಪಗೊಂಡ ಕಲ್ಮಾಷಪಾದನು ಶಕ್ತಿಯನ್ನು ಕೊರಡೆಯಿಂದ ಹೊಡೆದನು.





ರಾಜನ ಘಾತಕೃತ್ಯವನ್ನು ನೋಡಿ ಅವಾಕ್ಕಾಗಿ ಹೋದ ಮುನಿಕುಮಾರನು, ಬೇಗನೇ ಎಚ್ಚರಕ್ಕೆ ಬಂದು, "ರಾಕ್ಷಸ ಸ್ವಭಾವದ ನೀನು ರಾಜನಾಗಿರಲು ಅರ್ಹನಲ್ಲ. ರಾಕ್ಷಸನಾಗಿ ಹೋಗು !" ಎಂದು ಶಪಿಸಿದನು. ಮರುಕ್ಷಣವೇ ರಾಜನು ರಾಕ್ಷಸನಾಗಿ ಮಾರ್ಪಟ್ಟನು.



ವಸಿಷ್ಠ ಮಹಾಮುನಿಯ ಹಿರಿಯ ಕುಮಾರನೇ ಶಕ್ತಿ. ವಸಿಷ್ಠನ ಮೇಲೆ ವಿಶ್ವಾಮಿತ್ರನಿಗೆ ಬದ್ಧ ವೈರವಿದ್ದಿತು. ಆದುದರಿಂದ ವಿಶ್ವಾಮಿತ್ರನು ರಾಕ್ಷಸನಾದ ಕಲ್ಮಾಷಪಾದನನ್ನು ಮತ್ತೊಂದು ಭೂತವು ಆವಹಿಸುವಂತೆ ಮಾಡಿದನು. ಭೂತವು ಆವಹಿಸಿದ ರಾಕ್ಷಸನಾದ ಕಲ್ಮಾಷಪಾದನು ಒಂದು ದಿನ ಶಕ್ತಿಯನ್ನು ಹಿಡಿದು ಕುಕ್ಷಿಗೆ ಕಿವಿಚಿ ಕೊಂದು ಬಿಟ್ಟನು.

ಅಲ್ಲಿಗೆ ನಿಲ್ಲದೆ ಕಲ್ಮಾಷಪಾದನು ವಸಿಷ್ಠ ಮುನಿಯ ಆಶ್ರಮಕ್ಕೆ ಹೋದನು. ಆಗ ಅಲ್ಲಿ ವಸಿಷ್ಠನಿರಲಿಲ್ಲ. ರಾಕ್ಷಸನು ನಿರಾಯುಧರಾದ ವಸಿಷ್ಠನ ಕುಮಾರರೆಲ್ಲರನ್ನೂ ಕೊಂದು ಆಶ್ರಮಕ್ಕೆ ಬೆಂಕಿ ಹಚ್ಚಿ ಹೋದನು.





ಆಮೇಲೆ ಆಶ್ರಮಕ್ಕೆ ಹಿಂದಿರುಗಿ ಬಂದ ವಸಿಷ್ಠನು ಸತ್ತು ಬಿದ್ದಿದ್ದ ಕುಮಾರರನ್ನೂ, ಸುಟ್ಟು ಹೋದ ಆಶ್ರಮವನ್ನೂ ನೋಡಿ ದಿಗ್ಭ್ರಾಂತನಾದನು. ಹೇಳಲಾಗದಷ್ಟು ದುಃಖವನ್ನು ಅನುಭವಿಸಿದನು. ಆದರೂ ಎಲ್ಲವೂ ತನ್ನ ವಿಧಿ ಎಂದುಕೊಂಡನೇ ಹೊರತು, ಯಾರ ಮೇಲೂ ಪ್ರತೀಕಾರ ಮಾಡುವ ಯೋಚನೆ ಮೂಡಲಿಲ್ಲ.

ಪುತ್ರಶೋಕವನ್ನು ತಾಳಿಕೊಳ್ಳಲಾಗದೆ ವಸಿಷ್ಠನು ಪ್ರಾಣತ್ಯಾಗ ಮಾಡಿಕೊಳ್ಳಬೇಕೆಂದು ಒಂದು ಬೆಟ್ಟದ ಶಿಖರವನ್ನೇರಿ, ಆಗಲೇ ಆವಿರ್ಭವಿಸಿಕೊಂಡಿದ್ದ ಒಂದು ನದಿಯ ಪ್ರವಾಹಕ್ಕೆ ಧುಮುಕಿದನು.





ವಸಿಷ್ಠನು ನದಿಗೆ ಧುಮುಕಿದರೂ ಪ್ರವಾಹದಲ್ಲಿ ಹೊಡೆದುಕೊಂಡು ಹೋಗಲಿಲ್ಲ. ಅವನ ಸುತ್ತಲೂ ನೀರೇ ಇರಲಿಲ್ಲ. ಮೆತ್ತಗಿನ ಮರಳು ರಾಶಿಯ ಮೇಲೆ ಅವನು ನಿಂತುಕೊಂಡಿದ್ದನು. ನದೀಜನನಿ ತನ್ನನ್ನು ರಕ್ಷಿಸುತ್ತಿದ್ದಾಳೆಂದು ಅವನಿಗೆ ಅರ್ಥವಾಯಿತು.

ಆದರೂ ವಸಿಷ್ಠನು ಸತ್ತು ಹೋಗುವುದನ್ನೇ ನಿರ್ಧರಿಸಿಕೊಂಡು ನದಿಯ ದಂಡೆಗುಂಟ ನಡೆಯುತ್ತಾ, ತುಂಬಾ ಆಳವಾಗಿರುವಲ್ಲಿ ಹೋಗಿ, ಕೈ ಕಾಲು ಕಟ್ಟಿಕೊಂಡು ಮತ್ತೆ ನದಿಯೊಳಗೆ ಧುಮುಕಿದನು.





ನದಿಗೆ ಬಿದ್ದ ಮರುಕ್ಷಣದಲ್ಲೇ ಅವನ ಬಂಧನಗಳೆಲ್ಲಾ ಬಿಟ್ಟು ಹೋದುವು. ಪ್ರವಾಹವು ಅವನನ್ನು ಮೇಲೆ ಎತ್ತಿ, ತುಂತುರುಗಳಿಂದ ಅವನ ಆಯಾಸ ಪರಿಹರಿಸಿ ಉಪಚಾರ ತೋರಿಸಿತು.

ಆಗ ವಸಿಷ್ಠನಿಗೆ ತನ್ನ ಮಗ ಶಕ್ತಿಯ ಹೆಂಡತಿ ನದೀ ತೀರದಲ್ಲಿ ನಿಂತು ದೀನಭಾವದಿಂದ ತನ್ನನ್ನು ನೋಡುವುದು ಕಂಡಿತು. ಅವಳು ತುಂಬಿದ ಗರ್ಭಿಣಿ. ಅವಳು ಬೇಗದಲ್ಲೇ ತನಗೊಬ್ಬ ಮೊಮ್ಮಗನನ್ನು ಹೆತ್ತು ಕೊಡಲಿದ್ದಾಳೆಂದು ವಸಿಷ್ಠನಿಗೆ ನೆನಪಾಯಿತು. ಕಡೇ ಪಕ್ಷ ತನ್ನ ಮೊಮ್ಮಗನಿಗಾಗಿಯಾದರೂ ತಾನು ಬದುಕಿರಬೇಕೆಂಬ ನಿಶ್ಚಯಕ್ಕೆ ಬಂದು ಅವನು ನದಿಯಿಂದ ಮೇಲೆ ಬಂದನು.






ಹೊಸ ನದಿಗೆ ತನ್ನ ಮೇಲಿರುವ ದಯೆಯನ್ನೂ, ತಾಯಿಯಂತಹ ಪ್ರೇಮವನ್ನೂ ನೋಡಿ ವಸಿಷ್ಠನ ಹೃದಯ ಉಕ್ಕಿ ಬಂದಿತು. ಭಕ್ತರಿಗೆ ಪಾಶವಿಮುಕ್ತಿ ಮಾಡುವ ಆ ನದಿಗೆ ವಸಿಷ್ಠನು "ವಿಪಾಶಾ" ಎಂದು ನಾಮಕರಣ ಮಾಡಿದನು. ವಿಪಾಶಾ ನದಿಯಲ್ಲಿ ಸ್ನಾನ ಮಾಡುವುದನು ಭಕ್ತರು ಮಹಾಭಾಗ್ಯವೆಂದು ಭಾವಿಸುತ್ತಾರೆ.




**ನಮ್ಮ ದೇವಾಲಯಗಳು :**

## ಬದರೀನಾಥ್–ಕೇದಾರನಾಥ್

ಪುರಾತನ ಕಾಲದಿಂದಲೂ ಭಾರತೀಯರು ಹಿಮಾಲಯ ಪರ್ವತಗಳನ್ನು ಪವಿತ್ರವಾಗಿಯೇ ಭಾವಿಸುತ್ತಿದ್ದರು. ಮಹಾಕವಿ ಕಾಳಿದಾಸನು ಹಿಮಾಲಯವನ್ನು 'ದೇವತಾತ್ಮ' ಎಂದು ವರ್ಣಿಸಿದ್ದಾನೆ. ದೇವತೆಗಳು, ಗಂಧರ್ವರು, ಯಕ್ಷರು ಅಲ್ಲಿ ವಾಸಮಾಡುವರೆಂಬ ನಂಬುಗೆಯಿದೆ. ಜೀವನದಿಗಳೆಲ್ಲಾ ಹಿಮಾಲಯದಿಂದಲೇ ಹುಟ್ಟಿ ಪ್ರವಹಿಸುತ್ತವೆ

ಅನೇಕ ಮಂದಿ ಜಿಜ್ಞಾಸುಗಳಾದ ಸಾಧುಗಳು ಧ್ಯಾನ ಮಾಡಲು ಪ್ರಶಾಂತ ವಾತಾವರಣವನ್ನು ಹುಡುಕುತ್ತ ಹಿಮಾಲಯಗಳಿಗೆ ಹೋಗುತ್ತಿರುವರು. ಯುಗ ಯುಗಗಳಿಂದ ಅಸಂಖ್ಯಾಕರಾದ ಸನ್ಯಾಸಿಗಳು ಹಿಮಾಲಯಗಳಲ್ಲಿದ್ದಾರೆ. ಈ ಪರ್ವತಗಳಲ್ಲಿ ಅನೇಕ ಪವಿತ್ರ ಸ್ಥಳಗಳಿವೆ.





ಹಿಮಾಲಯಗಳಲ್ಲಿರುವ ಪವಿತ್ರ ಸ್ಥಳಗಳಲ್ಲಿ ಬದರೀನಾಥ್ ಪ್ರಧಾನವಾಗಿದೆ. ವಿಷ್ಣು ಕ್ಷೇತ್ರವಾದ ಈ ಪವಿತ್ರ ಸ್ಥಳದಲ್ಲಿಯೇ ವ್ಯಾಸ ಮಹರ್ಷಿ ಮಹಾ ಭಾರತವನ್ನು ಹೇಳುತ್ತಾ ಇರಲು ವಿಘ್ನೇಶ್ವರನು ಬರೆದನು !




ಬಹಳ ಕಾಲದ ಹಿಂದೆಯೇ ಬದರೀನಾಥದಲ್ಲಿ ವಿಷ್ಣು ಆಲಯ ನಿರ್ಮಿಸಲ್ಪಟ್ಟಿತ್ತು. ಆದರೆ ಅದು ಬೆಟ್ಟದ ಭಾಗವು ಮುರಿದು ಬಿದ್ದು ನಾಶವಾಗಿ ಹೋಯಿತೆಂದು ಭಾವಿಸಲಾಗುತ್ತದೆ. ಆಗ ಇದ್ದ ದೇವರ ವಿಗ್ರಹವು ಅಲಕಾನಂದ ನದಿಯಲ್ಲಿ ಮುಳುಗಿ ಹೋಯಿತು.

ಆದಿ ಶಂಕರರು ಭಾರತ ಯಾತ್ರೆಯ ಸಂದರ್ಭ ದಲ್ಲಿ ಈ ಸ್ಥಳವನ್ನು ಕೂಡಾ ಸಂದರ್ಶಿಸಿದರು. ಧ್ಯಾನದ ಮೂಲಕ ದೇವರ ವಿಗ್ರಹವು ಎಲ್ಲಿರುವು ದೆಂದು ಕಂಡುಹಿಡಿದು ಅದನ್ನು ತಂದು ನೂತನ ವಾಗಿ ನಿರ್ಮಿಸಲ್ಪಟ್ಟ ಆಲಯದಲ್ಲಿ ಪುನಃ ಪ್ರತಿಷ್ಠೆ ಮಾಡಿಸಿ, ಪೂಜಾದಿಗಳಿಗೆ ಏರ್ಪಾಡು ಮಾಡಿದರು.





ಆದಿ ಶಂಕರರು ಮಾಡಿಸಿದ ಏರ್ಪಾಡುಗಳು ಈಗಲೂ ನಡೆಯುತ್ತಿವೆ. ಒಂದು ಕಾಲದಲ್ಲಿ ಕಾಲ್ನಡಿಗೆಯಿಂದ ಈ ಗುಡಿಗೆ ಹೋಗಬೇಕಾದರೆ ಎಷ್ಟೋ ಕಷ್ಟನಷ್ಟಗಳನ್ನು ಇದಿರಿಸಬೇಕಾಗಿತ್ತು. ಆದರೆ ಈಗ ಹೋಗಿಬರಲು ವಾಹನಗಳು ಲಭ್ಯವಾಗುತ್ತವೆ.

ವಿಪರೀತವಾಗಿ ಮಂಜು ಸುರಿಯುವುದರಿಂದ ಸಂವತ್ಸರದಲ್ಲಿ ಆರು ತಿಂಗಳವರೆಗೆ ಈ ದೇವಾಲಯ ಮುಚ್ಚಿಕೊಂಡಿರುತ್ತದೆ. ಆ ಸಮಯದಲ್ಲಿ ಆಲಯದ ಪೂಜಾರಿಗಳು ಅಲ್ಲಿ ಇರಲಿಕ್ಕೂ, ಯಾತ್ರಿಕರು ಬರಲಿಕ್ಕೂ ಸಾಧ್ಯ ವಾಗುವುದಿಲ್ಲ. ಆದರೆ ಆಗ ದೇವರ ಪೂಜೆ ಗಳು ಮಾತ್ರ ನಿಲ್ಲಲಾರವು. ಆ ದೇವ ವಿಗ್ರಹದ ಪ್ರತಿರೂಪಕ್ಕೆ ಜೋಷಿ ಮಠದಲ್ಲಿ ಪೂಜೆಗಳು ನಡೆಯುತ್ತವೆ.





ಆಲಯವನ್ನು ಮುಚ್ಚುವುದಕ್ಕೆ ಮೊದಲು ಪೂಜಾರಿ ಗುಡಿಯೊಳಗಿನ ವಿಗ್ರಹದ ಮುಂದೆ ದೀಪ ಬೆಳಗಿಸುತ್ತಾನೆ. ಬೇಸಗೆ ಪ್ರಾರಂಭವಾದ ಮೇಲೆ ಗುಡಿಯ ಬಾಗಿಲು ತೆರೆಯುವಾಗ ಆ ದೀಪ ಬೆಳಗಿಕೊಂಡೇ ಇರುತ್ತದೆ. ಇದು ಬಹಳ ಕಾಲದಿಂದ ನಡೆದು ಬರುವ ದೊಡ್ಡ ವಿಶೇಷವೆಂದು ಹೇಳುವರು.

ಸಮುದ್ರ ಮಟ್ಟಕ್ಕೆ ೧೧,೭೫೩ ಅಡಿ ಎತ್ತರದಲ್ಲಿ ಕೇದಾರನಾಥ್ ಆಲಯವಿದೆ. ಅದು ಸುಪ್ರಸಿದ್ಧ ವಾದ ಶಿವಕ್ಷೇತ್ರ. ಇಲ್ಲಿಗೆ ಬರುವುದು ಬಹಳ ಕಷ್ಟಸಾಧ್ಯವಾಗಿದ್ದರೂ, ಶತಕಾಂತರಗಳಿಂದ ಅಸಂಖ್ಯಾಕರಾದ ಭಕ್ತರು ಯಾತ್ರೆ ಮಾಡಿ ಕೊಂಡೇ ಇದ್ದಾರೆ.





ಪಂಚಪಾಂಡವರು ದ್ರೌಪದೀ ಸಹಿತರಾಗಿ ಈ ಮಾರ್ಗದ ಮೂಲಕವೇ ಮಹಾ ಪ್ರಸ್ಥಾನ ಸಾಗಿಸಿದರಂತೆ. ದಾರಿಯಲ್ಲಿ ಮೊದಲು ದ್ರೌಪದಿ ಮರಣ ಹೊಂದಿದಳು. ಆಮೇಲೆ ಸಹದೇವನು ಮಾರ್ಗಾಯಾಸ ತಾಳಲಾಗದೆ ಕೇದಾರನಾಥದ ಸಮೀಪದಲ್ಲಿ ಸತ್ತನು.

ರುದ್ರ ಹಿಮಾಲಯವೆಂದು ಹೆಸರು ಪಡೆದ ಈ ಪ್ರಾಂತದಲ್ಲಿ ಶಿವಸ್ವರೂಪವನ್ನು ಸಂದರ್ಶಿಸಿ ಧರ್ಮರಾಜನು ಪೂಜಿಸಿದನಂತೆ. ಆಗಿನಿಂದ ಕೇದಾರನಾಥದಲ್ಲಿ ಶಿವಾರಾಧನೆ ಪ್ರಾರಂಭವಾಗಿ ಈ ದಿನಗಳಲ್ಲಿಯೂ ಸಾಗಿಕೊಂಡಿದೆ.





ಭಕ್ತಿಯಿಂದ ಯಾತ್ರಿಕರು ಮಾರ್ಗ ಮಧ್ಯದಲ್ಲಿರುವ ಕಷ್ಟಗಳನ್ನು ಸಾಹಸದಿಂದ ಅಧಿಗಮಿಸುತ್ತ ಕೇದಾರನಾಥನನ್ನು ದರ್ಶನ ಮಾಡುತ್ತಾರೆ. ಬದರೀನಾಥದಂತೆಯೇ ಕೇದಾರನಾಥನ ಆಲಯ ಕೂಡಾ ಸಂವತ್ಸರದಲ್ಲಿ ಆರು ತಿಂಗಳು ಮುಚ್ಚಲ್ಪಟ್ಟಿರುತ್ತದೆ. ಆ ಸಮಯದಲ್ಲಿ ಆ ದೈವ ವಿಗ್ರಹದ ಪ್ರತಿರೂಪಕ್ಕೆ ಉಖೀ ಮಠದಲ್ಲಿ ಪೂಜೆ ಮಾಡುತ್ತಾರೆ.




ನಮ್ಮ ದೇವಾಲಯಗಳು :

# ಅಮರನಾಥ್

ಒಂದು ದಿನ ಪಾರ್ವತೀದೇವಿ ಶಿವನನ್ನು ನೋಡಿ, "ಪರಮೇಶ್ವರಾ, ನೀವು ಆಗಾಗ ಕಪಾಲ ಹಾರವನ್ನು ಏಕೆ ಧರಿಸುವಿರಿ ?" ಎಂದು ಕೇಳಿದಳು. ಅದನ್ನು ಕೇಳಿ ಪರಮ ಶಿವನು ಸಣ್ಣಗೆ ನಕ್ಕು, "ಅದು ಪೂರ್ವಜನ್ಮದ ನಿನ್ನ ಕಪಾಲವೇ" ಎಂದನು. "ನೀವು ಸಾಯದಿರುವಾಗ ನಾನು ಮಾತ್ರ ಏಕೆ ಸತ್ತೆನು ?" ಎಂದಳು ಆಶ್ಚರ್ಯದಿಂದ ಪಾರ್ವತಿ.

ಪಾರ್ವತಿಗೆ ಜನನ ಮರಣಗಳ ರಹಸ್ಯವನ್ನು ಕುರಿತು ಹೇಳಬೇಕೆಂದು ಶಿವನು ಅಂದು ಕೊಂಡನು. ಅದಕ್ಕಾಗಿ ಕ್ರಿಮಿ ಕೀಟಕಗಳು ಕೂಡಾ ಇಲ್ಲದಿರುವ ರಹಸ್ಯ ಪ್ರದೇಶವು ಬೇಕಾಗಿತ್ತು. ಅಂತಹ ಸ್ಥಳವನ್ನು ಕಂಡು ಹಿಡಿಯಲು ರುದ್ರ ಗಣಗಳು ನಾಲ್ಕು ದಿಕ್ಕುಗಳಿಗೂ ಹೋಗಿ ಹುಡುಕ ತೊಡಗಿದರು.





ಕಡೆಗೆ ಅವರು ಹಿಮಾಲಯಗಳಲ್ಲಿರುವ ಒಂದು ಗುಹೆಯನ್ನು ಕಂಡುಹಿಡಿದರು. ಆ ಗುಹೆಯ ಪರಿಸರದಲ್ಲಿ ಒಂದೇ ಒಂದು ಪ್ರಾಣಿ ಕೂಡಾ ಕಾಣಲಿಲ್ಲ. ಶಿವಪಾರ್ವತಿಯರು ಆ ಕಣಿವೆಯೊಳಗೆ ಪ್ರವೇಶಿಸಿದರು. ಅಲ್ಲಿ ಶಿವನು ಪಾರ್ವತಿಗೆ ಜನನ ಮರಣಗಳ ರಹಸ್ಯವನ್ನು ವಿವರಿಸ ತೊಡಗಿದನು.



ಶಿವನ ಮಾತುಗಳನ್ನು ಕೇಳುತ್ತಿದ್ದ ಪಾರ್ವತಿಗೆ ಒಂದು ದಶೆಯಲ್ಲಿ ಹಾಗೆಯೇ ನಿದ್ದೆ ಬಂತು. ಆದರೂ ತನ್ನ ಮಾತುಗಳಿಗೆ ಯಾರೋ ಹೂಂಗುಟ್ಟುವುದನ್ನು ಗಮನಿಸಿದ ಶಿವನು ಆಶ್ಚರ್ಯಪಟ್ಟನು. ಪಾರ್ವತಿಯನ್ನು ತಟ್ಟಿ ಎಬ್ಬಿಸಿ ತನ್ನ ಮಾತುಗಳಿಗೆ ಹೂಂಗುಟ್ಟಿದ ಪ್ರಾಣಿಯನ್ನು ನಾಲ್ಕು ಸುತ್ತಲೂ ಹುಡುಕಿದನು.

ಶಿವಪಾರ್ವತಿಯರು ಕುಳಿತುಕೊಂಡಿದ್ದ ಬಂಡೆಯ ಕೆಳಗಿದ್ದ ಕನ್ನದೊಳಗಿನಿಂದ ಚಿಕ್ಕದೊಂದು ಗಿಣಿ ರಿವ್ವನೆ ಹೊರಗೆ ಬಂತು. ಆ ಕನ್ನದಲ್ಲಿ ಮೊಟ್ಟೆಯಾಗಿದ್ದು ಆಗ ತಾನೇ ಮೊಟ್ಟೆಯೊಡೆದು ಮರಿಯಾಗಿ ಮಾರ್ಪಟ್ಟ ಆ ಗಿಣಿ ಶಿವನು ಪಾರ್ವತಿಗೆ ಉಪದೇಶಿಸಿದ ರಹಸ್ಯವನ್ನೆಲ್ಲಾ ಕೇಳಿ ಹೊರಗೆ ಹಾರಿಹೋಯಿತು.





ತುಸು ದೂರದಲ್ಲಿದ್ದ ವ್ಯಾಸ ಮಹರ್ಷಿಯ ಕುಟೀರದ ಮುಂದೆ ಕುಳಿತುಕೊಂಡಿದ್ದ ವ್ಯಾಸನ ಪತ್ನಿ ತಲೆಬಾಚಿಕೊಳ್ಳುತ್ತಿರುವಾಗ, ಆ ಗಿಣಿ ಅಲ್ಲಿಗೆ ಹೋಗಿ ಅವಳಲ್ಲಿ ಲೀನವಾಗಿ ಹೋಯಿತು. ಮತ್ತೆ ಕೆಲವು ದಿನಗಳ ಮೇಲೆ ಆ ಗಿಣಿಯೇ ಅವಳ ಹೊಟ್ಟೆಯಲ್ಲಿ ಹುಟ್ಟಿ, ಶುಕನೆಂಬ ಮುನಿಪುಂಗವನಾಗಿ ಕೀರ್ತಿಗಳಿಸಿದನು.

ಶಿವನು ಪಾರ್ವತಿಗೆ ರಹಸ್ಯಗಳನ್ನು ತಿಳಿಯ ಪಡಿಸಿದ ಆ ಗುಹೆ ಪವಿತ್ರ ಸ್ಥಳವಾಯಿತು. ಕೆಲವು ಶತಮಾನಗಳು ಗತಿಸಿದುವು. ಒಂದು ದಿನ ಯುವಕನಾದ ಒಬ್ಬ ಕುರುಬನು ಮಂದೆ ಯಿಂದ ತಪ್ಪಿಸಿಕೊಂಡು ಹೋದ ಕುರಿ ಮರಿ ಯನ್ನು ಓಡಿಸುತ್ತಾ ಆ ಕಡೆಗೇ ಹೋದನು.






ಇದ್ದಕ್ಕಿದ್ದ ಹಾಗೆ ಅವನು ಆ ಗುಹೆಯಲ್ಲಿ ಲಿಂಗ ರೂಪವನ್ನು ನೋಡಿ ಆಶ್ಚರ್ಯ ಪಟ್ಟನು. ಮರುಕ್ಷಣವೇ ಅವನ ಮನಸ್ಸಿನಲ್ಲಿ ಅತ್ಯಂತ ಶಾಂತಿಯೂ, ಭಕ್ತಿಯೂ ಉಂಟಾ ದುವು. ಅವನು ಕಾಶ್ಮೀರ ರಾಜನ ಬಳಿಗೆ ಹೋಗಿ ಆ ವಿಷಯವನ್ನು ತಿಳಿಯಪಡಿಸಿದನು.

ಕಾಶ್ಮೀರ ರಾಜನು ಪರಿವಾರದೊಂದಿಗೆ ಆ ಸ್ಥಳಕ್ಕೆ ಬಂದನು. ಅಲ್ಲಿದ್ದ ಮುನಿಗಳು ರಾಜನಿಗೆ ಆ ಸ್ಥಳದ ಪವಿತ್ರತೆಯನ್ನು ಕುರಿತು ವಿವರವಾಗಿ ತಿಳಿಯಪಡಿಸಿ, ಅದನ್ನು ಹಾಗೆಯೇ ಪ್ರಕೃತಿ ರಕ್ಷಣೆಗೆ ಬಿಟ್ಟುಬಿಡುವಂತೆ ಹೇಳಿದರು.





ಪ್ರತಿವರ್ಷ ಆಗಸ್ಟ್ ತಿಂಗಳಿನಲ್ಲಿ ಅನೇಕ ಮಂದಿ ಯಾತ್ರಿಕರು ಈ ಗುಹೆಗೆ ನಲುವತ್ತಾರು ಕಿಲೋಮೀಟರ್ ದೂರದಲ್ಲಿರುವ ಪಹಾಲ್ಗಮ್ಮಿನ ಹತ್ತಿರ ಗುಂಪುಗೂಡುತ್ತಾರೆ. ಕಾಶ್ಮೀರದ ಧರ್ಮಾರ್ಥ ಸಂಘದ ಅಧಿಪತಿಯ ನಾಯಕತ್ವದಲ್ಲಿ ಭಕ್ತರು ಗುಹೆಯ ಕಡೆಗೆ ಯಾತ್ರೆ ಸಾಗಿಸುವರು.

ಅತ್ಯದ್ಭುತ ಸೌಂದರ್ಯ ನಿಲಯವಾದ ಬೆಟ್ಟಗಳ ಹಾಗು ಕಣಿವೆಗಳ ದಾರಿಯಲ್ಲಿ ತೊರೆಗಳನ್ನೂ, ತಟಾಕಗಳನ್ನೂ ದಾಟುತ್ತ ಭಕ್ತರು ನಾಲ್ಕೈದು ದಿನಗಳು ಪ್ರಯಾಣಮಾಡಿ ಈ ಗುಹೆಯ ಸಮೀಪ ಸೇರಿಕೊಳ್ಳುತ್ತಾರೆ.





ಅಲ್ಲಿ ಪ್ರಕೃತಿ ಸಿದ್ಧವಾದ ಮಂಜಿನ ತುಂಡುಗಳಿಂದ ರೂಪಿತವಾದ ದೊಡ್ಡ ಶಿವಲಿಂಗವನ್ನು ಭಕ್ತರು ಸಂದರ್ಶನ ಮಾಡುತ್ತಾರೆ. ಪ್ರಪ್ರಥಮದಲ್ಲಿ ಭೃಗು ಮಹರ್ಷಿ ಆ ಹಿಮಲಿಂಗವನ್ನು ದರ್ಶಿಸಿದನೆಂದು ಹೇಳುತ್ತಾರೆ. ಆ ದಿನದಿಂದ ತಲೆತಲಾಂತರವಾಗಿ ಸಾವಿರಾರು ಮಂದಿ ಭಕ್ತರು ಪವಿತ್ರವಾದ ಈ ಅಮರನಾಥ್ ಕ್ಷೇತ್ರವನ್ನು ಸಂದರ್ಶನ ಮಾಡುತ್ತಿದ್ದಾರೆ.




ಹೀಗಿರಲು ಪವಿತ್ರವಾದ ಸಮುದ್ರ ಜಲದಲ್ಲಿ ಸ್ನಾನಮಾಡಿ ಶಿವನನ್ನು ಪ್ರಾರ್ಥಿಸಿಕೊಂಡಿರ ಬೇಕೆಂದು ಚಂದ್ರನಿಗೆ ದೇವತೆಗಳು ಸಲಹೆ ಮಾಡಿದರು. ಚಂದ್ರನು ಹಾಗೆಯೇ ಮಾಡಿದುದ ರಿಂದ ಕಳೆದುಕೊಂಡ ಪ್ರಕಾಶವನ್ನು ಮತ್ತೆ ಪಡೆದನು. ಚಂದ್ರನು ಸ್ನಾನಮಾಡಿದ ಆ ಸ್ಥಳಕ್ಕೆ ಪ್ರಭಾಸ ಕ್ಷೇತ್ರವೆಂದು ಹೆಸರು ಬಂತು.

ಚಂದ್ರನು ಸ್ವಲ್ಪಕಾಲ ಪ್ರಭಾಸ ಕ್ಷೇತ್ರದಲ್ಲಿ ಶಿವನನ್ನು ಪೂಜಿಸಿದುದರಿಂದ, ಕ್ರಮವಾಗಿ ಜನರು ಅಲ್ಲಿಯ ಶಿವನನ್ನು ಸೋಮನಾಥನೆಂಬ ಹೆಸರಿನಲ್ಲಿ ಪೂಜಿಸಲು ಪ್ರಾರಂಭಿಸಿದರು.





ಪ್ರಭಾಸ ಕ್ಷೇತ್ರದಲ್ಲಿ ಮೊತ್ತಮೊದಲು ಯಾವಾಗ ಶಿವಾಲಯವು ನಿರ್ಮಿಸಲ್ಪಟ್ಟಿತೆಂಬುದು ನಮಗೆ ತಿಳಿಯದು. ಕ್ರಿ. ಪ. ೬–೭ನೆಯ ಶತಮಾನ ಗಳಲ್ಲಿ ಆ ಪ್ರಾಂತವನ್ನು ಪರಿಪಾಲಿಸಿಕೊಂಡಿದ್ದ ನಾಲ್ಕನೆಯ ಧಾರಾಸೇನನ ಕಾಲದಲ್ಲಿ ಆ ಗುಡಿ ಶಿಥಿಲಾವಸ್ಥೆಯಲ್ಲಿದ್ದುದರಿಂದ ಆ ರಾಜನು ಅಲ್ಲಿ ನೂತನ ಆಲಯವನ್ನು ಕಟ್ಟಿಸಿದನು.

೯ನೆಯ ಶತಮಾನದಲ್ಲಿ ಆ ಶಿವಾಲಯದ ಪುನರ್ನಿರ್ಮಾಣವಾಯಿತು. ಆಗಿನಿಂದ ಅದು ಸುಪ್ರಸಿದ್ಧ ಯಾತ್ರಾಸ್ಥಳವಾಗಿ, ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ಸಂದರ್ಶನಮಾಡ ತೊಡಗಿದರು. ರಾಜರೂ, ಸಾಮಾನ್ಯ ಜನರೂ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಬಂಗಾರದ ಆಭರಣಗಳನ್ನು ಆಲಯಕ್ಕೆ ಸಮರ್ಪಿಸುತ್ತ ಬಂದರು. ಆಲಯದ ಸುತ್ತುಮುತ್ತಲೂ, ಅಂಗಡಿಗಳೂ ವಸತಿ. ಗೃಹಗಳೂ ಏರ್ಪಟ್ಟವು.





ಹನ್ನೊಂದನೇ ಶತಮಾನದಲ್ಲಿ ಗಜನೀ ಮಹಮ್ಮದ್ ಭಾರತ ದೇಶದ ಮೇಲೆ ದಂಡಯಾತ್ರೆ ಮಾಡಿದನು. ಸೋಮನಾಥ ದೇವಾಲಯದಲ್ಲಿರುವ ರತ್ನರಾಶಿಗಳನ್ನು ಕುರಿತು ಕೇಳಿದ್ದ ಮಹಮ್ಮದ್. ಅದನ್ನು ಮುತ್ತಲು ತನ್ನ ಸೈನ್ಯವನ್ನು ಆಲಯದ ಕಡೆಗೆ ನಡೆಸಿದನು. ಇದು ಅಲ್ಲಿಯ ಪೌರರಿಗೆ ಗೊತ್ತಾಯಿತು.

ಆಲಯದ ರಕ್ಷಣೆಗಾಗಿ ಆ ಪ್ರಾಂತದ ಪಾಲಕನು ತನ್ನ ಸೈನಿಕರನ್ನು ಕಳುಹಿಸಿಕೊಟ್ಟನು. ಆದರೂ ಅಸಂಖ್ಯಾಕರಾದ ಗಜನೀ ಮಹಮ್ಮದನ ಸೈನ್ಯವನ್ನು ಬಹಳ ಹೊತ್ತು ತಡೆಯಲಾಗಲಿಲ್ಲ. ಸಾಮಾನ್ಯ ಪೌರರು ಕೂಡಾ ದುರಾಕ್ರಮಣದಾರರೊಂದಿಗೆ ಹೋರಾಡಿ ಪ್ರಾಣ ಕಳೆದುಕೊಂಡರು.





ದೇವಾಲಯದೊಳಗಿನ ಸ್ವರ್ಣಾಭರಣಗಳನ್ನು, ರತ್ನಗಳನ್ನು ತೆಗೆದುಕೊಂಡು ಮೂಲ ವಿಗ್ರಹವನ್ನು ಬಿಟ್ಟುಬಿಡುವಂತೆ ಪೂಜಾರಿಗಳೂ ಭಕ್ತರೂ ದುರಾಕ್ರಮಣದಾರರೊಂದಿಗೆ ಪ್ರಾರ್ಥಿಸಿದರು. ಆದರೂ ಗಜನೀ ಮಹಮ್ಮದನ ಸೈನಿಕರು ಅವರ ಮಾತನ್ನು ಅಲಕ್ಷ್ಯಮಾಡಿ ನಿರಾಯುಧರಾದ ಅವರೆಲ್ಲರನ್ನೂ ನಿರ್ದಾಕ್ಷಿಣ್ಯವಾಗಿ ಕೊಂದುಬಿಟ್ಟರು.

ಐವತ್ತು ಸಾವಿರ ಮಂದಿಗಳನ್ನು ಕೊಂದ ಮೇಲೆಯೇ ಮಹಮ್ಮದನ ಸೈನಿಕರಿಗೆ ಆಲಯದೊಳಗೆ ಪ್ರವೇಶಿಸಲು ಸಾಧ್ಯವಾಯಿತು. ಅವರು ಆಲಯವನ್ನೂ, ಆಲಯದೊಳಗಿನ ವಿಗ್ರಹವನ್ನೂ ನಾಶಮಾಡಿ, ದೇವಾಲಯದೊಳಗಿನಿಂದ ತಾವು ಅಂದುಕೊಂಡುದಕ್ಕಿಂತಲೂ ಹೆಚ್ಚಿಗೆ ಧನರಾಶಿಗಳನ್ನು ಕೊಳ್ಳೆ ಹೊಡೆದು ಕೊಂಡು ಹೋದರು.







ಆ ಮುತ್ತಿಗೆಯ ಮೇಲೆ ನಿರ್ಮಿಸಲ್ಪಟ್ಟ ಆಲಯವು ಹದಿಮೂರನೇ ಶತಮಾನದಲ್ಲಿ ಅಲ್ಲಾ ಉದ್ದೀನ್ ಖಿಲ್ಜಿಯಿಂದ ನಾಶವಾಯಿತು. ಆ ಮೇಲೆ ನಿರ್ಮಿಸಲ್ಪಟ್ಟ ದೇವಾಲಯವು ಹದಿನೆಂಟನೆಯ ಶತಮಾನದಲ್ಲಿ ಔರಂಗಜೇಬನ ಆಣತಿಯಂತೆ ನೆಲಮಟ್ಟ ಮಾಡಲ್ಪಟ್ಟಿತು. ಆದಾದನಂತರ ಇಂದೋರ್ ರಾಣಿ ಅಹಲ್ಯಾಬಾಯಿ ಮತ್ತೆ ಅದನ್ನು ನಿರ್ಮಿಸಿದಳು. ಇತ್ತೀಚೆಗೆ ನಿರ್ಮಿಸಲಾದ ಹೊಸ ಆಲಯಕ್ಕೆ ೧೯೫೧ ನೇ ಸಂವತ್ಸರದಲ್ಲಿ ಪ್ರಾರಂಭೋತ್ಸವ ನಡೆಯಿತು.



ನಮ್ಮ ದೇವಾಲಯಗಳು:

## ಮೀನಾಕ್ಷಿ ಆಲಯ

ಒಂದು ಕಾಲದಲ್ಲಿ ದೇವೇಂದ್ರನು ಭೂಲೋಕಕ್ಕೆ ಬಂದು ಸುಂದರವಾದೊಂದು ಕಾಡಿನೊಳಗೆ ಹೋಗುತ್ತಾ, ಪ್ರಶಾಂತವಾದೊಂದು ಸ್ಥಳವನ್ನು ನೋಡಿ ಅಲ್ಲಿ ಕುಳಿತು ಪರಮೇಶ್ವರನನ್ನು ಧ್ಯಾನ ಮಾಡಿದನು. ಆ ರೀತಿಯಲ್ಲಿ ಇಂದ್ರನು ಆ ಸ್ಥಳಕ್ಕೆ ಒಂದು ಪವಿತ್ರತೆಯನ್ನು ಬರಿಸಿ, ಅಲ್ಲಿಂದ ಹೊರಟು ಹೋದನು.

ಅನಂತರ ಸ್ವಲ್ಪಕಾಲದ ಮೇಲೆ, ಒಬ್ಬ ರಾಜನು ಬೇಟೆಯಾಡಲು ಆ ಕಾಡಿಗೆ ಪ್ರವೇಶಿಸಿ, ಇಂದ್ರನು ಕುಳಿತ ಜಾಗೆಗೆ ಬಂದ ಕೂಡಲೇ ಅವನಿಗೆ ಬೇಟೆಯ ಉತ್ಸಾಹವು ತಗ್ಗಿತು. ಅವನ ಮನಸ್ಸು ಶಾಂತಿಯಿಂದಲೂ ದೈವ ಭಕ್ತಿಯಿಂದಲೂ ತುಂಬಿತು. ತನ್ನ ರಾಜಧಾನಿಯನ್ನು ಆ ಸ್ಥಳಕ್ಕೆ ತರಬೇಕೆಂಬ ಹೊಸ ಆಲೋಚನೆ ಅವನಿಗೆ ಬಂದಿತು.





ಆ ದಿನ ರಾತ್ರಿ ಆ ರಾಜನಿಗೆ ಬಂದ ಕನಸಿನಲ್ಲಿ, ತಾನು ನೋಡಿದ ಅಡವಿ ಪ್ರಾಂತದಲ್ಲಿ ಜೇನಿನ ಬಿಂದುಗಳು ಬೀಳುವುದನ್ನೂ, ಅವುಗಳನ್ನು ಶಿವನೇ ಹಾಗೆ ಬೀಳಿಸುವುದನ್ನೂ ನೋಡಿದನು. ಮರುದಿನ ಬೆಳಗಾದ ಮೇಲೆ ರಾಜನು ತನ್ನ ರಾಜಧಾನಿಯನ್ನು ಅಲ್ಲಿಗೆ ಮಾರ್ಪಡಿಸಲು ತೊಡಗಿ, ನೂತನವಾದ ಆ ರಾಜಧಾನೀ ನಗರಕ್ಕೆ ಮಧುರಾಪುರವೆಂದು ನಾಮಕರಣ ಮಾಡಿದನು.



ಕೆಲವು ದಿನಗಳ ಮೇಲೆ ಆ ರಾಜನಿಗೆ ಒಬ್ಬಳು ಮಗಳು ಹುಟ್ಟಿದಳು. ಮೀನುಗಳಂತಹ ಅಂದವಾದ ಕಣ್ಣುಗಳುಳ್ಳ, ಅಪೂರ್ವ ಸೌಂದರ್ಯ ತುಂಬಿದ ತನ್ನ ಆ ಮಗಳಿಗೆ ಮೀನಾಕ್ಷಿ ಎಂದು ಹೆಸರಿಟ್ಟನು. ರಾಜನಿಗೆ ಅವಳು ಏಕೈಕ ಸಂತಾನವಾಗಿದ್ದಳು.

ಯುವರಾಣಿ ಮೀನಾಕ್ಷಿ ಬಹಳ ಬೇಗದಲ್ಲೇ ರಾಜೋಚಿತವಾದ ವಿದ್ಯೆಗಳನ್ನೆಲ್ಲಾ ಕಲಿತು ಪಾರಂಗತಳಾದಳು. ಅವಳಿಗೆ ಯುಕ್ತ ವಯಸ್ಸು ಬಂದಾಗ ರಾಜನು ಅವಳಿಗೆ ಪಟ್ಟಾಭಿಷೇಕವನ್ನು ಮಾಡಿದನು. ತಂದೆಯ ಅನಂತರ ಯುವರಾಣಿ ಮೀನಾಕ್ಷಿದೇವಿ ಪ್ರಜಾನುರಂಜಕಳಾಗಿ ಪರಿಪಾಲನೆ ಮಾಡಿಕೊಂಡಿದ್ದಳು.






ಅವಳ ವೈಭವವನ್ನು ನೋಡಿ ಅಕ್ಕಪಕ್ಕದ ರಾಜರು ಅಸೂಯೆ ಪಡಲು ತೊಡಗಿದರು. ಮೊದಲು ಒಬ್ಬಳು ಹೆಂಗಸು ರಾಜ್ಯಪಾಲನೆ ಹೇಗೆ ಮಾಡುತ್ತಾಳೆಂದು ಸಂದೇಹ ಪಟ್ಟವರೆಲ್ಲ ಅವಳ ಶಕ್ತಿ ಸಾಮರ್ಥ್ಯಗಳನ್ನು ಕೀರ್ತಿಸತೊಡಗಿದರು. ಇದನ್ನೆಲ್ಲ ನೋಡಿ ಅಕ್ಕಪಕ್ಕದ ರಾಜರು ತಂತ್ರಮಾಡಿ ಒಮ್ಮೆಗೇ ದಂಡೆತ್ತಿ ಬಂದು ಮಧುರೆಯನ್ನು ಮುತ್ತಿದರು.

ಯುವರಾಣಿ ಮೀನಾಕ್ಷಿ ತನ್ನ ಸೇನೆಗೆ ತಾನೇ ನಾಯಕಿಯಾಗಿದ್ದು ಶತ್ರು ಸೇನೆಯನ್ನು ಇದಿರಿಸಿದಳು. ಯುದ್ಧ ರಂಗದಲ್ಲಿ ಅವಳು ಮಿಂಚಿನ ವೇಗದಲ್ಲಿ ಧಾವಿಸುತ್ತ ಬೀಸುವ ಖಡ್ಗಾಘಾತಗಳಿಗೆ ಯಾರೂ ನಿಲ್ಲಲಾಗದೆ ಹೋದರು. ದೊಡ್ಡ ಸುಳಿಗಾಳಿಗೆ ಉದುರುವ ಒಣತರಗೆಲೆಗಳಂತೆ ಶತ್ರು ಸೇನೆಗಳು ಚೆಲ್ಲಾಪಿಲ್ಲಿಯಾದವು.





ಮೀನಾಕ್ಷಿದೇವಿ ಶತ್ರು ಸೇನೆಯನ್ನು ಅಟ್ಟುತ್ತಾ ಹೋಗಿ ನಗರದ ಎಲ್ಲೆಯಲ್ಲಿದ್ದ ಅಡವಿ ಪ್ರಾಂತವನ್ನು ಸೇರಿದಳು. ಅಲ್ಲಿ ಅವಳಿಗೊಬ್ಬ ಅಪರಿಚಿತ ವ್ಯಕ್ತಿ ಕಂಡು ಬಂದನು. ಆಗ ಅವಳ ಕಣ್ಣಿಗೆ ಮಿಂಚು ಹೊಳೆದಂತಾಗಿ, ಕುದುರೆಯನ್ನು ಅಲ್ಲೇ ನಿಲ್ಲಿಸಿದಳು.

ಅಲ್ಲಿ ಅವಳಿಗೆ ಕಂಡವನು ಸಾಕ್ಷಾತ್ ಈಶ್ವರನೇ. ಶಿವದರ್ಶನವಾದ ಕೂಡಲೇ ಅವಳು ಕೂಡಾ ತಾನು ಪಾರ್ವತಿಯ ಅವತಾರವೆಂಬುದನ್ನು ತಿಳಿದುಕೊಂಡಳು. ಆಮೇಲೆ ಬೇಗದಲ್ಲೇ ಮೀನಾಕ್ಷೀ ಸುಂದರೇಶ್ವರರ ವಿವಾಹವು ಬಹು ವೈಭವದಿಂದ ನೆರವೇರಿತು.





ಯುವರಾಣಿ ಮೀನಾಕ್ಷಿ ಪಾರ್ವತಿದೇವಿಯ ಅವತಾರವೆಂದು ತಿಳಿದ ಕೂಡಲೇ ಪ್ರಜೆಗಳೆಲ್ಲಾ ಅವಳನ್ನು ಪೂಜಿಸಲು ತೊಡಗಿದರು. ಅವಳು ಭೌತಿಕ ಕಾಯವನ್ನು ವಿಸರ್ಜಿಸಿದ ಮೇಲೆ ಅವಳ ರೂಪದ ವಿಗ್ರಹವನ್ನು ತಯಾರಿಸಿ ಅರ್ಚಿಸ ತೊಡಗಿದರು. ಆಲಯದಲ್ಲಿ ದೇವಿಯ ವಿಗ್ರಹದ ಪಕ್ಕದಲ್ಲಿ ಸುಂದರೇಶ್ವರನ ವಿಗ್ರಹವನ್ನೂ ಪ್ರತಿಷ್ಠೆ ಮಾಡಿದರು.

ಮಧುರೆಯ ಮೀನಾಕ್ಷಿ ದೇವಾಲಯವು ಬಹಳ ದೊಡ್ಡದು. ಎತ್ತರವಾದ ಗೋಪುರಗಳಿಂದ, ಸಾವಿರ ಕಂಬಗಳ ಮಂಟಪಗಳಿಂದ ಸುಪ್ರಸಿದ್ಧ ವಾದ ಅದ್ಭುತ ಶಿಲ್ಪಗಳಿಂದ ಈ ಆಲಯವು ಬೆಳಗಿಕೊಂಡಿದೆ.





ನಮ್ಮ ದೇಶದಲ್ಲಿ ಮಾತ್ರವಲ್ಲದೆ ಪ್ರಪಂಚ ದೊಳಗಿನ ಅತಿ ಪ್ರಾಚೀನ ನಗರಗಳಲ್ಲಿ ಮಧುರೆಯೂ ಒಂದೆಂದು ಹೆಸರು ಪಡೆದಿದೆ. ನಗರದ ಮಧ್ಯದಲ್ಲಿ ಮೀನಾಕ್ಷಿ ಆಲಯವಿದೆ. ಸಂವತ್ಸರದುದ್ದಕ್ಕೂ ದೇಶದ ನಾಲ್ಕು ಮೂಲೆ ಗಳಿಂದಲೂ ಯಾತ್ರಿಕರು ಬರುತ್ತಾ ಇರುವರು. ಭಕ್ತರ ಭಕ್ತಿಗೀತಗಳಿಂದ, ಪ್ರಾರ್ಥನೆಗಳಿಂದ ದೇವಾಲಯವು ಯಾವಾಗಲೂ ಮಾರ್ಮೊಳಗಿ ಕೊಂಡಿರುತ್ತದೆ.




ನಮ್ಮ ದೇವಾಲಯಗಳು :

## ಕಾಶೀ

ಪ್ರಪಂಚದೊಳಗಿನ ಅತಿ ಪ್ರಾಚೀನ ನಗರಗಳಲ್ಲಿ ಮುಖ್ಯವಾದುದು ಕಾಶೀ. ಕಾಶೀ ಅಂದರೆ ಪ್ರಕಾಶಮಾನವಾದ ಸ್ಥಳವೆಂದೂ, ಕಾಶ ಪುಷ್ಪಗಳು ಹೆಚ್ಚಾಗಿರುವ ಪ್ರದೇಶವೆಂದೂ ಅರ್ಥ. ವರುಣ ಮತ್ತು ಅಸಿ ಎಂಬ ಗಂಗೆಯ ಎರಡು ಉಪನದಿಗಳ ನಡುವೆ ಇರುವುದರಿಂದ ಕಾಶಿಯನ್ನು ವಾರಣಾಸಿ ಎಂತಲೂ ಹೇಳುತ್ತಾರೆ.

ಅತಿ ಪ್ರಾಚೀನ ಕಾಲದಿಂದ ಇಲ್ಲಿ ಶಿವಾಲಯ ವಿದ್ದುದರಿಂದ ಈ ನಗರವು ಪವಿತ್ರವಾದುದೆಂದು ಹೆಸರು ಪಡೆದಿದೆ. ಇಲ್ಲಿ ಪ್ರಪ್ರಥಮವಾಗಿ ಶಿವಾಲಯವನ್ನು ನಿರ್ಮಿಸಿದವರು ಯಾರು ಎಂಬುದು ಚರಿತ್ರೆಗೆ ನಿಲುಕದ ವಿಷಯವಾಗಿದೆ.





ಎಷ್ಟೋ ಕಾಲದ ಕೆಳಗೆ ದಿವೋದಾಸನೆಂಬ ರಾಜನು ಕಾಶಿಯನ್ನು ಪರಿಪಾಲಿಸಿದ್ದಾನೆ. ಅವನು ಪ್ರಜೆಗಳ ಕ್ಷೇಮವನ್ನೇ ಪರಮಾರ್ಥ ಧರ್ಮವಾಗಿರಿಸಿಕೊಂಡು ಪರಿಪಾಲನೆ ಮಾಡುವವನು. ಆದರೂ ಶಿವನ ಮೇಲೆ ತೋರಿಸ ಬೇಕಾದಷ್ಟು ಭಕ್ತಿಶ್ರದ್ಧೆ ತೋರಿಸಲು ಮರೆತನು. ಆಸ್ಥಾನದಲ್ಲಿರುವ ಹಿರಿಯರಾರೂ ಆ ತಪ್ಪನ್ನು ಎತ್ತಿ ರಾಜನಿಗೆ ತೋರಿಸಲಿಲ್ಲ.




ಈ ಬಗೆಯ ರಾಜನ ಉದಾಸೀನ ಭಾವವು ಶಿವನಿಗೆ ರಾಜನ ಮೇಲೆ ಇಷ್ಟವಿಲ್ಲದಂತೆ ಮಾಡಿತು. ಆದರೂ ಶಿವನು ರಾಜನಿಗೇನೂ ಹಾನಿ ಮಾಡದೆ ನಗರವನ್ನು ಬಿಟ್ಟು ಹೊರಟು ಹೋದನು. ಈ ಸಂಗತಿ ಶಿವಭಕ್ತರ ಹೊರತು ಯಾರಿಗೂ ತಿಳಿಯದು. ರಾಜನು ಎಂದಿನಂತೆ ಪ್ರಜೆಗಳಿಗೆ ಉಪಯೋಗವಾಗುವ ಕಾರ್ಯಗಳಲ್ಲಿ ಮಗ್ನನಾಗಿದ್ದನು.

ಕೆಲವು ವರ್ಷ ಕಳೆದ ಮೇಲೆ ಶಿವನಿಗೆ ತಾನಿಲ್ಲದ ಕಾಶೀ ನಗರವು ಹೇಗಿರುವುದೋ ನೋಡಬೇಕೆಂಬ ಕುತೂಹಲವಾಯಿತು. ನಗರವು ಹೇಗಿರುವುದೆಂದು ನೋಡಿ ಬರಲು ತನ್ನ ಕೆಲವು ಗಣಗಳನ್ನು ಕಳುಹಿಸಿದನು. ರುದ್ರ ಗಣಗಳು ನಗರವನ್ನು ಸೇರಿ, ಅಲ್ಲಿಯ ಅಂದ ಚೆಂದಗಳಿಗೆ ಮಾರುಹೋಗಿ ಗಂಗಾ ತೀರದಲ್ಲಿಯೇ ಉಳಿದುಬಿಟ್ಟರು.





ಒಂದು ದಿನ ವಿಷ್ಣು ಬ್ರಾಹ್ಮಣನ ರೂಪದಲ್ಲಿ ದಿವೋದಾಸನ ಬಳಿಗೆ ಬಂದು, " ಮನುಷ್ಯನು ಕೇವಲ ಒಳ್ಳೆಯವನೇ ಆಗಿದ್ದರೆ ಸಾಲದು. ಅವನಿಗೆ ಆಧ್ಯಾತ್ಮ ಚಿಂತನೆಯೂ, ಭಕ್ತಿಯೂ ಇರಬೇಕು. ಅದಕ್ಕಾಗಿ ನೀನು ಶಿವನನ್ನು ಆರಾಧಿಸಬೇಕು " ಎಂದು ತಿಳಿ ಹೇಳಿದನು.

ರಾಜನು ತನ್ನ ಆಧ್ಯಾತ್ಮಿಕ ಕರ್ತವ್ಯವನ್ನು ನೆರವೇರಿಸಲು ಸಿದ್ಧನಾಗಿ ಶಿವನಿಗೆ ಬ್ರಹ್ಮಾಂಡವಾದೊಂದು ಆಲಯವನ್ನು ನಿರ್ಮಿಸಿ, ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು. ಈ ಪರಿಣಾಮಕ್ಕೆ ಆನಂದಿತನಾದ ಶಿವನು ಮತ್ತೆ ಕಾಶೀ ನಗರಕ್ಕೆ ಬಂದನು.







ಕಾಲ ಪ್ರವಾಹದಲ್ಲಿ ಹಳೆಯ ಶಿವಾಲಯವು ಕಣ್ಮರೆಯಾಗಿ ಹೋಯಿತು. ಪ್ರಸ್ತುತ ಅಲ್ಲಿರುವ ಶಿವಾಲಯವು ಇಂದೋರನ್ನು ಪರಿಪಾಲಿಸಿದ ರಾಣಿ ಅಹಲ್ಯಾಬಾಯಿ ನಿರ್ಮಿಸಿದ್ದಾಗಿದೆ. ಆಲಯದ ಗೋಪುರದ ಮೇಲೆ ಬಂಗಾರದ ಕವಚವನ್ನು ಪಂಜಾಬನ್ನು ಪರಿಪಾಲಿಸಿದ ರಾಜಾ ರಂಜಿತ್‌ಸಿಂಗ್ ತೊಡಿಸಿದನು.

ವಿಶ್ವನಾಥ, ವಿಶ್ವೇಶ್ವರ ಎಂದು ಕರೆಯಲ್ಪಡುವ ಈ ಆಲಯದ ದೇವನನ್ನು ದರ್ಶಿಸಲು ದಿನಾ ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ಬರುತ್ತಾ ಇರುವರು. ಮುಖ್ಯವಾದ ಪುಣ್ಯ ದಿನಗಳಲ್ಲಿ ಈ ಆಲಯದಲ್ಲಿ ಶಿವನಿಗೆ ಪ್ರತ್ಯೇಕ ಪೂಜೆಗಳೂ, ಉತ್ಸವಗಳೂ ನಡೆಯುತ್ತಾ ಇರುತ್ತವೆ.





ವಾರಣಾಸಿಯ ಸಮೀಪದ ಗಂಗಾ ನದಿಯಲ್ಲಿ ಸ್ನಾನ ಮಾಡುವುದನ್ನು ಭಕ್ತರು ಅತ್ಯಂತ ಪವಿತ್ರವೆಂದು ಭಾವಿಸುವರು. ಕೆಲವು ಭಕ್ತರು ಕಾಶಿಯಲ್ಲಿ ಪ್ರಾಣ ಬಿಡುವುದನ್ನು ಪುಣ್ಯವೆಂದು ಭಾವಿಸುವರು. ಸತ್ತುಹೋದವರನ್ನು ಕಾಶಿಯಲ್ಲಿ ದಹನಮಾಡುವುದು ಪುಣ್ಯವೆಂಬ ವಿಶ್ವಾಸ ಹಲವರಲ್ಲಿದೆ. ಸತ್ತವರ ಅಸ್ಥಿಗಳನ್ನು ಕೂಡಾ ಗಂಗೆಯಲ್ಲಿ ಬೆರೆಸುತ್ತಾರೆ.

ಕಾಶೀ ನಗರವು ನಮ್ಮ ಪುರಾಣ ಕಥೆಗಳಲ್ಲಿ ಎಷ್ಟೋ ಕಡೆ ಸಂಬಂಧಿಸಿಕೊಂಡಿರುತ್ತದೆ. ಹರಿಶ್ಚಂದ್ರನು ಸ್ಮಶಾನದ ಕಾವಲಿಗನಾಗಿದ್ದಾಗ, ಅವನ ಹೆಂಡತಿ ಸತ್ತ ಕುಮಾರನನ್ನು ಇಲ್ಲಿಯ ಸ್ಮಶಾನಕ್ಕೇ ತಂದಳೆಂದು ಹೇಳುತ್ತಾರೆ.






ಯುಗೆ ಯುಗಗಳಿಂದ ಅಸಂಖ್ಯ ಭಕ್ತರು ಕಾಶಿಯನ್ನು ಸಂದರ್ಶಿಸಿದ್ದಾರೆ. ಗೌತಮಬುದ್ಧ, ಆದಿಶಂಕರ, ಮಧ್ವ, ರಾಮಾನುಜ, ಕಬೀರ, ನಾನಕ್, ತುಲಸೀದಾಸ, ಚೈತನ್ಯಪ್ರಭು ಮೊದಲಾದ ಎಷ್ಟೋ ಮಂದಿ ಮಹನೀಯರು ಕಾಶಿಯನ್ನು ಸಂದರ್ಶಿಸಿದ್ದಾರೆ. ಸಾವಿರಾರು ಸಂವತ್ಸರಗಳ ಚರಿತ್ರೆಯ ಕಾಶೀ ನಗರವು ಇಂದಿಗೆ ಕೂಡಾ ನಿತ್ಯ ನೂತನವಾಗಿ ಬೆಳಗಿಕೊಂಡಿವೆ.



**ನಮ್ಮ ದೇವಾಲಯಗಳು:**

# ಕೋಣಾರ್ಕ

ಚಂದ್ರಭಾಗಾನದಿ ಸಮುದ್ರದಲ್ಲಿ ಸಂಗಮಿಸುವ ಸ್ಥಳದಲ್ಲಿ ಬೆಳಗುವ ಸೂರ್ಯ ದೇವಾಲಯವು ಸುಪ್ರಸಿದ್ಧವಾಗಿದೆ. ಶ್ರೀ ಕೃಷ್ಣನ ಕುಮಾರನಾದ ಸಾಂಬನು ಸೂರ್ಯಭಗವಾನನನ್ನು ಧ್ಯಾನಿಸುತ್ತ, ಇಲ್ಲಿ ಅನೇಕ ವರ್ಷಗಳವರೆಗೆ ಇದ್ದನೆಂದು ಪುರಾಣಗಳು ಹೇಳುತ್ತವೆ.

ಹದಿಮೂರನೇ ಶತಮಾನದಲ್ಲಿ ಕಳಿಂಗ ರಾಜ್ಯವನ್ನು ಪರಿಪಾಲಿಸಿದ ನರಸಿಂಹದೇವನೆಂಬ ರಾಜನು ಈ ಸುಂದರ ಪ್ರದೇಶವನ್ನು ಸಂದರ್ಶಿಸಿ, ಅಲ್ಲಿ ಸೂರ್ಯ ದೇವಾಲಯವನ್ನು ನಿರ್ಮಿಸಬೇಕೆಂದು ಸಂಕಲ್ಪಿಸಿಕೊಂಡನು. ಅದಕ್ಕಾಗಿ ತನ್ನ ರಾಜ್ಯದೊಳಗಿನ ಹನ್ನೆರಡು ಸಾವಿರ ಮಂದಿ ಶಿಲ್ಪಿಗಳನ್ನು ಬರಮಾಡಿಸಿದನು.





ದೊಡ್ಡ ಶಿಲ್ಪಕಾರನೂ, ವಾಸ್ತು ಶಾಸ್ತ್ರಜ್ಞನೂ ಆದ ವಿಷ್ಣುಮೋಹರಾಣಾನ ನಾಯಕತ್ವದಲ್ಲಿ ಆಲಯ ನಿರ್ಮಾಣವು ಪ್ರಾರಂಭವಾಯಿತು. ದೂರ ದೂರ ಪ್ರಾಂತಗಳಿಂದ ದೊಡ್ಡ ದೊಡ್ಡ ಬಂಡೆಗಳೂ ಕಲ್ಲುಗಳೂ ಅಲ್ಲಿಗೆ ಸಾಗಿಸಲ್ಪಟ್ಟವು. ಶಿಲ್ಪ ಕಲೆಯಲ್ಲಿ ಪ್ರತ್ಯೇಕ ಸ್ಥಾನ ಅಲಂಕರಿಸಲಿರುವ ಆ ದೇವಾಲಯದ ನಿರ್ಮಾಣವನ್ನು ಸಕಾಲದಲ್ಲಿ ಪೂರ್ತಿಗೊಳಿಸಲು ಶಿಲ್ಪಿಗಳು ರಾತ್ರೀ ಹಗಲೂ ಕೆಲಸ ಮಾಡತೊಡಗಿದರು.



ಸೂರ್ಯಭಗವಾನನ ರಥದ ಹೋಲಿಕೆಯಲ್ಲಿ, ಬೃಹ್ಮಾಂಡವಾದ ಚಕ್ರಗಳಿಂದ ದೊಡ್ಡ ಕುದುರೆಗಳನ್ನು ಹೂಡಿದ ವಿಧದಲ್ಲಿ ಆಲಯ ನಿರ್ಮಾಣವು ಪೂರ್ತಿಯಾಗುತ್ತ ಬಂದಿತು. ವರ್ಷದುದ್ದಕ್ಕೂ ಸೂರ್ಯಕಿರಣಗಳು ದೇವಾಲಯಕ್ಕೆ ಬೀಳುವ ರೀತಿಯಲ್ಲಿ ಗುಡಿ ಈಶಾನ್ಯಾಭಿಮುಖವಾಗಿ ನಿರ್ಮಿಸಲ್ಪಟ್ಟಿತ್ತು.

ಶಿಲ್ಪಿ ವಿಷ್ಣುಮೋಹರಾಣಾನಿಗೆ ಸ್ವಂತ ಗ್ರಾಮದಲ್ಲಿ ಹದಿನಾಲ್ಕು ವಯಸ್ಸಿನ ಧರ್ಮಪಾದನೆಂಬ ಮಗನಿದ್ದನು. ಅವನು ತಾಯಿಯ ಬಳಿಯಲ್ಲಿ ಬೆಳೆಯುತ್ತ, ಶಿಲ್ಪ ಶಾಸ್ತ್ರಕ್ಕೆ ಸಂಬಂಧಿಸಿದ, ತಂದೆಯ ತಾಳಪತ್ರ ಗ್ರಂಥಗಳನ್ನು ಬಹಳ ಶ್ರದ್ಧೆಯಿಂದ ಪಠಿಸುತ್ತಿದ್ದನು. ಒಂದು ದಿನ ಧರ್ಮಪಾದನಿಗೆ ತಂದೆಯನ್ನು ನೋಡಬೇಕೆಂಬ ಆಸೆಯಾಗಿ, ತಾಯಿಯ ಅನುಮತಿ ಪಡೆದು, ಕೋಣಾರ್ಕಕ್ಕೆ ಹೊರಟನು.





ಧರ್ಮಪಾದನು ಕಾಲ್ನಡಿಗೆಯಿಂದಲೇ ಕೋಣಾರ್ಕವನ್ನು ತಲುಪಿದನು. ಮಗನನ್ನು ನೋಡಿದ ಕೂಡಲೇ ತಂದೆ ಆತ್ಮಾನಂದದಿಂದ ಆಲಿಂಗಿಸಿಕೊಂಡನು. ಅದ್ಭುತವಾದ ಶಿಲ್ಪ ಕಲಾ ಮಂದಿರವನ್ನು ನೋಡಿ ಧರ್ಮಪಾದನಿಗೆ ಆನಂದಾಶ್ಚರ್ಯಗಳು ಒಟ್ಟಿಗೇ ಆಯಿತು.

ಆಲಯ ನಿರ್ಮಾಣವು ಪೂರ್ತಿಯಾಯಿತೆಂದು ಯಾರೂ ಸಂತೋಷಪಡಲಿಲ್ಲ. ಅದರ ಬದಲಿಗೆ ಶಿಲ್ಪಿಗಳೆಲ್ಲರೂ ವಿಷಾದದ ಮುಖದಲ್ಲಿರುವುದನ್ನು ನೋಡಿ, ಧರ್ಮಪಾದನು ಕಾರಣವೇನೆಂದು ಕೇಳಿದನು. ಗೋಪುರಶಿಖರವನ್ನು ಕ್ರಮ ತಪ್ಪದೆ ಕೂಡಿಸುವುದರಲ್ಲಿ ಶಿಲ್ಪಿಗಳು ಮರೆತಿರುವರೆಂದೂ, ಅದಕ್ಕೇ ಎಲ್ಲರೂ ಚಿಂತಿಸುತ್ತಿರುವರೆಂದೂ ಶಿಲ್ಪಿಗಳಿಂದ ತಿಳಿಯಿತು.





ಆಲಯವು ಪೂರ್ತಿಯಾಗುವುದರಲ್ಲಿ ಕಾಣುವ ಆಲಸ್ಯವನ್ನು ನೋಡಿ ರಾಜನು ಸಹನೆ ಕಳೆದುಕೊಂಡು, ಮರುದಿನ ಬೆಳಗಾಗುವಷ್ಟರಲ್ಲಿ ಗೋಪುರ ಕಲಶದ ಕೆಲಸ ಮುಗಿಸದೆ ಹೋದರೆ ಶಿಲ್ಪಿಗಳೆಲ್ಲರನ್ನೂ ಕೊಲ್ಲಿಸುವೆನೆಂದು ಎಚ್ಚರಿಕೆ ಕೊಟ್ಟನು. ಧರ್ಮಪಾದನು ಆಲಯದ ಗೋಪುರವನ್ನು ಏರಿ ಅಲ್ಲಿಯ ಕಟ್ಟಡವನ್ನು ಪರಿಶೀಲಿಸಿದನು. ಗೋಪುರದ ಕಲಶವನ್ನು ಹೇಗೆ ಅಳವಡಿಸಿಡಬೇಕೆಂಬುದನ್ನು ಶಿಲ್ಪಿಗಳಿಗೆ ತಿಳಿಯುವಂತೆ ಹೇಳಿದನು.

ಧರ್ಮಪಾದನ ಸಾಹಸಕ್ಕೆ, ಜ್ಞಾನಕ್ಕೆ ಶಿಲ್ಪಿಗಳೆಲ್ಲಾ ಮೆಚ್ಚಿಕೊಂಡರು. ತನ್ನ ಮಗನ ಸಾಮರ್ಥ್ಯ ನೋಡಿ ತಂದೆಗೆ ಪರಮಾನಂದವಾಯಿತು. ಆದರೂ ಅಸೂಯಾಪರರಾದ ಕೆಲವು ಶಿಲ್ಪಿಗಳು "ಹನ್ನೆರಡು ಸಾವಿರ ಮಂದಿ ಶಿಲ್ಪಿಗಳಿಂದಾಗದ ಕೆಲಸವನ್ನು ಒಬ್ಬ ಹುಡುಗನು ಮಾಡುವುದು ನಮಗೆಲ್ಲಾ ಅವಮಾನದ ವಿಷಯವಲ್ಲವೇ ?" ಎಂದು ಗುಸುಗುಸು ಹೇಳಿಕೊಂಡರು. ಅದನ್ನು ಕೇಳಿ ಧರ್ಮಪಾದನು ವಿಭ್ರಾಂತನಾದನು !





ತಾನು ಅಲ್ಲಿಂದ ಶಾಶ್ವತವಾಗಿ ಹೊರಟು ಹೋದರೆ ಆ ಕೆಲಸ ತಾನು ಮಾಡಿದೆನೆಂದು ಯಾರಿಗೂ ತಿಳಿಯದೆ ಹೋಗುತ್ತದೆಂದು ಧರ್ಮಪಾದನು ಅಂದುಕೊಂಡನು. ಅರ್ಧ ರಾತ್ರಿಯ ಹೊತ್ತಿನಲ್ಲಿ ಗೋಪುರದ ಮೇಲೆ ಹತ್ತಿದನು. ಆ ದಿನ ಹುಣ್ಣಿಮೆಯ ರಾತ್ರಿ ಯಾದುದರಿಂದ ಸಮುದ್ರ ಜಲವೂ, ನದೀ ಜಲವೂ ತುಂಬ ಎತ್ತರಕ್ಕೆ ತೆರೆಗಳನ್ನೆಬ್ಬಿಸಿ ಆಲಯದ ಪ್ರಾಂಗಣವನ್ನು ತಾಗುತ್ತಿದ್ದುವು. ಧರ್ಮಪಾದನು ಶಿಖರಾಗ್ರದಿಂದ ಸಮುದ್ರಕ್ಕೆ ಹಾರಿ ಪ್ರಾಣಾರ್ಪಣೆ ಮಾಡಿದನು !

ಯುಗಗಳು ಕಳೆದರೂ ಧರ್ಮಪಾದನ ಸಾಹಸವು ಚರಿತ್ರೆಯಲ್ಲಿ ಶಾಶ್ವತವಾಗಿ ನಿಂತುಹೋಯಿತು. ಪ್ರಧಾನ ಆಲಯವು ಈಗ ಇಲ್ಲದಿದ್ದರೂ, ಮುಖಶಾಲೆಯ ಗೋಡೆಯ ಮೇಲೆ ಸೂರ್ಯ ಭಗವಾನನ ಸುಂದರ ಶಿಲ್ಪಗಳು ನೋಡುವವರಿಗೆ ಆನಂದವನ್ನುಂಟುಮಾಡುತ್ತವೆ.






ಕೋಣಾರ್ಕ ದೇವಾಲಯದ ಮುಖಶಾಲೆಯ ಗೋಡೆಯ ಶಿಲ್ಪಗಳು, ಕಲಾಖಂಡಗಳು ತುಂಬಾ ವಿಲಕ್ಷಣವಾದುವು. ಪ್ರಸ್ತುತ ಚಂದ್ರಭಾಗ ನದಿಯೂ, ಸಮುದ್ರವೂ ಆಲಯಕ್ಕೆ ದೂರವಾದರೂ ದೇವಾಲಯ ಪ್ರಾಂತವು ಇನ್ನೂ ಅತ್ಯಂತ ಗಂಭೀರವಾಗಿ ಕಂಗೊಳಿಸಿಕೊಂಡಿದೆ.




ನಮ್ಮ ದೇವಾಲಯಗಳು:

## ಕಾಳೀಘಾಟ್

ಬಹಳ ಕಾಲದ ಹಿಂದೆ ಆತ್ಮಾರಾಮನೆಂಬ ಬ್ರಾಹ್ಮಣನು ದಿನಾ ಅರಣ್ಯದ ಸಮೀಪದಲ್ಲಿರುವ ಗಂಗಾ ತೀರಕ್ಕೆ ಹೋಗಿ ಸ್ವಲ್ಪ ಹೊತ್ತು ಭಗವದ್ಧ್ಯಾನದಲ್ಲಿ ಕಳೆಯುವನು. ಅವನ ನಿವಾಸವು ಅರಣ್ಯದ ಪಕ್ಕದಲ್ಲಿರುವ ಒಂದು ಗ್ರಾಮ.

ಒಂದು ದಿನ ಸಾಯಂಕಾಲ ಆತ್ಮಾರಾಮನು ಧ್ಯಾನವನ್ನು ಮುಗಿಸಿ ಎದ್ದ ಕೂಡಲೇ ಗಂಗಾ ಪ್ರವಾಹದಿಂದ ಒಂದು ಬೆಳಕಿನ ರೇಖೆ ಮೇಲೆದ್ದು ಬರುವುದು ಕಂಡಿತು. ಅವನಿಗೆ ಬಹಳ ಆಶ್ಚರ್ಯವಾಯಿತು. ಕತ್ತಲೂ ಕವಿದುಕೊಂಡು ಬರುವುದರಿಂದ ಅವನಿಗೆ ಆ ಸ್ಥಳಕ್ಕೆ ಹೋಗಲಾಗಲಿಲ್ಲ.





ಆ ದಿನ ರಾತ್ರಿಯಿಡೀ ಆತ್ಮಾರಾಮನಿಗೆ ನಿದ್ದೆ ಬರಲಿಲ್ಲ. ಸಾಯಂಕಾಲದಲ್ಲಿ ನೋಡಿದ ಬೆಳಕಿನ ರೇಖೆಯನ್ನು ಕುರಿತೇ ಆಲೋಚಿಸುತ್ತಿದ್ದನು. ಮರುದಿನ ಬೆಳಂಜಾಮದಲ್ಲೇ ಎದ್ದು ಗಂಗಾ ತೀರಕ್ಕೆ ಹೋದನು. ನಿನ್ನೆ ನೋಡಿದ ಪ್ರಕಾಶವು ಇನ್ನೂ ಹಾಗೆಯೇ ಇದ್ದಿತು. ಅವನು ಅದರ ಹತ್ತಿರ ಹೋಗಿ ನೋಡಿದನು. ನೀರಿನಲ್ಲಿ ಥಳಥಳಿಸುವ ಒಂದು ಶಿಲಾ ಹಸ್ತವು ಅವನಿಗೆ ಕಂಡಿತು.




ಆತ್ಮಾರಾಮನು ಅದನ್ನು ಎತ್ತಿಕೊಂಡು ಮನೆಗೆ ಹಿಂದಿರುಗಿದನು. ಆ ದಿನ ರಾತ್ರಿ ಅವನಿಗೆ ಅದ್ಭುತವಾದ ಸ್ವಪ್ನ ಬಿದ್ದಿತು. ಯಜ್ಞಕ್ಕೆ ಬಂದ ಸತೀದೇವಿಯನ್ನು ನೋಡಿದ ಕೂಡಲೇ ದಕ್ಷನು ಕೋಪಾತಿರೇಕದಿಂದ ಶಿವನನ್ನು ನಾನಾ ದುರ್ಭಾಷೆಗಳಿಂದ ಬಯ್ಯಲು, ಸತೀದೇವಿ ಸಹಿಸದೆ ಯಜ್ಞಕುಂಡದ ಸಮೀಪದಲ್ಲಿ ಸ್ಮೃತಿ ತಪ್ಪಿ ಬಿದ್ದಳು.

ಸತ್ತುಬಿದ್ದ ಸತೀದೇವಿಯ ದೇಹವನ್ನು ಶಿವನು ಭುಜದಲ್ಲೆತ್ತಿಕೊಂಡು ಮಹಾ ಬಾಧೆಯಿಂದ ಸರ್ವವನ್ನೂ ತ್ಯಜಿಸಿ, ಭೂಲೋಕದೊಳಗೆ ಎಲ್ಲೆಲ್ಲೋ ತಿರುಗ ತೊಡಗಿದನು. ಅವನನ್ನು ತಡೆಯಲು ಯಾರಿಗೂ ಸಾಧ್ಯವಾಗಲಿಲ್ಲ.





ಕೊನೆಗೆ ವಿಷ್ಣು ತನ್ನ ಸುದರ್ಶನ ಚಕ್ರವನು ಪ್ರಯೋಗಿಸಿದನು. ವಿಷ್ಣುಚಕ್ರವು ಸತೀದೇವಿಯ ದೇಹವನ್ನು ತುಂಡು ತುಂಡು ಮಾಡಿತು. ಅವಳ ಒಂದೊಂದು ಅಂಗವು ಒಂದೊಂದು ಪ್ರಾಂತದಲ್ಲಿ ಬಿದ್ದಿತು. ಅವಳ ಒಂದು ಕೈ ಈ ಅರಣ್ಯ ಪ್ರಾಂತದ ಗಂಗಾ ನದಿಯಲ್ಲಿ ಬಿದ್ದಿತ್ತು.

ತನಗೆ ಸಿಕ್ಕಿದ ಶಿಲಾ ಹಸ್ತವು ಆ ಸತೀದೇವಿಯದೆಂದು ಆತ್ಮಾರಾಮನಿಗೆ ಗೊತ್ತಾಯಿತು. ಅವನು ಅದನ್ನು ಕಾಳೀಮಾತೆಯ ವಿಗ್ರಹದಲ್ಲಿ ಪ್ರತಿಷ್ಠೆಮಾಡಿ, ಅರಣ್ಯದಲ್ಲಿಯೇ ಒಂದು ಕುಟೀರ ನಿರ್ಮಿಸಿ ಪೂಜಿಸಲು ತೊಡಗಿದನು.





ದೇವಿಯ ಕುಟೀರವು ಅರಣ್ಯ ಮಧ್ಯದಲ್ಲಿರುವುದರಿಂದ ಬಹಳ ಕಾಲದವರೆಗೆ ಅದರ ಸಂಗತಿ ಯಾರಿಗೂ ತಿಳಿಯಲಿಲ್ಲ. ಒಂದು ದಿನ ಒಬ್ಬ ಜಮೀನ್ದಾರನು ಗಂಗಾ ನದಿಯಲ್ಲಿ ದೋಣಿಯಲ್ಲಿ ಪ್ರಯಾಣಮಾಡುತ್ತ, ಅರಣ್ಯ ಮಧ್ಯದಿಂದ ಶಂಖನಾದ ಹೊರಡುವುದನ್ನು ಕೇಳಿದನು.

ಜಮೀನ್ದಾರನು ದೋಣಿಯಿಂದಿಳಿದು ಅರಣ್ಯದೊಳಗೆ ಹೋದನು. ಕಾಳೀ ವಿಗ್ರಹದ ಮುಂದೆ ಕೆಲವು ಮುನಿಗಳು ಕುಳಿತುಕೊಂಡಿರುವುದನ್ನು ನೋಡಿ, ಅವನು ಬಹಳ ಆಶ್ಚರ್ಯಪಡುತ್ತ, ಕಾಳೀದೇವಿಯ ವಿಗ್ರಹಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದನು.






ಮುನಿಗಳ ಅನುಮತಿ ಪಡೆದು ಜಮೀನ್ದಾರನು ದೇವಿಗೆ ಆಲಯವನ್ನು ಕಟ್ಟಿಸಿದನು. ದಿನಾ ಅನೇಕ ಮಂದಿ ಭಕ್ತರು ಅಲ್ಲಿಗೆ ಬರತೊಡಗಿದರು. ಕಾಲಕ್ರಮದಲ್ಲಿ ಅದರ ಸುತ್ತಲೂ ಇದ್ದ ಅರಣ್ಯವು ಕಣ್ಮರೆಯಾಗಿ ಹೋಯಿತು. ಪೂಜಾರಿಗಳೂ, ವ್ಯಾಪಾರಿಗಳೂ ಆಲಯದ ಸುತ್ತಲೂ ಮನೆಗಳನ್ನು ನಿರ್ಮಿಸಿಕೊಂಡರು.

ಆಲಯ ನಿರ್ಮಾಣವು ಇನ್ನಷ್ಟು ವಿಸ್ತಾರವಾಗಲು, ಜನರು ತಂಡೋಪತಂಡವಾಗಿ ಅಲ್ಲಿಗೆ ಬರತೊಡಗಿದರು. ಯಾವಾಗಲೂ ಉತ್ಸವಗಳೂ, ಮೆರವಣಿಗೆಗಳೂ ನಡೆಯತೊಡಗಿದುವು. ಹದಿನೆಂಟನೆಯ ಶತಮಾನಕ್ಕೆಲ್ಲಾ ಆ ಸ್ಥಳವು ಕಾಳೀಘಟ್ ಎಂಬ ಹೆಸರಿನಿಂದ ಸುಪ್ರಸಿದ್ಧವಾಯಿತು.





ಕಾಳೀಘಟ್ ಎಂಬ ಮಾತೇ ಕಾಲಕ್ರಮದಲ್ಲಿ ಕಲಕತ್ತ ಎಂದು ಮಾರ್ಪಟ್ಟಿತೆಂದು ಹೇಳುತ್ತಾರೆ. ಈಸ್ಟಿಂಡಿಯಾ ಕಂಪೆನಿಯ ಆಗಮನದಿಂದ ಕಲಕತ್ತಾ ಇನ್ನಷ್ಟು ವೇಗವಾಗಿ ಅಭಿವೃದ್ಧಿಗೇರಿ, ಈ ದಿನಗಳಲ್ಲಿ ನಮ್ಮ ದೊಡ್ಡ ನಗರಗಳಲ್ಲಿ ಒಂದಾಗಿ ಬೆಳಗಿಕೊಂಡಿದೆ.




ನಮ್ಮ ದೇವಾಲಯಗಳು:

# ತಿರುಪತಿ

ಒಂದು ಸಾರಿ ನಾರದನು ಮಹಾ ವಿಷ್ಣುವನ್ನು ದರ್ಶನಮಾಡಿ, ಭರತಖಂಡದ ಪೂರ್ವ ಭಾಗದ ಕಣಿವೆಗಳಲ್ಲಿ ಬೆಳಗುವ ಶೇಷಾಚಲವೆಂಬ ಏಳು ಬೆಟ್ಟಗಳ ವರಿಸೆಯ ಪ್ರಕೃತಿ ಸೌಂದರ್ಯವನ್ನು ತುಂಬಾ ಹೇಳಿದನು.

ಕೆಲವು ದಿನಗಳ ಮೇಲೆ ವಿಷ್ಣು ಪರಿಸರಗಳ ಬದಲಾವಣೆಗಾಗಿ ಶೇಷಾಚಲದ ಮೇಲೆ ಬಂದು ಇಳಿದನು. ಅದ್ಭುತವಾದ ಅಲ್ಲಿಯ ಪ್ರಕೃತಿ ಸೌಂದರ್ಯವನ್ನು ನೋಡಿ ಬಹಳ ಸಂತೋಷ ಪಟ್ಟನು. ಒಂದು ಬಂಡೆಯ ಮೇಲೆ ಕುಳಿತು ಕೊಂಡು ಧ್ಯಾನದಲ್ಲಿ ಮಗ್ನನಾದನು.





ಸ್ವಲ್ಪ ಕಾಲದ ಮೇಲೆ ವಿಷ್ಣು ಆ ಸ್ಥಳವನ್ನು ಬಿಟ್ಟು ಹೊರಟು ಹೋದ ಮೇಲೆ ಕೂಡಾ ಆ ಬಂಡೆಯ ಮೇಲೆ ಅವನ ವಿಗ್ರಹದ ರೂಪವು ಸ್ಥಿರವಾಗಿ ಉಳಿದು ಬಿಟ್ಟಿತು. ಆ ವಿಗ್ರಹದಲ್ಲಿ ವಿಷ್ಣುವಿನ ಅಂಶವೂ ಹಾಗೆಯೇ ಉಳಿದಿತ್ತು. ಕಾಲಕ್ರಮದಲ್ಲಿ ಆ ವಿಗ್ರಹದ ಸುತ್ತಲೂ ಮರ ಗಿಡಗಳೂ ಹುತ್ತಗಳೂ ವಿಪರೀತವಾಗಿ ಬೆಳೆದುವು.




ಆ ಪ್ರಾಂತದಲ್ಲಿ ಪಶುಪಾಲಕನೊಬ್ಬನು. ತನ್ನ ಮಂದೆಯಿಂದ ಒಂದು ಗೋವು ದಿನಾ ಕ್ರಮ ತಪ್ಪದೆ ಒಂದು ಬೆಟ್ಟದ ಮೇಲೆ ಹೋಗಿ ಬರುವುದನ್ನು ಗಮನಿಸಿದನು. ಆ ಗೋವು ಮನೆಯಲ್ಲಿ ಕೊಡಬೇಕಾದ ಹಾಲನ್ನು ಕೊಡುತ್ತಿರಲಿಲ್ಲ. ಅದರ ಗುಟ್ಟು ತಿಳಿದುಕೊಳ್ಳಬೇಕೆಂದು ಪಶುಪಾಲಕನು ಒಂದು ದಿನ ಅದನ್ನು ಬೆಂಬತ್ತಿ ಹೋದನು.

ಆ ಗೋವು ಬೆಟ್ಟ ಹತ್ತಿ ಒಂದು ಪೊದರಿನ ಮೇಲೆ ನಿಂತ ಕೂಡಲೇ ಅದರ ಕೆಚ್ಚಲಿನಿಂದ ಹುತ್ತದೊಳಗಿನ ವಿಗ್ರಹದ ಮೇಲೆ ಹಾಲು ಧಾರೆಧಾರೆಯಾಗಿ ಸುರಿಯುವುದನ್ನು ನೋಡಿದ ಪಶುಪಾಲಕನು, ಅತ್ಯಾಶ್ಚರ್ಯಪಟ್ಟು, ಗೋವಿನ ಬಳಿಗೆ ಹೋಗಲು ಧೈರ್ಯವಿಲ್ಲದೆ ಓಡುತ್ತಾ ಬೆಟ್ಟವನ್ನು ಇಳಿದನು.





ಪಶುಪಾಲಕನು ತಾನು ನೋಡಿದ ವಿಷಯವನ್ನು ರಾಜನೊಂದಿಗೆ ಹೇಳಿದನು. ರಾಜನು ಬೆಟ್ಟದ ಮೇಲಕ್ಕೆ ಹೋಗಿ ಹುತ್ತದೊಳಗಿನ ವಿಷ್ಣು ವಿಗ್ರಹವನ್ನು ನೋಡಿದನು. ಪಕ್ಕದಲ್ಲಿದ್ದ ಮತ್ತೊಂದು ಬೆಟ್ಟದ ಶಿಖರದ ಮೇಲೆ ರಾಜನು ಆ ವಿಗ್ರಹವನ್ನು ಪ್ರತಿಷ್ಠೆ ಮಾಡಿ, ಆಲಯವನ್ನು ಕಟ್ಟಿಸಿದನು. ಒಬ್ಬ ದೊಡ್ಡ ಶಿಲ್ಪಿ ಆ ವಿಗ್ರಹವನ್ನು ಇನ್ನಷ್ಟು ಸುಲಕ್ಷಣವಾಗುವಂತೆ ಮಾಡಿದನು.

ಏಳು ಬೆಟ್ಟಗಳ ವೇಂಕಟೇಶ್ವರನೆಂದು ಪ್ರಸಿದ್ಧಿ ಪಡೆದ ವಿಷ್ಣುವನ್ನು ಮದುವೆಯಾಗಲು ಲಕ್ಷ್ಮೀದೇವಿ ಆಕಾಶರಾಜನ ಮನೆಯಲ್ಲಿ ಸೌಂದರ್ಯದ ರಾಶಿಯಾದ ಪದ್ಮಾವತಿದೇವಿಯಾಗಿ ಅವತರಿಸಿದಳು.






ಒಂದು ದಿನ ವೇಂಕಟೇಶ್ವರನು ಮಾನವ ರೂಪದಲ್ಲಿ ಅರಣ್ಯದಲ್ಲಿ ಸಂಚರಿಸಿಕೊಂಡಿದ್ದಾಗ, ಪದ್ಮಾವತಿದೇವಿಯನ್ನು ನೋಡಿದನು. ಆ ದಿವ್ಯ ದಂಪತಿಗಳು ಒಬ್ಬರನ್ನೊಬ್ಬರು ಗುರುತಿಸಿಕೊಂಡು, ತಮ್ಮ ವಿವಾಹವನ್ನು ಭೂಲೋಕದಲ್ಲಿ ಮತ್ತೊಂದು ಸಾರಿ ಮಾಡಿಕೊಂಡರು. ತಿರುಮಲೆಯ ಪಾದತಲದಲ್ಲಿರುವ ಆಲಯದಲ್ಲಿ ಪದ್ಮಾವತಿದೇವಿ ಭಕ್ತರಿಂದ ಪೂಜಿಸಲ್ಪಡುತ್ತ ಇರತೊಡಗಿದಳು.

ನಮ್ಮ ದೇಶದೊಳಗಿನ ಸುಪ್ರಸಿದ್ಧವಾದ ದೇವಾಲಯಗಳಲ್ಲಿ ಪ್ರಧಾನವಾದುದು ತಿರುಪತಿ. ಆಲಯದ ಪುನರ್ನಿರ್ಮಾಣಕ್ಕೆ ನಾಲ್ವರು ರಾಜರು ಕೃಷಿ ಮಾಡಿದ್ದಾರೆ. ಅವರಿಂದ ದೇವಾಲಯದ ಪ್ರಾಂಗಣಗಳು ವಿಸ್ತಾರವಾಗಿವೆ. ಆಲಯದ ಗೋಪುರ ವಿಮಾನವು ಬಂಗಾರದ ತಗಡಿನ ಹೊದಿಕೆ ಹೊಂದಿರುತ್ತದೆ.





ಅನುದಿನವೂ ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ತಂಡೋಪತಂಡಗಳಾಗಿ ದರ್ಶನಕ್ಕೆ ಬರುತ್ತಾ, ಹುಂಡಿಯಲ್ಲಿ ಕಾಣಿಕೆ ಹಾಕುತ್ತಾ ಇರುತ್ತಾರೆ. ಭಕ್ತರಿಂದ ಬರುವ ನಿಧಿಗಳಿಂದ ಅನೇಕ ವಿದ್ಯಾ ಸಂಸ್ಥೆಗಳೂ, ಆರೋಗ್ಯ ಕೇಂದ್ರಗಳೂ ನಿರ್ವಹಣೆ ನಡೆಸಿಕೊಂಡಿವೆ.

ಸೀತಾರಾಮಲಕ್ಷ್ಮಣರು ಈ ದಿವ್ಯ ಸ್ಥಳದಲ್ಲಿ ವಾಸ ಮಾಡಿರುವರೆಂದು ಪುರಾಣಗಳು ಉಲ್ಲೇಖಿಸುತ್ತವೆ. ಅವರು ವಾಸ ಮಾಡಿದ ಸ್ಥಳವನ್ನು ಸ್ವಾಮಿ ತೀರ್ಥವೆನ್ನುತ್ತಾರೆ. ವಿಷ್ಣು ದಿವಿಯಿಂದ ಭುವಿಗೆ ಇಳಿದ ಸುಂದರ ಶಿಖರದಲ್ಲಿ ವಿಷ್ಣುವಿನ ಪಾದ ಪದ್ಮಗಳನ್ನು ಕೆತ್ತಲ್ಪಟ್ಟ ಒಂದು ಶಿಲಾ ಫಲಕವೂ ಇದೆ.





ಈ ದೇವಾಲಯದ ಸ್ವಾಮಿ ವಿಗ್ರಹವು ದಿವ್ಯ ಪ್ರೇಮವನ್ನು ಸೂಸುವಂತಹ ಮಂದಹಾಸದಿಂದ ಅತ್ಯದ್ಭುತವಾಗಿ ಬೆಳಗುತ್ತದೆ. ವಿಗ್ರಹವೆಲ್ಲಾ ಮಣಿಮಾಣಿಕ್ಯಗಳಿಂದ, ಅಪಾರ ಬೆಲೆ ಬಾಳುವ ಆಭರಣಗಳಿಂದ ಅಲಂಕರಿಸಲ್ಪಟ್ಟಿರುತ್ತದೆ. ಏಳು ಬೆಟ್ಟಗಳೊಡೆಯ ವೇಂಕಟೇಶನ ದರ್ಶನವು ಭಕ್ತಿ ಮುಕ್ತಿದಾಯಕವಾದುದೆಂದು ಭಕ್ತಕೋಟಿಗಳ ವಿಶ್ವಾಸ.




ನಮ್ಮ ದೇವಾಲಯಗಳು:

# ಚಿದಂಬರಂ

ಒಂದಾನೊಂದು ಕಾಲದಲ್ಲಿ ದಾರುಕಾವನದಲ್ಲಿ ಮುನಿಗಳದೊಂದು ಆಶ್ರಮವಿತ್ತು. ಅಲ್ಲಿಯ ಮುನಿಗಳು ತಮ್ಮ ಜ್ಞಾನವನ್ನೂ, ಅದನ್ನು ಅದ್ಭುತ ರೀತಿಯಲ್ಲಿ ಬಹಿರಂಗ ಪಡಿಸುವ ತಮ್ಮ ಶಕ್ತಿಯನ್ನೂ ನೆನೆದುಕೊಂಡು ಗರ್ವಿಸ ತೊಡಗಿದರು. ಎಲ್ಲರಿಂದಲೂ ಪೂಜಿಸಲ್ಪಡುವ ಅರ್ಹತೆ ತಮಗಿದೆಯೆಂದು ನಂಬಲು ತೊಡಗಿದರು.

ಮುನಿಗಳು ಆಶ್ರಯದಲ್ಲಿಲ್ಲದ ಸಮಯದಲ್ಲಿ ಒಬ್ಬ ಯುವಕ ಭಿಕ್ಷು ಹಾಡುತ್ತಾ, ಕಥೆಗಳನ್ನು ಹೇಳುತ್ತಾ, ಆಶ್ರಮದ ಕಡೆಗೆ ಬಂದನು. ಆ ಯುವಕ ಸನ್ಯಾಸಿಯನ್ನು ನೋಡಿದ ಕೂಡಲೇ ಮುನಿಪತ್ನಿಗಳೆಲ್ಲರೂ ಅವನಿಂದ ಆಕರ್ಷಿಸಲ್ಪಟ್ಟವರಂತೆ ಅವನ ಸುತ್ತಲೂ ಬಂದು ಸೇರಿದರು.





ಆಶ್ರಮಕ್ಕೆ ಹಿಂದಿರುಗಿ ಬಂದ ಮುನಿಗಳು ಅಲ್ಲಿಯ ದೃಶ್ಯವನ್ನು ನೋಡಿ ಕೋಪಗೊಂಡರು. ತಮ್ಮ ಪತ್ನಿಯರನ್ನು ಈಚೆಗೆ ಬರುವಂತೆ ಕರೆದರು. ಬೆದರಿಸಿದರು. ಆದರೂ ಸ್ವಲ್ಪಕೂಡ ಪ್ರಯೋಜನವಾಗಲಿಲ್ಲ. ಆ ಯುವಕ ಭಿಕ್ಷುವಾಗಲೀ, ಮುನಿಪತ್ನಿಯರಾಗಲೀ ಮುನಿಗಳ ಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ.




ಮುನಿಗಳು ತಮ್ಮ ಅದ್ಭುತ ಶಕ್ತಿಗಳನ್ನು ಪ್ರಯೋಗಿಸಲು ಸಿದ್ಧರಾದರು. ದೊಡ್ಡದೊಂದು ಹುಲಿಯನ್ನು ಸೃಷ್ಟಿಸಿ ಯುವಕ ಭಿಕ್ಷುವಿನೆಡೆಗೆ ಓಡಿಸಿದರು. ಹೆಬ್ಬುಲಿ ಭೀಕರವಾಗಿ ಗರ್ಜಿಸುತ್ತ ಅವನ ಮೇಲೆ ಧುಮುಕಲು ಹೋಯಿತು.

ಹುಲಿ ಸಮೀಪಿಸಿದ ಕೂಡಲೇ ಯುವಕ ಭಿಕ್ಷು ಮುಗುಳ್ನಗುತ್ತ ಅದನ್ನು ಮುಟ್ಟಿದನು. ಮರು ಕ್ಷಣದಲ್ಲಿ ಹುಲಿ ಮಾಯವಾಯಿತು. ಅದರ ಚರ್ಮವು ಯುವಕ ಭಿಕ್ಷುವಿನ ನಡುವಿನಲ್ಲಿ ವಸ್ತ್ರದಂತೆ ಸುತ್ತಿಕೊಂಡಿತು. ಆ ದೃಶ್ಯವನ್ನು ನೋಡಿ ಮುನಿಗಳು ಚಕಿತರಾದರು.





ಆದರೂ ಮುನಿಗಳು ತಮ್ಮ ಪ್ರಯತ್ನವನ್ನು ನಿಲ್ಲಿಸದೆ ಒಂದು ಕುಳ್ಳ ದೆವ್ವವನ್ನು ಸೃಷ್ಟಿಸಿ ಆ ಯುವಕ ಭಿಕ್ಷುವಿನ ಮೇಲೆ ಪ್ರಯೋಗಿಸಿದರು. ಕುಳ್ಳ ದೆವ್ವವು ಭಯಾನಕವಾಗಿ ಬೊಬ್ಬಿಡುತ್ತ ಯುವಕ ಭಿಕ್ಷುವಿನ ಸಮೀಪ ಬಂದು ಅವನ ಕಾಲಡಿಯಲ್ಲಿ ಬಿದ್ದುಬಿಟ್ಟಿತು.

ಆದನ್ನು ನೋಡಿದ ಮೇಲೆ ಮುನಿಗಳಿಗೆ ಸ್ವಲ್ಪ ಜ್ಞಾನ ಬಂದಂತಾಯಿತು. ಆ ಯುವಕ ಭಿಕ್ಷು ಸಾಮಾನ್ಯದವನಲ್ಲವೆಂದೂ, ಯಾವ ದೇವನೋ ಹೀಗೆ ವೇಷವಲ್ಲಟಿಸಿಕೊಂಡು ಬಂದಿರಬೇಕೆಂದೂ ಊಹಿಸಿದರು. ಅವರೆಲ್ಲಾ ಒಟ್ಟುಗೂಡಿ ಮೆಲ್ಲನೆ ಅವನ ಸಮೀಪಕ್ಕೆ ಹೋಗಿ, ಕೈ ಜೋಡಿಸಿ ವಿನಯದಿಂದ "ಯಾರು ನೀವು ?" ಎಂದು ಕೇಳಿದರು.





ಆಗ ಆ ಯುವಕ ಭಿಕ್ಷು ತನ್ನ ನಿಜ ಸ್ವರೂಪ ದಿಂದ ದರ್ಶನವಿತ್ತನು. ಪರಮಶಿವನೇ ತನ್ನ ಭಕ್ತರಾದ ಮುನಿಗಳಿಗೆ ಬಂದ ಅಹಂಕಾರವನ್ನು ಅಡಗಿಸಲು ಹೀಗೆ ನಾಟಕವಾಡಿದ್ದನು. ತಮ್ಮ ಪತ್ನಿಯರು ಕೂಡಾ ತಮ್ಮ ದೊಡ್ಡತನವನ್ನು ಮರೆತುಬಿಟ್ಟುದರಿಂದ ಮುನಿಗಳ ಅಹಂಕಾರವು ಪೂರ್ತಿ ನಶಿಸಿತು. ಮುನಿಗಳೆಲ್ಲಾ ಶಿವನ ಪಾದ ಗಳಿಗೆ ನಮಸ್ಕಾರ ಮಾಡಿದರು.

ಎಲ್ಲಾ ಮುನಿಗಳೂ ಶಿವನನ್ನು ಕೀರ್ತಿಸುತ್ತ, ಶಿವಲೀಲೆಗಳನ್ನು ವರ್ಣಿಸುತ್ತ ಶಿವನ ಮುಂದೆ ಗಾನ ಮಾಡತೊಡಗಿದರು. ಆ ಗಾನಕ್ಕೆ ಪರವಶ ನಾದ ಶಿವನು ನಾಟ್ಯವಾಡತೊಡಗಿದನು. ಆ ನಾಟ್ಯದಿಂದ ಮುನಿಗಳು ಪರಮಾನಂದ ಪಡೆ ಯುತ್ತಿರಲು ಶಿವನು ಅದೃಶ್ಯನಾದನು.





ಶಿವನು ಮಾಡಿದ ಈ ಅದ್ಭುತ ನಾಟ್ಯದ ಸಂಗತಿಯನ್ನು ಕೇಳಿದ ಆದಿಶೇಷನು ಪರಮೇಶ್ವರನನ್ನು ದರ್ಶನಮಾಡಿ, ಆ ನಾಟ್ಯವನ್ನು ನೋಡಬೇಕೆಂಬ ತನ್ನ ಕುತೂಹಲವನ್ನು ತಣಿಸಬೇಕೆಂದು ಪ್ರಾರ್ಥಿಸಿಕೊಂಡನು. ಆದರೆ ಯಾರೇ ಆಗಲಿ ಶಿವನ ನಾಟ್ಯ ನೋಡಿ ಆನಂದಿಸಬೇಕಾದರೆ ಮಾನವಜನ್ಮ ಎತ್ತಬೇಕಿತ್ತು.

ಆದಿಶೇಷನು ಪತಂಜಲಿಯಾಗಿ ಜನ್ಮಿಸಿ ಶಿವನ ನಟರಾಜ ವಿಗ್ರಹವನ್ನು ಕೆತ್ತಿಸಿದನು. ನಟರಾಜ ವಿಗ್ರಹದ ಪಾದದ ಕೆಳಗೆ ಅಹಂಕಾರ ರಾಕ್ಷಸ ನಿದ್ದಾನೆ. ಒಂದು ಕೈಯಲ್ಲಿ ಡಮರುಕವು, ಜೀವನ ಸಂಗೀತಕ್ಕೆ ಸಂಕೇತವಾಗಿದ್ದಿತು. ಮತ್ತೊಂದು ಕೈಯಲ್ಲಿ ಅಗ್ನಿ, ಅದು ಶಕ್ತಿ ಸ್ವರೂಪ, ಮೂರನೆಯ ಕೈ ಭಕ್ತರ ಪಾಲಿನ ಅಭಯ ಹಸ್ತವಾಗಿ ಮೇಲೆತ್ತಲ್ಪಟ್ಟಿರುತ್ತದೆ. ಶರಣೆಂದವರನ್ನು ಕಾಪಾಡಲು ಸಿದ್ಧವಾಗಿ ನಾಲ್ಕನೆಯ ಹಸ್ತವಿದೆ.





ಶಿವನು ನಾಟ್ಯವಾಡಿದ ಸ್ಥಳವು ಚಿದಂಬರವೆಂಬ ಶಿವಕ್ಷೇತ್ರವಾಗಿ ಅತಿ ಪ್ರಾಚೀನ ಕಾಲದಿಂದಲೇ ಪ್ರಸಿದ್ಧವಾಗಿದೆ. ಮೂವತ್ತೆರಡು ಎಕರೆಯ ವಿಸ್ತೀರ್ಣದಲ್ಲಿ, ಪ್ರಸ್ತುತ ಅಲ್ಲಿ ನೆಲೆಸಿರುವ ಬ್ರಹ್ಮಾಂಡವಾದ ದೇವಾಲಯವು ಎರಡು ಸಾವಿರ ವರುಷಗಳ ಚರಿತ್ರೆಯನ್ನು ಒಳಗೊಂಡಿದೆ. ಈ ಆಲಯದೊಳಗಿನ ಅದ್ಭುತ ಶಿಲ್ಪಗಳು ನೋಡುವವರನ್ನು ಅತ್ಯಾಶ್ಚರ್ಯ ಪಡಿಸುತ್ತವೆ.




**ನಮ್ಮ ದೇವಾಲಯಗಳು:**

## ಕಾಂಚೀಪುರ

ಬ್ರಹ್ಮದೇವನು ಒಂದುಸಾರಿ ಯಜ್ಞ ಮಾಡಬೇಕೆಂದು, ಅದಕ್ಕೆ ಅನುಕೂಲವಾದ ಸ್ಥಳವನ್ನು ಹುಡುಕುತ್ತ, ಸತ್ಯವ್ರತ ಕ್ಷೇತ್ರವೆಂದು ಪ್ರಸಿದ್ಧಿ ಪಡೆದ ಕಾಂಚೀಪುರವನ್ನು ನೋಡಿ ಅಲ್ಲಿ ಯಜ್ಞವನ್ನು ಪ್ರಾರಂಭಿಸಿದನು.

ಇದು ಸರಸ್ವತೀದೇವಿಗೆ ಏಕೋ ಇಷ್ಟವಾಗಲಿಲ್ಲ. ಅವಳು ವೇಗವತೀ ನದಿಯ ರೂಪತಾಳಿ ಯಜ್ಞ ವಾಟಿಕೆಯನ್ನು ಜಲಮಯವಮಾಡಲು ರಭಸದಿಂದ ಉಕ್ಕಿ ಓಡಿಬರತೊಡಗಿದಳು. ಆಗ ಮಹಾವಿಷ್ಣು ಅಡ್ಡಗಟ್ಟಿ ಮಲಗಿ ನದಿಯ ಪ್ರವಾಹವು ಮುಂದೆ ಹೋಗದಂತೆ ತಡೆದನು.





ಅನಂತರ ಬ್ರಹ್ಮದೇವನ ಪ್ರಾರ್ಥನೆಯ ಮೇರೆಗೆ ಮಹಾವಿಷ್ಣು ಅಲ್ಲಿಯೇ ಭಕ್ತರಿಗೆ ಬೇಡಿದ ವರಗಳನ್ನು ಪ್ರಸಾದಿಸುವ ವರದರಾಜ ಸ್ವಾಮಿಯಾಗಿ ಉಳಿದುಕೊಂಡನು. ಈ ದಿನಗಳಲ್ಲಿ ಬೆಳಗಿಕೊಂಡಿರುವ ವರದರಾಜ ಸ್ವಾಮಿಯ ಆಲಯವು ಬಹು ಪುರಾತನವಾದ ಆಲಯಗಳ ಬುನಾದಿಯ ಮೇಲೆ ನಿರ್ಮಿಸಲ್ಪಟ್ಟಿದೆ.




ಪಲ್ಲವರಾಜನಾದ ರಾಜಸಿಂಹನು ನಿರ್ಮಿಸಿದ
ಶ್ರೀ ಕೈಲಾಸನಾಥನ ಆಲಯವು ಅದ್ಭುತ ಶಿಲ್ಪ
ಕಲೆಗೆ ಪ್ರಸಿದ್ಧಿ ಪಡೆದಿದೆ. ಗರ್ಭಗೃಹದೊಳಗಿನ
ಶಿವಲಿಂಗವು ಹದಿನಾರು ಫಲಕಗಳಿಂದ ತಯಾರಿ
ಸಲ್ಪಟ್ಟಿದೆ. ಆಲಯ ಪ್ರಾಕಾರದ ಸುತ್ತಲೂ
ಐವತ್ತೆಂಟು ಚಿಕ್ಕ ದೇವಾಲಯಗಳಿವೆ.

ಮತ್ತೊಬ್ಬ ಪಲ್ಲವರಾಜನಾದ ನಂದಿವರ್ಮ
ಪಲ್ಲವಮಲ್ಲನು ನಿರ್ಮಿಸಿದ ಶ್ರೀ ವೈಕುಂಠ
ಪೆರುಮಾಳ್ ಆಲಯ ಕೂಡಾ ಬಹಳ ಅದ್ಭುತ
ವಾದ ಕಲೆಗಳ ಖಂಡವೆಂದು ಭಾವಿಸಲ್ಪಡುತ್ತದೆ.
ಮೂರು ಅಂತಸ್ತುಗಳಿಂದ ಬೆಳಗುವ ಆಲಯ
ವಿಮಾನದಲ್ಲಿ ಮಹಾವಿಷ್ಣು ನಿಂತಿರುವಂತೆ
ಕುಳಿತಿರುವಂತೆ, ಶಯನಿಸಿರುವಂತೆ ಮೂರು
ಬಗೆಯ ಭಂಗಿಗಳಲ್ಲಿ ಕೆತ್ತಲ್ಪಟ್ಟಿದೆ.





ಇಲ್ಲಿ ಬೆಳಗುತ್ತಿರುವ ಏಕಾಂಬರನಾಥ ಆಲ
ಯವು ಅತಿ ಪ್ರಾಚೀನವಾದುದು. ಒಂದು ಕಾಲ
ದಲ್ಲಿ ಇಲ್ಲಿ ಸಾವಿರ ಕಂಬಗಳ ಮಂಟಪವಿದ್ದಿತು.
ಈಗ ಆ ಮಂಟಪದಲ್ಲಿ ಆರುನೂರ ಹದಿನಾರು
ಕಂಬಗಳಿವೆ. ಬಹು ವಿಶಾಲವಾದ ಈ ದೇವಾಲ
ಯದ ಪ್ರಾಂಗಣದ ತುಂಬಾ ಎಷ್ಟೋ ಆಲಯ
ಗಳೂ, ಮಂಟಪಗಳೂ, ಗೋಪುರಗಳೂ,
ತಟಾಕಗಳೂ ಇವೆ.

ಪಾರ್ವತೀ ಪರಮೇಶ್ವರರ 'ವಿವಾಹವನ್ನು ನೋಡಲಿಕ್ಕಾಗಿ ದೇವತೆಗಳೂ, ಋಷಿಗಳೂ ಎಲ್ಲರೂ ಕೈಲಾಸವನ್ನು ಸೇರಿದರು. ಆಗ ಪರಮೇಶ್ವರನು ಭಾರತ ಭೂಮಿಯ ಆಧ್ಯಾತ್ಮಿಕ ಭಾರವನ್ನು ಸಮತಲವಾಗಿರಿಸಲು ಅಗಸ್ತ್ಯ ಮುನಿಯನ್ನು ದಕ್ಷಿಣ ದೇಶಕ್ಕೆ ಹೋಗುವಂತೆ ಆದೇಶ ಮಾಡಿದನು.





ಅಗಸ್ತ್ಯನು ಶಿವಾಜ್ಞೆಯನ್ನು ಅಂಗೀಕರಿಸಿ, ತನಗೆ ಶಿವಪಾರ್ವತಿಯರ ವಿವಾಹ ದರ್ಶನದ ಭಾಗ್ಯ ಅನುಗ್ರಹಿಸಬೇಕೆಂದು ಕೇಳಿಕೊಂಡನು. ಅವನ ಪ್ರಾರ್ಥನೆಯನ್ನು ನೆರವೇರಿಸಲಿಕ್ಕಾಗಿ ಪಾರ್ವತೀ ದೇವಿ ಕನ್ಯೆಯಾಗಿ, ಮತ್ತೆ ಕಾಂಚೀಪುರದ ನದೀ ತೀರದಲ್ಲಿ ಪರಮಶಿವನ ಲಿಂಗ ರೂಪವನ್ನು ಪೂಜಿಸಲು ತೊಡಗಿದಳು.

ಪಾರ್ವತೀದೇವಿಯನ್ನು ಹೆದರಿಸುವ ಉದ್ದೇಶದಿಂದ ಶಿವನು ಲಿಂಗವು ಕೊಚ್ಚಿ ಹೋಗುವಂತೆ ಮಾಡಲು ನದಿಯಲ್ಲಿ ನೆರೆ ಏಳುವಂತೆ ಮಾಡಿದನು. ಆದರೆ ಪಾರ್ವತಿ ಶಿವಲಿಂಗವನ್ನು ಹೃದಯದಲ್ಲಿ ಅಪ್ಪಿಕೊಂಡು, ತಾನು ಕೂಡಾ ನೆರೆಯಲ್ಲಿ ಸಿಕ್ಕಿ ಹೊಡೆದುಕೊಂಡು ಹೋಗಲು ಸಿದ್ಧಳಾದಳು. ಆಗ ಶಿವನು ಅಲ್ಲಿ ಪ್ರತ್ಯಕ್ಷನಾಗಿ, ಅವಳನ್ನು ಮದುವೆ ಮಾಡಿಕೊಂಡನು. ಅಗಸ್ತ್ಯನು ಪಾರ್ವತೀ ಪರಮೇಶ್ವರರ ವಿವಾಹವನ್ನು ಆಸೆ ತೀರುವಂತೆ ನೋಡಿ ಆನಂದಿಸಿದನು.





ಈ ಆಲಯ ಪ್ರಾಂಗಣದಲ್ಲಿ ಸಾವಿರ ಸಂವತ್ಸರಗಳಿಗೂ ಹಿಂದಿನ ಮಾವಿನ ಮರವಿರುವುದರಿಂದಲೇ ಇದಕ್ಕೆ ಏಕಾಂಬರನಾಥ ಆಲಯವೆಂಬ ಹೆಸರು ಬಂದಿತೆಂದು ನಂಬಲ್ಪಡುತ್ತದೆ. ನಾಲ್ಕು ವೇದಗಳಿಗೆ ಸಂಕೇತವಾಗಿ ಬೆಳಗುವ ಈ ವೃಕ್ಷವು ನಾಲ್ಕು ಕೊಂಬೆಗಳಿಂದ ನಾಲ್ಕು ಬಗೆಯ ರುಚಿಯುಳ್ಳ ಮಾವಿನಕಾಯಿ ಬಿಡುವುದು ವಿಶೇಷವೆಂದು ಹೇಳಿಕೊಳ್ಳುತ್ತಾರೆ.

ಕಾಂಚೀಪುರವು ನಮ್ಮ ದೇಶದೊಳಗಿನ ಸಪ್ತ ಪುಣ್ಯ ಕ್ಷೇತ್ರಗಳಲ್ಲಿ ಒಂದಾಗಿದೆ. ಆದಿಶಂಕರರು ಇಲ್ಲಿ ಕಾಮಕೋಟಿ ಪೀಠವನ್ನು ಸ್ಥಾಪಿಸಿದ್ದಾರೆ. ಹಜರತ್ ಹಮೀದ್ ಅನಾ ಲಿಯಾ ಎಂಬ ಮುಸ್ಲಿಂ ಮತಗುರು ಕಾಂಚೀಪುರವನ್ನು ತನ್ನ ನಿವಾಸ ಸ್ಥಾನವಾಗಿ ಆರಿಸಿಕೊಂಡಿದ್ದಾರೆ.





ಒಂದು ಕಾಲದಲ್ಲಿ ಬೌದ್ಧಮತಕ್ಕೆ ಕೂಡಾ ಈ ನಗರವು ಕೇಂದ್ರವಾಗಿ ಬೆಳಗಿಕೊಂಡಿತ್ತು. ಏಳನೇ ಶತಮಾನದಲ್ಲಿ ಹೂಯಾನ್‌ತ್ಸ್ಯಾಂಗ್ ಎಂಬ ಚೀನಾ ಯಾತ್ರಿಕನು ಈ ನಗರವನ್ನು ಸಂದರ್ಶಿಸಿದನು. ಆಗ ಅವನು ಇಲ್ಲಿ ಅನೇಕ ಬೌದ್ಧಾರಾಮಗಳನ್ನು ದರ್ಶನ ಮಾಡಿದುದನ್ನು ಬರೆದುಕೊಂಡಿದ್ದಾನೆ. ಆದರೆ ಕಾಲ ಪ್ರವಾಹದಲ್ಲಿ ಅವೆಲ್ಲಾ ಕೊಚ್ಚಿ ಹೋಗಿವೆ.

ನಮ್ಮ ದೇವಾಲಯಗಳು :

# ಗಯಾ, ಬುದ್ಧಗಯಾ

ಹತ್ತು ಸಾವಿರ ಸಂವತ್ಸರಗಳ ಹಿಂದೆ ಗಯಾಸುರನೆಂಬ ರಾಕ್ಷಸನು ವಿಷ್ಣುವನ್ನು ಧ್ಯಾನಿಸುತ್ತ ತಪಸ್ಸು ಮಾಡಿದನು. ಅಪಾರ ಶಕ್ತಿ ಸಾಧಿಸಲಿಕ್ಕಾಗಿ ಅವನು ಪ್ರಾರಂಭಿಸಿದ ತಪಸ್ಸು ಅನೇಕ ಸಂವತ್ಸರಗಳವರೆಗೆ ತಡೆಯಿಲ್ಲದೆ ನಿರಂತರವಾಗಿ ಸಾಗಿಕೊಂಡೇ ಇದ್ದಿತು.

ಗಯಾಸುರನ ಉಗ್ರವಾದ ತಪಸ್ಸನ್ನು ನೋಡಿದ ದೇವತೆಗಳು ಆಶ್ಚರ್ಯಪಡುತ್ತ ಹೆದರಿದರು. ರಾಕ್ಷಸನಾದ ಅವನ ತಪಸ್ಸು ಫಲಿಸಿ, ಅವನಿಗೆ ಅಪಾರ ಶಕ್ತಿ ಸಿದ್ಧಿಸಿಬಿಟ್ಟರೆ, ಅವನು ಸಾಧು ಸಜ್ಜನರನ್ನು ಹಿಂಸಿಸದೆ ಬಿಡಲಾರನೆಂದು ಊಹಿಸಿ, ಅವನ ತಪಸ್ಸನ್ನು ಕೆಡಿಸುವ ಯೋಜನೆಗೆ ತೊಡಗಿದರು.





ದೇವತೆಗಳಲ್ಲಿ ಒಬ್ಬನು ಗಯಾಸುರನ ಸಮೀಪ ಬಂದು, "ನನಗೆ ಬಹಳ ಆಯಾಸವಾಗಿದೆ. ನಿನ್ನ ಭುಜದ ಮೇಲೆ ವಿಶ್ರಮಿಸಿಕೊಳ್ಳುತ್ತೇನೆ" ಎಂದನು. ಅದಕ್ಕೆ ಸಂತೋಷದಿಂದ ಒಪ್ಪಿದನು ಗಯಾಸುರ. ಆ ದೇವನು ಅವನ ಭುಜದ ಮೇಲೆ ಹತ್ತಿ ಕುಳಿತನು.



ಆಮೇಲೆ ಉಳಿದ ದೇವತೆಗಳೆಲ್ಲರೂ, ಮೊದಲನೇ ದೇವನ ಹಾಗೆಯೇ ಗಯಾಸುರನನ್ನು ಸಮೀಪಿಸಿ ತಮ್ಮ ಅಪೇಕ್ಷೆಗಳನ್ನು ಹೇಳಿದರು. ಗಯಾಸುರನು ಸಂತೋಷದಿಂದ ತನ್ನ ದೇಹವನ್ನು ಬೆಳೆಸಿ ದೇವತೆಗಳೆಲ್ಲರಿಗೂ ಭುಜಗಳ ಮೇಲೆಯೂ, ಕೈಗಳ ಮೇಲೆಯೂ, ಮಡಿಲಲ್ಲಿಯೂ ಸ್ಥಾನ ಕಲ್ಪಿಸಿಕೊಟ್ಟನು. ಸ್ವಲ್ಪ ಹೊತ್ತಿಗೆ ದೇವತೆಗಳು ಅವನನ್ನು ಕ್ರಮವಾಗಿ ನೆಲಕ್ಕೆ ಒತ್ತಲು ಪ್ರಾರಂಭಿಸಿದರು.

ದೇವತೆಗಳ ಉದ್ದೇಶವೇನೆಂದು ಗಯಾಸುರನಿಗೆ ಗೊತ್ತಾಯಿತು. ವಿಷ್ಣುವಿನ ಮೇಲಿರುವ ಅಚಂಚಲವಾದ ಭಕ್ತಿಯ ಕಾರಣದಿಂದ, ಅವನು ಅವರೆಲ್ಲರನ್ನೂ ವಿನಯದಿಂದ ನೋಡುತ್ತ "ದೇವತೆಗಳಿರಾ! ನಿಮ್ಮ ಅಭಿಪ್ರಾಯದ ಪ್ರಕಾರ ನಾನು ಭೂಮಿಯೊಳಗೆ ಹೋಗಿಬಿಡುತ್ತೇನೆ. ಆದರೆ ನೀವು ನನ್ನನ್ನು ಎಂದಿಗೂ ಬಿಡದೆ ಇರುತ್ತೇವೆಂದು ಮಾತು ಕೊಡಬೇಕು" ಎಂದನು. ದೇವತೆಗಳು ಹಾಗೆಯೇ ಆಗಲಿ ಎಂದರು. ಗಯಾಸುರನು ಪೂರ್ತಿಯಾಗಿ ಭೂಮಿಯೊಳಗೆ ಹೂತುಹೋದನು.





ಆ ಸ್ಥಳದಲ್ಲಿಯೇ ಬ್ರಹ್ಮದೇವನು ಯಜ್ಞ ಮಾಡಿದನು. ದೇವತೆಗಳೊಂದಿಗೆ ಗಯಾಸುರನು ಅಲ್ಲಿ ಭೂಗತನಾಗಿದ್ದುದರಿಂದ ಅವನ ಭಕ್ತಿಗೂ, ವಿನಯಕ್ಕೂ ಮುಗ್ಧನಾದ ವಿಷ್ಣು, ಅಲ್ಲಿ ಪ್ರತ್ಯಕ್ಷನಾಗಿ ಗಯಾಸುರನ ಆತ್ಮವನ್ನೂ, ಆ ಸ್ಥಳವನ್ನೂ ಆಶೀರ್ವಾದ ಮಾಡಿದನು.

ವಿಷ್ಣು ಪ್ರತ್ಯಕ್ಷನಾದ ಆ ಸ್ಥಳದಲ್ಲಿ ವಿಷ್ಣುವಿನ ಪಾದಪದ್ಮಗಳ ಗುರುತುಗಳು ಏರ್ಪಟ್ಟುವು. ಪ್ರಸ್ತುತ ಇಲ್ಲಿ ಬೆಳಗುವ ವಿಷ್ಣುಪಾದ ಮಂದಿರವನ್ನು ಇಂದೋರನ್ನು ಪರಿಪಾಲಿಸಿದ ರಾಣಿ ಅಹಲ್ಯಾಬಾಯಿ ನಿರ್ಮಿಸಿದಳು.






ಗಯಾಕ್ಷೇತ್ರವೆಂದು ಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ಪಿತೃ ಕಾರ್ಯಗಳನ್ನು ನೆರವೇರಿಸುತ್ತಾರೆ. ಸುತ್ತುಮುತ್ತಲಿನಿಂದ ದಿನಾ ಅಸಂಖ್ಯಾಕ ಜನರು ಬಂದು ಪಿತೃ ದೇವತೆಗಳ ಪ್ರೀತಿಗಾಗಿ ತರ್ಪಣಾದಿ ಕೃತ್ಯಗಳನ್ನು ಆಚರಿಸುತ್ತಾರೆ.

ದಿವ್ಯಾತ್ಮಗಳ ಮಿಲನವಾದ ಫಲ್ಗು ನದಿ ಈ ಪ್ರದೇಶದಲ್ಲಿ ಅದೃಶ್ಯವಾದ ಅಂತರ್ವಾಹಿನಿಯಾಗಿ ಪ್ರವಹಿಸುತ್ತದೆ. ಭಕ್ತರು ನೆಲವನ್ನು ಅಗೆದರೆ ಕೂಡಲೇ ನೀರು ಒಸರುತ್ತದೆ. ಈ ಜಲವನ್ನು ಅತ್ಯಂತ ಮಹಿಮಾನ್ವಿತವೆಂದು ಭಕ್ತರು ವಿಶ್ವಸಿಸುತ್ತಾರೆ.





ಗೌತಮ ಬುದ್ಧನು ಆಲದ ಮರದ ಕೆಳಗೆ ಧ್ಯಾನಮಗ್ನನಾಗಿ ಜ್ಞಾನಸಿದ್ಧಿ ಪಡೆದ ಬುದ್ಧ ಗಯಾ ಕ್ಷೇತ್ರವು, ಗಯೆಗೆ ಹದಿನಾಲ್ಕು ಕಿಲೋ ಮೀಟರ್ ದೂರದಲ್ಲಿದೆ. ಬುದ್ಧನಿಗೆ ನೆರಳು ಕೊಟ್ಟ ವಟವೃಕ್ಷದಿಂದ ಹುಟ್ಟಿದ ನೂರು ಸಂವತ್ಸರಗಳ ಹಿಂದಿನ ವಟವೃಕ್ಷವು ಈಗಲೂ ಇಲ್ಲಿ ನಿಂತಿದೆ.

ಇಲ್ಲಿ ಮಹಾದೇವಿಯ ಆಲಯವು ವಿಲಕ್ಷಣ ವಾದ ಬೌದ್ಧ ಶಿಲ್ಪ ಕಳೆಗೆ ಉದಾಹರಣೆಯಾಗಿ ಬೆಳಗಿಕೊಂಡಿದೆ. ಈ ಆಲಯದ ಮುಖದ್ವಾರವು ಅದ್ಭುತವಾದ ಶಿಲ್ಪಗಳಿಂದ ರಾಜಿಸುತ್ತದೆ. ಈ ಗುಡಿಯಲ್ಲಿ ಬಂಗಾರದ ರೇಕುಗಳಿಂದ ಹೊದುಗಿಸಲ್ಪಟ್ಟ ಬುದ್ಧನ ವಿಗ್ರಹವಿದೆ. ಈ ದೇವಾಲಯವು ಅನೇಕ ಶತಮಾನಗಳಿಂದ ದೇಶ ವಿದೇಶಗಳ ಭಕ್ತರನ್ನು ಆಕರ್ಷಿಸುತ್ತದೆ.






ಜ್ಞಾನಸಿದ್ಧಿಯ ಅನಂತರ ಬುದ್ಧನು ಎದ್ದು, ತುಂಬಿದ ಕೃತಜ್ಞತೆಯಿಂದ ದೂರದ ತೀರಗಳ ಕಡೆಗೆ ನೋಡುತ್ತಾ ನಿಂತ, ಅನಿಮೇಷಲೋಚನ ಚೈತ್ಯ ಮಹಾಬೋಧಿ ಎಂಬ ಪವಿತ್ರ ಸ್ಥಳವು ಈ ಆಲಯದ ಸಮೀಪದಲ್ಲಿಯೇ ಇದೆ.




ನಮ್ಮ ದೇವಾಲಯಗಳು :

## ಚಾಮುಂಡೇಶ್ವರಿ

ಒಂದಾನೊಂದು ಕಾಲದಲ್ಲಿ ಬಹು ಭಯಂಕರನಾದ ಮಹಿಷಾಸುರನೆಂಬ ರಾಕ್ಷಸನು ವಿಜೃಂಭಿಸಿ, ಕ್ರಮಕ್ರಮವಾಗಿ ಮೂರು ಲೋಕಗಳನ್ನೂ ಜಯಿಸಿಕೊಂಡು ಹೋದನು.

ದೇವತೆಗಳು ಅವನೊಂದಿಗೆ ಎಷ್ಟೋ ಸಾರಿ ಯುದ್ಧ ಮಾಡಿದರು. ಆದರೆ ಪ್ರತಿಸಾರಿಯೂ ಮಹಿಷಾಸುರನೇ ಜಯಿಸುತ್ತಿದ್ದನು. ಅವನ ದಾರುಣ ಕೃತ್ಯಗಳಿಂದ ಭೂಲೋಕವು ಗಡಗಡ ನಡುಗಿಕೊಂಡಿದ್ದಿತು. ಅವನು ದಿನದಿಂದ ದಿನಕ್ಕೆ ಗರ್ವದಿಂದ ಹೆಚ್ಚಳಿಸಿಕೊಂಡೇ ಇದ್ದನು.





ಆ ರಾಕ್ಷಸನ ಪೀಡೆಯನ್ನು ಪರಿಹರಿಸಬೇಕೆಂದು ದೇವತೆಗಳೆಲ್ಲಾ ವಿಷ್ಣುವನ್ನು ಪ್ರಾರ್ಥಿಸಿಕೊಂಡರು. ವಿಷ್ಣು ಒಂದು ಯಜ್ಞ ಮಾಡುವಂತೆ ಅವರೊಂದಿಗೆ ಹೇಳಿದನು. ಅದರಂತೆ ದೇವತೆಗಳು ಯಜ್ಞ ಮಾಡಿ ಯಜ್ಞ ಕುಂಡದ ಸುತ್ತಲೂ ಕುಳಿತು ಪ್ರಾರ್ಥನೆ ಮಾಡತೊಡಗಿದರು. ಅವರ ಪ್ರಾರ್ಥನೆ ಫಲಿಸಿತು. ಯಜ್ಞ ಕುಂಡದಿಂದ ದುರ್ಗಾದೇವಿ ಪ್ರತ್ಯಕ್ಷಳಾದಳು.



ಶಿವನು ತನ್ನ ಶೂಲವನ್ನು ದುರ್ಗಾದೇವಿಗೆ ಪ್ರಸಾದಿಸಿದನು. ಇಂದ್ರನು ವಜ್ರಾಯುಧವನ್ನು ಕೊಟ್ಟನು. ಹಾಗೆಯೇ ಹಲವು ದೇವತೆಗಳಿಂದ ದುರ್ಗಾದೇವಿ ಹಲವು ವಿಧಗಳ ಆಯುಧಗಳನ್ನೂ, ಶಕ್ತಿಗಳನ್ನೂ ಗ್ರಹಿಸಿ, ಅದ್ಭುತವಾದ ಸಿಂಹವನ್ನು ಅಧಿರೋಹಿಸಿ ವಿಂಧ್ಯ ಪರ್ವತಗಳ ಕಡೆಗೆ ಪ್ರಯಾಣ ಮಾಡಿದಳು.

ದುರ್ಗಾದೇವಿಯ ಗಂಭೀರವಾದ ಸೌಂದರ್ಯದ ವರ್ಣನೆಯನ್ನು ಕೇಳಿದ ಮಹಿಷಾಸುರನು, ಅವಳನ್ನು ದೂರದಿಂದ ನೋಡಿ, ಆ ದಿವ್ಯ ಸೌಂದರ್ಯಕ್ಕೆ ಮುಗ್ಧನಾಗಿ ತನ್ನನ್ನು ವರಿಸಿಕೊಳ್ಳುವಂತೆ ಅವಳಿಗೆ ಸಂದೇಶ ಕಳುಹಿಸಿದನು. ಅದಕ್ಕೆ ಅವಳು ನಿರಾಕರಣೆ ತೋರಿಸಲು, ಅವನಿಗೆ ಕೋಪ ಬಂದಿತು.





ಮಹಿಷಾಸುರನ ಅನುಚರರು ದುರ್ಗಾದೇವಿಯ ಬೆಂಬತ್ತಿ ಅವಳನ್ನು ಹಿಡಿಯಲು ನೋಡಿದರು. ಆಗ ಅವಳ ಪೆಟ್ಟಿನಿಂದ ಅವರೆಲ್ಲಾ ಹತರಾದರು. ಕೊನೆಗೆ ಮಹಿಷಾಸುರನೇ ಅವಳನ್ನು ಇದಿರಿಸಿದನು. ದುರ್ಗಾದೇವಿ ಲೋಕ ಕಂಟಕನಾದ ಮಹಿಷಾಸುರನನ್ನು ಸಂಹಾರ ಮಾಡಿದಳು, ಅದರಿಂದ ಲೋಕ ಕಲ್ಯಾಣವಾಯಿತು.

ಮಹಿಷಾಸುರನ ಸಂಹಾರವಾದ ಮೇಲೆ ದುರ್ಗಾ ದೇವಿ ಸುಂದರವಾದೊಂದು ಗುಡ್ಡದ ಮೇಲೆ ವಿಶ್ರಾಂತಿ ಪಡೆದಳು. ಅದರಿಂದ ಆ ಗುಡ್ಡವು ಪವಿತ್ರವಾದುದೆಂದು ಭಾವಿಸಲ್ಪಟ್ಟಿತು.





ಮೈಸೂರು ನಗರಕ್ಕೆ ಹದಿಮೂರು ಕಿಲೋ ಮೀಟರ್ ದೂರದಲ್ಲಿ ಚಾಮುಂಡಿ ಪರ್ವತ ವೆಂದು ಹೆಸರು ಪಡೆದ ಈ ಗುಡ್ಡದ ಮೇಲೆಯೇ ಲೋಕಮಾತೆಯಾದ ದುರ್ಗಾದೇವಿ ಚಾಮುಂಡೇಶ್ವರಿಯ ಆಲಯವು ಬೆಳಗಿ ಕೊಂಡಿದೆ.

ಸಮುದ್ರಮಟ್ಟಕ್ಕೆ ೩,೪೮೯ ಅಡಿಗಳಷ್ಟು ಎತ್ತರ ವಾದ ಈ ದಿವ್ಯಕ್ಷೇತ್ರವನ್ನು ತಲಪಬೇಕಾದರೆ ಸಾವಿರ ಮೆಟ್ಟಿಲುಗಳನ್ನು ಹತ್ತಿ ನಡೆಯಬೇಕು. ಚಾಮುಂಡೀ ಪರ್ವತದ ಮೇಲೆಯೇ ಮಹಾ ಬಲೇಶ್ವರವೆಂಬ ಶಿವಾಲಯವೂ ಇದೆ.





ಗುಡ್ಡದ ಶಿಖರಕ್ಕೆ ಹೋಗುವ ದಾರಿಯಲ್ಲಿ ಬೃಹ್ಮಾಂಡವಾದೊಂದು ನಂದಿಯ ವಿಗ್ರಹವಿದೆ. ಒಂದೇ ಶಿಲೆಯಲ್ಲಿ ಕೆತ್ತಲ್ಪಟ್ಟ ಈ ನಂದಿ ವಿಗ್ರಹದ ಕೊರಳಿನ ಸುತ್ತಲೂ ಕೆತ್ತಲಾದ ಗಂಟೆಗಳು ಅಚ್ಚಲೋಹದ ಗಂಟೆಗಳಂತೆಯೇ ಕಂಡು ಆಶ್ಚರ್ಯಪಡಿಸುತ್ತದೆ.

ಆಲಯದೊಳಗಿನ ದೇವಿಯ ವಿಗ್ರಹವು, ಸ್ವರ್ಣಮಯ ಸಿಂಹಾಸನಾರೂಢಳಾಗಿ ದಿವ್ಯಾಕರ್ಷಣೆಯಿಂದ ಬೆಳಗುತ್ತಿದೆ. ಆಲಯದ ಪರಿಸರ ಪ್ರಾಂತಗಳು ಸುಂದರ ಪ್ರಕೃತಿ ದೃಶ್ಯಗಳಿಂದ ಕಣ್ಮನಗಳಿಗೆ ಹಬ್ಬವನ್ನುಂಟುಮಾಡುತ್ತವೆ.





ಆ ಗುಡ್ಡದ ಶಿಖರವನ್ನು ಸೇರಲು ಸದುಪಾಯಗಳೇನಿಲ್ಲದ ಪೂರ್ವಕಾಲದಲ್ಲಿ ಕೂಡಾ ಭಕ್ತರು ತಂಡೋಪತಂಡವಾಗಿ ಹೋಗಿಬರುತ್ತಿದ್ದರು. ಈಗ ಹೋಗಿಬರಲು ಸುಲಭವಾಗಿದೆ ಇಲ್ಲಿ ಪ್ರತಿ ವರ್ಷವೂ ನಡೆಯುವ ನವರಾತ್ರಿಯ ಉತ್ಸವಕ್ಕೆ ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ಅಸಂಖ್ಯಾಕರಾಗಿ ಬರುತ್ತಿರುವರು.